# ಮಹಿಳಾ ದಶಕದ ಲೇಖಕಿಯರ ಕಥನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ
ಉಮ ಎಚ್.ಎಂ.



ಮಾರ್ಗದರ್ಶಕರು
ಡಾ.ಶಿವಾನಂದ ಎಸ್.ವಿರಕ್ತಮಠ
ಪ್ರಾಧ್ಯಾಪಕರು



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಮಹಿಳಾ ದಶಕದ ಲೇಖಕಿಯರ ಕಥನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ

ಉಮ ಎಚ್.ಎಂ.

ಮಾರ್ಗದರ್ಶಕರು

ಡಾ.ಶಿವಾನಂದ ಎಸ್.ವಿರಕ್ತಮಠ

ಪ್ರಾಧ್ಯಾಪಕರು



ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

**ಉಮ ಎಚ್.ಎಂ.** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಮಹಿಳಾ ದಶಕದ ಲೇಖಕಿಯರ ಕಥನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಮಹಿಳಾ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಶಿವಾನಂದ ಎಸ್.ವಿರಕ್ತಮಠ**
ಪ್ರಾಧ್ಯಾಪಕರು
**ಮಹಿಳಾ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ಸ್ಥಳ:** ಹಂಪಿ
**ದಿನಾಂಕ:** [illegible]/19

# ಸಂಶೋಧಕರ ಪ್ರಮಾಣ ಪತ್ರ

**ಮಹಿಳಾ ದಶಕದ ಲೇಖಕಿಯರ ಕಥನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯುಕ್ಕೆ ಪ್ರಾಧ್ಯಾಪಕರಾದ **ಡಾ.ಶಿವಾನಂದ ಎಸ್.ವಿರಕ್ತಮಠ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಉಮ ಎಚ್.ಎಂ.**
ಸಂಶೋಧನ ವಿದ್ಯಾರ್ಥಿನಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: ೬।೬।೧೮

# ಪರಿವಿಡಿ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಹಾಗೂ ಸ್ವರೂಪ

೧.೧. ಪೀಠಿಕೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವೈಧಾನಿಕತೆ

೧.೫. ಅಧ್ಯಯನದ ಸ್ವರೂಪ

೧.೬. ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಹಾಗೂ ಸ್ವರೂಪ

### ೧.೧. ಪೀಠಿಕೆ

ಸ್ತ್ರೀವಾದ ಒಂದು ಜ್ಞಾನ ಶಿಸ್ತಾಗಿ ಇಂದು ಹಲವು ವಿಶ್ವವಿದ್ಯಾಲಯಗಳಲ್ಲಿ ನೂರಾರು ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿರುವ ಕ್ಷೇತ್ರವಾಗಿದೆ. ಯಾವುದೇ ಸಿದ್ಧಾಂತ ಒಬ್ಬ ವ್ಯಕ್ತಿಯಿಂದ ಒಂದೆರಡು ದಿನಗಳಲ್ಲಿ ಪೂರ್ಣ ರೂಪಗಳನ್ನು ಪಡೆಯಲಾರದು. ಅನೇಕ ಜನರ ದೀರ್ಘಕಾಲದ ಪರಿಶ್ರಮದ ಫಲಿತವಾಗಿ ಮೂಡಿಬಂದ ಆಲೋಚನಾ ವಿಧಾನಗಳು ಬದುಕನ್ನು ನೋಡುವ ಹಾಗೂ ವಿಶ್ಲೇಷಿಸುವ ದೃಷ್ಟಿಯನ್ನೇ ಬದಲಾಯಿಸುತ್ತವೆ. ಅದರಂತೆ ಸ್ತ್ರೀವಾದವು ಇಂದಿನ ಪ್ರಬುದ್ಧ ನೆಲೆಯನ್ನು ತಲುಪುವ ಮೊದಲು ಕೆಲವು ಪ್ರಮುಖ ಹಂತಗಳನ್ನು ದಾಟಿ ಬಂದಿದೆ.

ಸಮಾಜದಲ್ಲಿ ಮಹಿಳೆಯ ಸ್ಥಾನಮಾನ, ಸ್ಥಿತಿಗತಿ, ಹಕ್ಕು ಭಾಧ್ಯತೆಗಳನ್ನು ಕುರಿತು ಚಿಂತಿಸುವ ಪ್ರಧಾನ ಆಶಯವನ್ನು ಸ್ತ್ರೀವಾದ ಹೊಂದಿದೆ. ಹಾಗೆಯೇ ಹೆಣ್ಣಿನ ವಿಶಿಷ್ಟ ಅನುಭವಗಳು, ಸಮಸ್ಯೆ ಸಂದರ್ಭಗಳನ್ನು ಕುರಿತಂತೆ ಸಹ ಚರ್ಚಿಸುತ್ತದೆ. ಮಹಿಳೆಯ ವ್ಯಕ್ತಿಗತ ಬದುಕಿನ ಬಗೆಗೆ ಗೌರವ ತೋರಿಸುವ ಅಥವಾ ತಂದು ಕೊಡುವ ಉದ್ದೇಶ ಸ್ತ್ರೀವಾದದ್ದಾಗಿದೆ. ಹೆಣ್ಣಿನ ಬದುಕನ್ನು ಕೇಂದ್ರವಾಗಿಟ್ಟುಕೊಂಡು ಆಕೆಯ ಹೊರ ಜಗತ್ತಿನ ವಿವರಗಳೊಂದಿಗೆ ಖಾಸಗಿ ವಿಚಾರಗಳನ್ನು ಸಹ ತನ್ನ ಅಧ್ಯಯನದ ಚೌಕಟ್ಟಿಗೆ ಸೇರಿಸಿಕೊಂಡಿದೆ.

ಈ ಮೊದಲು ಪುರುಷ ವ್ಯವಸ್ಥೆಯ ಮೌಲ್ಯಗಳು ಮತ್ತು ಸಾಮಾಜಿಕ ಕಟ್ಟುಪಾಡುಗಳ ಮಧ್ಯೆ ತನ್ನ ಅಸ್ತಿತ್ವವನ್ನು ಕಳೆದುಕೊಂಡ ಸ್ಥಿತಿ ಮಹಿಳೆಯರದಾಗಿತ್ತು. ಹೀಗಿರುವಾಗ ಎಚ್ಚೆತ್ತ ಮಹಿಳೆಯರು ತಮ್ಮ ಆಶಯಗಳ ಪರವಾಗಿ, ಶೋಷಣೆಗೆ ವಿರುದ್ಧವಾಗಿ ಹಲವಾರು ಚಳುವಳಿಗಳಲ್ಲಿ ತಮ್ಮನ್ನು ಗುರುತಿಸಿಕೊಂಡರು. ಹೀಗಾಗಿ ೧೨ನೇ ಶತಮಾನದ ವಚನ ಚಳುವಳಿಯಿಂದ ಹಿಡಿದು

ಇತ್ತೀಚಿನವರೆಗೂ ಮಹಿಳಾ ಸಮಾನತೆ, ಪ್ರಾಧಾನ್ಯತೆಗಳಿಗಾಗಿ ಮುನ್ನೆಲೆಗೆ ಬಂದ ಅನೇಕ ಹೋರಾಟಗಳು ಜಾಗತಿಕ ವಿದ್ಯಮಾನಗಳಾಗಿ ದಾಖಲಾಗಿವೆ.

ಇಂತಹ ಪ್ರಮುಖ ಹಂತಗಳಲ್ಲಿ 'ಅಂತರಾಷ್ಟ್ರೀಯ ಮಹಿಳಾ ದಶಕ' ವೂ ಒಂದಾಗಿದೆ. ಪ್ರಸ್ತುತ ಅವಧಿಯಲ್ಲಿ ಮಹಿಳೆಯರ ವಿವಿಧ ಬೇಡಿಕೆ, ಹಕ್ಕೊತ್ತಾಯಗಳಿಗಾಗಿ ಅನೇಕ ಜಾಗತಿಕ ಚಳುವಳಿಗಳು ನಡೆದವು. ಮಹಿಳಾ ಸಮುದಾಯವನ್ನು ಮುಖ್ಯವಾಹಿನಿಗೆ ತರುವ ಸಾಂಘಿಕ ಪ್ರಯತ್ನ ಈ ದಶಕದಲ್ಲಿ ನಡೆಯಿತು. ಈ ಕಾರಣದಿಂದಲೆ ವೈಯಕ್ತಿಕ ನೆಲೆಯಲ್ಲಿದ್ದ ಸ್ತ್ರೀವಾದಿ ವೈಚಾರಿಕತೆ ಸಾಮೂಹಿಕ ನೆಲೆಯತ್ತ ವಾಲುತ್ತಲೇ ಆಂದೋಲನದ ಸ್ವರೂಪ ಪಡೆದುಕೊಂಡಿತು.

ಇದೇ ಸಂದರ್ಭಕ್ಕೆ ಈ ಬಗೆಯ ಚಳುವಳಿಗಳ ಪ್ರಭಾವದಿಂದ ಸಾಹಿತ್ಯ ಕ್ಷೇತ್ರವೂ ಹೊರತಾಗಿರಲಿಲ್ಲ. ಹಾಗಾಗಿ ಮಹಿಳೆಯರು ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶ ಪಡೆದು, ಸಾಹಿತ್ಯ ರಚನೆಗೆ ತೊಡಗಿಕೊಂಡ ಸಮಯ, ಸನ್ನಿವೇಶಗಳು ಕಾಲದಿಂದ ಕಾಲಕ್ಕೆ ಬಂದ ಲೇಖಕಿಯರ ಕೃತಿ, ಅವುಗಳಲ್ಲಿ ಪ್ರಚುರಪಡಿಸಿದ ಚಿಂತನೆಗಳನ್ನು ಭಿನ್ನವಾಗಿಸಿದವು.

ಈ ಹಿನ್ನೆಲೆಯಲ್ಲಿ ಸ್ತ್ರೀವಾದಕ್ಕೆ ಪೂರಕವಾಗಿ ಹೊರಬಂದ ಪರ –ವಿರೋಧದ ವಿಚಾರಗಳು ಆಯಾ ಕಾಲಮಾನದಲ್ಲಿ ಸಾಹಿತ್ಯ ರಚನೆಗೆ ತೊಡಗಿದ್ದ ಲೇಖಕಿಯರ ಹಾಗೂ ಲೇಖಕರ ಬರವಣಿಗೆಯ ವಸ್ತು– ವಿಚಾರವಾಗಿ ಚರ್ಚೆಯಾಗಿವೆ. ಇದೇ ಹಾದಿಯಲ್ಲಿ ಕನ್ನಡ ಲೇಖಕಿಯರ ಕಥನ ಸಾಹಿತ್ಯದ ಅಧ್ಯಯನಕ್ಕೆ ತೊಡಗಿದಾಗ ಒಂದು ಹಂತದಲ್ಲಿ ಸಂಭವಿಸಿದ ಪರಿವರ್ತನೆ ಮತ್ತು ಸಾಧನೆಗಳನ್ನು ದಾಖಲಿಸಲು ಅನುಕೂಲವಾಗುವಂತೆ 'ಅಂತರಾಷ್ಟ್ರೀಯ ಮಹಿಳಾ ದಶಕದ' (೧೯೭೫ ರಿಂದ ೧೯೮೫ ರವರೆಗೆ) ಅವಧಿಯಲ್ಲಿನ ಕೆಲವು ಪ್ರಾತಿನಿಧಿಕ ಲೇಖಕಿಯರ ಕಥಾಸಾಹಿತ್ಯವನ್ನು ಸಂಶೋಧನೆಗೆ ಆಯ್ದುಕೊಳ್ಳಲಾಗಿದೆ.

ಮಹಿಳೆಯರು ಬರವಣಿಗೆಯಲ್ಲಿ ಸಕ್ರಿಯರಾದ ಆರಂಭಿಕ ದಿನಮಾನಗಳಿಂದ ಸರಿಸುಮಾರು ೧೯೭೫ ರ ವರೆಗಿನ ಮಹಿಳಾ ಸಾಹಿತ್ಯಕ್ಕೆ 'ಅಡುಗೆ ಮನೆ ಸಾಹಿತ್ಯ' ಎಂಬ ಹಣೆಪಟ್ಟಿಯನ್ನು ಕಟ್ಟಲಾಗಿತ್ತು. ಆದರೆ, ಮುಂದಿನ ದಿನಮಾನಗಳಲ್ಲಿ ಜಾಗತಿಕವಾಗಿ, ಸ್ಥಳೀಯವಾಗಿ ನಡೆದ ಹಲವಾರು ವಿದ್ಯಮಾನಗಳು, ಚಳುವಳಿಗಳು ಮಹಿಳಾ ಲೇಖಕಿಯರ ನಿಲುವನ್ನು ಬದಲಿಸಿದ್ದು ವಿಶೇಷ.

ಸಾಹಿತ್ಯ ಕ್ಷೇತ್ರದಲ್ಲಿಯೂ ಸಹ ಬಹುತೇಕ ಮಹಿಳೆ ಮತ್ತು ಆಕೆಯ ಕುರಿತಾದ ವಿಷಯಗಳನ್ನು ಅದುವರೆಗೂ ಪುರುಷ ವ್ಯವಸ್ಥೆ ರೂಪಿಸಿದ ಮೌಲ್ಯಗಳಿಂದಲೇ ನಿರ್ವಚಿಸಲಾಗುತ್ತಿತ್ತು. ಅತಿ ವೈಭವೀಕರಣ, ನಕಾರಾತ್ಮಕ ಗುಣಗಳು, ದುರಂತದಂತಹ ಚಿತ್ರಣಗಳನ್ನೇ ಹೆಚ್ಚಾಗಿ ಕೃತಿಗಳಲ್ಲಿ ಚಿತ್ರಿಸಲಾಗುತ್ತಿತ್ತು. ಎಚ್.ಎಸ್.ಶ್ರೀಮತಿ ಅವರು ಹೇಳುವಂತೆ "ಪುರುಷ ಗ್ರಹಿಕೆಗಳ ಪರಿಸರದಲ್ಲಿಯೇ

ಸಾಹಿತ್ಯದ ಅಸ್ತಿತ್ವವಿರುವುದು; ಎಷ್ಟೋ ವೇಳೆ ಲೇಖಕಿಯರು ಕೂಡ ಈ ಗ್ರಹಿಕೆಗಳನ್ನು ತಮ್ಮದೆಂದು ನಂಬಿರುತ್ತಾರೆ." ಹೀಗಾಗಿ ಆರಂಭದಲ್ಲಿ ಬಹುತೇಕ ಓದುಗ ವಲಯ ಮತ್ತು ಸಮಕಾಲೀನ ಲೇಖಕಿಯರು ಸಹ ಪಿತೃಪ್ರಧಾನ ವ್ಯವಸ್ಥೆಯ ಈ ಇಬ್ಬಗೆಯ ನೀತಿಯನ್ನು ಅನುಕರಣಾತ್ಮಕ ಮಾದರಿಯಾಗಿ ತೆಗೆದುಕೊಂಡರು.

ಈ ಮಾತುಗಳಿಗೆ ಪೂರಕವಾಗುವಂತೆ ಈ ವರೆಗಿನ ಸಾಹಿತ್ಯ(ವಿಶೇಷವಾಗಿ ಕಥೆ– ಕಾದಂಬರಿಗಳು) ಮತ್ತು ಅಲ್ಲಿನ ಸ್ತ್ರೀ ಪಾತ್ರಗಳ ಚಿತ್ರಣದಲ್ಲಿ ಇಂತದ್ದೊಂದು ತಾರತಮ್ಯಗಳನ್ನು ಗುರುತಿಸಲು ಸಾಧ್ಯವಿದೆ. ಹಾಗೆಯೇ ವಾಸ್ತವದಲ್ಲಿ ಸಹ ಪ್ರತಿಯೊಂದು ಕ್ಷೇತ್ರದಲ್ಲಿಯೂ ಮಹಿಳೆಯ ಮೇಲೆ ಪುರುಷ ಮತ್ತು ಆತನ ಅಸ್ತಿತ್ವದ ಪ್ರಭಾವವೇ ಎದ್ದು ತೋರುತ್ತದೆ. ಇಂತಹ ಪ್ರಭಾವವನ್ನು ವಿರೋಧಿಸಿಯೇ ಅನೇಕ ಮಹಿಳಾ ಚಳುವಳಿಗಳು ಮುನ್ನೆಲೆಗೆ ಬಂದಿವೆ.

ಆದ್ದರಿಂದ ಈ ಮಹಾಪ್ರಬಂಧವು ಜಾಗತಿಕವಾಗಿ 'ಮಹಿಳಾ ದಶಕ' ವೆಂದು ಕರೆಸಿಕೊಂಡು, ಕ್ರಾಂತಿಯ ನೆಲೆಯಲ್ಲಿ ಕಾಣಿಸಿಕೊಳ್ಳುವ ಕಾಲಮಾನ, ಇದಕ್ಕೆ ಹಿನ್ನಲೆಯಾದ ಮಹಿಳಾ ಚಳುವಳಿಗಳ ಹಿನ್ನೋಟವನ್ನು ದಾಖಲಿಸುತ್ತದೆ. ನಂತರ ಈ ವಿದ್ಯಮಾನಗಳನ್ನು ಅನ್ವಯಿಸಿ ಲೇಖಕಿಯರ ವ್ಯಕ್ತಿಗತ ಪರಿಸರ, ವೈಚಾರಿಕ ಹಿನ್ನೆಲೆಗಳ ಪ್ರಭಾವವನ್ನು ಅವರ ಕಥನಗಳಲ್ಲಿ ಗುರುತಿಸಿ ಶೋಧಿಸುವ ದೃಷ್ಟಿಕೋನ ಹೊಂದಿದೆ. ಹಾಗೆಯೇ ಸಾಹಿತ್ಯ ಮತ್ತು ಅದರ ವಲಯಗಳನ್ನು ಗ್ರಹಿಸಬಹುದಾದ ಎರಡು ಪ್ರಧಾನ ಮಾದರಿಗಳಿವೆ. ಮೊದಲಿಗೆ ಸ್ತ್ರೀಲೋಕವನ್ನು ಲೇಖಕಿಯರು ಗ್ರಹಿಸುವ ಬಗೆ ಒಂದಾದರೆ, ಇದನ್ನೇ ಲೇಖಕರು ಗ್ರಹಿಸುವ ಬಗೆ ಮತ್ತೊಂದು. ಇವುಗಳಲ್ಲಿ ಪ್ರಸ್ತುತ ಅಧ್ಯಯನ ಮೊದಲ ಮಾದರಿಯದ್ದಾಗಿದೆ.

## ೧.೨. ಅಧ್ಯಯನದ ಉದ್ದೇಶ

* 'ಅಂತರಾಷ್ಟ್ರೀಯ ಮಹಿಳಾ ದಶಕ' ಎಂದರೆ ಯಾವುದು? ಅದರ ಹಿನ್ನಲೆ? ಮಹತ್ವ? ಇತ್ಯಾದಿಗಳು ಈಗಾಗಲೇ ಚಾರಿತ್ರಿಕವಾಗಿ ನಿರ್ವಚನೆಗೆ ಒಳಗಾಗಿರುವ ಅಂಶಗಳಾಗಿವೆ. ಮೊದಲಿಗೆ ಈ ದಶಕದ ಪ್ರಭಾವದಲ್ಲಿ ಆಗಿನ ಲೇಖಕಿಯರ ಕಥೆ– ಕಾದಂಬರಿಗಳು ರಚನೆಯಾಗಿವೆ ಎಂಬ ಮೇಲ್‌ಸ್ತರದ ಗ್ರಹಿಕೆಯಿಂದ ಪ್ರಸ್ತುತ ಅಧ್ಯಯನ ಆರಂಭವಾಗುತ್ತದೆ. ಪರೋಕ್ಷವಾಗಿಯಾದರೂ ಮಹಿಳಾ ದಶಕ ಅಂದಿನ ಲೇಖಕಿಯರ ಬರವಣಿಗೆಯನ್ನು ಪ್ರಭಾವಿಸಿದೆ. ಅದೇ ರೀತಿ ಭಿನ್ನ ವಿಚಾರಗಳನ್ನು ಮತ್ತು ಸ್ತ್ರೀಪರ ಕಾಳಜಿಗಳನ್ನು ಅಭಿವ್ಯಕ್ತಿಗೊಳಿಸಲು ಸಾಧ್ಯವಾಗಿಸಿದೆ ಎಂಬುದನ್ನು ಶೋಧಿಸುವ ಕಾರ್ಯ ಈ ಅಧ್ಯಯನದ ಮೂಲಕ ಆಗಬೇಕೆಂಬುದು ಪ್ರಮುಖ ಉದ್ದೇಶವಾಗಿದೆ.

* ಪ್ರಸ್ತುತ ಅವಧಿಯನ್ನು ಆಯ್ಕೆಮಾಡಿಕೊಳ್ಳುವಲ್ಲಿ ಸಕಾರಣವೂ ಇದೆ. ಈ ಅವಧಿಯಲ್ಲಿ ಮಹಿಳೆಯರ ಸ್ಥಾನ- ಮಾನ, ಹಕ್ಕು ಬಾಧ್ಯತೆಗಳಿಗೆ ಮಾನ್ಯತೆ ಹೆಚ್ಚಾದದ್ದಲ್ಲದೆ, ಮಹಿಳಾ ಅಧ್ಯಯನವು ಅಂತರಾಷ್ಟ್ರೀಯ, ರಾಷ್ಟ್ರೀಯ, ಪ್ರಾದೇಶಿಕ ಮಟ್ಟದಲ್ಲಿ ಶೈಕ್ಷಣಿಕ ಶಿಸ್ತಾಗಿ ರೂಪುಗೊಂಡು ತನ್ನ ಹರವನ್ನು ವಿಸ್ತರಿಸಿಕೊಂಡಿತು. ಇದೇ ವೇಳೆ ಮಹಿಳೆಯ ಹಿತಾಸಕ್ತಿ, ಹಕ್ಕೊತ್ತಾಯಗಳಿಗಾಗಿ ಅನೇಕ ಆಂದೋಲನಗಳೂ ನಡೆದವು. ಪರಿಣಾಮವಾಗಿ ಮೆಕ್ಸಿಕೋದ ಸಮಾವೇಶದಲ್ಲಿ ೧೯೭೫- ೮೫ರ ಅವಧಿಯನ್ನು 'ಅಂತರಾಷ್ಟ್ರೀಯ ಮಹಿಳಾ ದಶಕ' ಎಂದು ಘೋಷಿಸಲಾಯಿತು. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ಚಳುವಳಿಗಳ ಚಾರಿತ್ರಿಕ ಸಂದರ್ಭಗಳನ್ನು ಮೊದಲ ಹಂತದಲ್ಲಿ ಅರಿಯಲಾಗುತ್ತದೆ. ನಂತರ ಈ ಜಾಗತಿಕ ವಿದ್ಯಮಾನ ಅಂದಿಗೆ ಕನ್ನಡದ ಲೇಖಕಿಯರ ಬರವಣಿಗೆಯನ್ನು ಅದರಲ್ಲೂ ವಿಶೇಷವಾಗಿ ಕಥೆ-ಕಾದಂಬರಿಗಳನ್ನು ಪ್ರಭಾವಿಸಿದೆಯೇ? ಪ್ರಭಾವಿಸಿದ್ದೇ ಆದರೆ ಅದಕ್ಕೆ ಹಿನ್ನಲೆ ಏನಿತ್ತು? ಎಂದು ಪರಿಶೀಲನೆಗೆ ಒಳಪಡಿಸಲಾಗುತ್ತದೆ.

* ಮಹಿಳಾ ದಶಕದ ಕೆಲವು ಪ್ರಾತಿನಿಧಿಕ ಲೇಖಕಿಯರ ಆಯ್ದ ಕಥೆ- ಕಾದಂಬರಿಗಳನ್ನು ವಿಶ್ಲೇಷಿಸುವ ಮೂಲಕ ಅಂದಿನ ಯುಗ ಧರ್ಮ ಏನಿತ್ತು? ಸಾಮಾಜಿಕ ವ್ಯವಸ್ಥೆ, ಕಾನೂನುಗಳ ಸ್ವರೂಪವೇನು? ಯಾವ ಸ್ಥಾನಮಾನ, ಹಕ್ಕುಗಳಿಗಾಗಿ ಒತ್ತಾಯವಿತ್ತು? ಅಂದಿನ ಮಹಿಳಾ ಪರವಾದ ಪ್ರೇರಣೆ, ಪ್ರಭಾವಗಳನ್ನು ಇಲ್ಲಿನ ಕೃತಿಗಳಲ್ಲಿ ತರಲಾಗಿದೆಯೇ? ತಂದಿದ್ದೇ ಆದರೆ, ಲೇಖಕಿಯರ ಯಾವ ಹಿನ್ನಲೆ, ಪರಿಸರ, ವ್ಯಕ್ತಿಗತ ಅನುಭವ ಮತ್ತು ಚಿಂತನೆಗಳು ಇಂತಹ ಬರವಣಿಗೆಗೆ ದಾರಿ ಮಾಡಿಕೊಟ್ಟವು ಎಂಬುದನ್ನು ಅಧ್ಯಯನದಲ್ಲಿ ಗಮನಕ್ಕೆ ತೆಗೆದುಕೊಳ್ಳಲಾಗುತ್ತದೆ.

* ಸ್ತ್ರೀವಾದಿ ವಿಮರ್ಶೆಯಿಂದ ಕಥೆ-ಕಾದಂಬರಿಗಳಲ್ಲಿ ಪ್ರತಿನಿಧೀಕರಣಗೊಂಡ ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸಲಾಗುತ್ತದೆ. ಇಲ್ಲಿ ನಿರ್ವಚನಗೊಂಡ ಸ್ತ್ರೀ ಮಾದರಿ ಪಾತ್ರಗಳು, ಪಾರಂಪರಿಕ ಸಮಾಜವನ್ನು ಬೆಂಬಲಿಸಿವೆಯೇ? ಅಥವಾ ಇಂತಹ ಚೌಕಟ್ಟು, ಕಟ್ಟಳೆಗಳನ್ನು ಪ್ರತಿರೋಧಿಸಿ, ಪುರುಷ ಯಜಮಾನ್ಯವನ್ನು ಪ್ರಶ್ನಿಸುವ, ಸ್ತ್ರೀ ಸ್ವಾತಂತ್ರ್ಯವನ್ನು ಪ್ರತಿಪಾದಿಸುವ ಮತ್ತು ಕಟ್ಟುವ ಕೆಲಸ ಮಾಡಿವೆಯೇ? ಎಂಬ ವಿಚಾರಗಳು ಸ್ಥಿರ ಮತ್ತು ಪರಿವರ್ತಿತ ಪಾತ್ರಗಳ ಮಾದರಿಯ ಹಿನ್ನೆಲೆಯಲ್ಲಿ ಚರ್ಚೆಯಾಗುತ್ತವೆ.

* ಲೇಖಕಿಯರ ಮೂಲಕ ಅಂದಿನ ಸಮಾಜದ ಧೋರಣೆಗಳನ್ನು ಅರ್ಥೈಸಿ ಕೊಳ್ಳಲಾಗುತ್ತದೆ. ಸ್ತ್ರೀ ಕೇಂದ್ರಿತ ಅನುಭವಗಳು, ಸಂವೇದನೆಗಳು, ಹೆಣ್ಣಿನ ಬದುಕು ಮತ್ತು ಸಮಸ್ಯೆಗಳ ತಳಹದಿಯಲ್ಲಿರುವ ಸಾಮಾಜಿಕ, ಆರ್ಥಿಕ, ಕೌಟುಂಬಿಕ, ರಾಜಕೀಯ, ಔದ್ಯೋಗಿಕ, ಶೈಕ್ಷಣಿಕ ಇತ್ಯಾದಿ ವಲಯಗಳ ವಿವೇಚನೆಯ ಉದ್ದೇಶ ಈ ಅಧ್ಯಯನಕ್ಕೆ ಇದೆ.

* ಮಹಿಳಾ ಸಮಸ್ಯೆಗಳ ಅಭಿವ್ಯಕ್ತಿಯ ಜೊತೆಗೆ ಸಿದ್ಧ ಮಾದರಿಯ ಕಥಾತಂತ್ರವನ್ನು ಬಿಟ್ಟು ಹೊಸ ಕಥಾತಂತ್ರಗಳನ್ನು ಹೇಗೆ ನಿರೂಪಿಸಲಾಗಿದೆ ಎಂಬುದನ್ನು ಸಹ ಗಮನಿಸಲಾಗುತ್ತದೆ. ಇದರಿಂದ ಹೆಣ್ಣನ್ನು ಮತ್ತು ಆಕೆ ನಿರ್ವಹಿಸುವ ಪಾತ್ರಗಳನ್ನು ಸ್ಥಿರ ಮಾದರಿಯ ಹೊರತಾಗಿ ಪರ್ಯಾಯ ಕಥಾತಂತ್ರಗಳಲ್ಲಿ ಹೇಗೆ ನಿರೂಪಿಸಲಾಗಿದೆ ಎಂಬುದನ್ನು ಅರ್ಥೈಸಿಕೊಳ್ಳಲು ಸಾಧ್ಯವಿದೆ. ಹಾಗೆಯೇ ಕಥಾಸಾಹಿತ್ಯದಲ್ಲಿನ ಪಾತ್ರಗಳನ್ನು ಕೇವಲ ಸ್ಥಿರ ಮಾದರಿಯ ರೂಪಕಗಳಾಗಿ ಚಿತ್ರಿಸಿದ್ದಾರೆಯೇ? ಅಥವಾ ಸ್ತ್ರೀಪರವಾದ ಆಶಯಗಳನ್ನು ಬೆಂಬಲಿಸಿದ್ದಾರೆಯೇ? ಎಂಬುದನ್ನು ಸಮೀಕ್ಷೆಗೆ ಒಳಪಡಿಸಲಾಗುತ್ತದೆ.

* ಪಿತೃ ಪ್ರಧಾನತೆಯು ಆಯಾ ವರ್ಗ, ವರ್ಣ, ಜನಾಂಗಕ್ಕೆ ಅನುಸಾರವಾಗಿ ಭಿನ್ನವಾಗಿರುವುದರಿಂದ ಸಮಾಜದ ಎಲ್ಲ ಸ್ತರದ ಮಹಿಳೆಯರ ಬದುಕಿನ ಸ್ಥಿತಿಗತಿ, ಸ್ಥಾನಮಾನಗಳು ಏಕಮುಖವಾಗಿಲ್ಲ. ಕಾರಣ ಲೇಖಕಿಯರು ಎಲ್ಲ ವರ್ಗದ ಮಹಿಳೆಯರನ್ನು ತಮ್ಮ ಬರವಣಿಗೆಯಲ್ಲಿ ಗಮನಿಸಿದ್ದಾರೆಯೇ? ಎಂಬುದು ಪ್ರಮುಖ ಪ್ರಶ್ನೆಯಾಗಿದೆ. ಮಹಿಳಾ ದಶಕದ ಚಿಂತನೆಗಳು ಲೇಖಕಿಯರು ರೂಪಿಸಿದ ಪಾತ್ರಗಳಲ್ಲಿ ಹೇಳಿಕೆಯಾಗಿಯೇ ಉಳಿದಿವೆಯೇ? ಅನ್ವಯ ಹಾಗೂ ಹೋರಾಟದ ರೂಪದಲ್ಲಿ ದಾಖಲಾಗಿವೆಯೇ? ಎಂಬುದನ್ನು ಪರಿಶೀಲಿಸಲಾಗುತ್ತದೆ.

* ಕನ್ನಡ ಸಾಹಿತ್ಯದ ಮಟ್ಟಿಗೆ ಸೈದ್ಧಾಂತಿಕ ಚೌಕಟ್ಟಿಗೆ ಬದ್ಧರಾಗಿ ಸಮಾಜದಲ್ಲಿ ಹೆಣ್ಣಿನ ಸ್ಥಿರ ಮಾದರಿಗಳಿಗೆ ಪರ್ಯಾಯವಾಗಿ ಪಾತ್ರಗಳನ್ನು ರೂಪಿಸುವಲ್ಲಿ ಈ ದಶಕಕ್ಕೂ ಹಿಂದಿನ ಲೇಖಕಿಯರು ಪ್ರಯತ್ನಿಸಿದ ಉದಾಹರಣೆಗಳಿವೆ. ಅದೇ ರೀತಿ ಈ ಬಗೆಯ ಲೇಖಕಿಯರ ಸಾಹಿತ್ಯವನ್ನು 'ಅಡುಗೆ ಮನೆ ಸಾಹಿತ್ಯ'ವೆಂದು ಪ್ರತಿಕ್ರಿಯಿಸುವ ಹಂತದಲ್ಲಿ ವಿಭಿನ್ನ ವಸ್ತು, ಕಥಾ ತಂತ್ರಗಳನ್ನು ಇಟ್ಟುಕೊಂಡು ಸಾಹಿತ್ಯ ರಚನೆಗೆ ಹಲವಾರು ಲೇಖಕಿಯರು ತೊಡಗಿದ್ದು ವಿಶೇಷ. ಬಹುತೇಕ ಈ ವಿಚಾರ ಕನ್ನಡ ಸಾಹಿತ್ಯಕ ಸನ್ನಿವೇಶದಲ್ಲಿ ಕ್ರಾಂತಿಕಾರಕ ಘಟನೆ ಎನಿಸಿತು. ಹಾಗಾಗಿ ಪ್ರಸ್ತುತ ಅಧ್ಯಯನ ವ್ಯಾಪ್ತಿಯ ಲೇಖಕಿಯರ ಜೊತೆಗೆ ಆರಂಭಿಕ ಲೇಖಕಿಯರ ಪರಂಪರೆಯ ಚಿಂತನೆಗಳು ಸಾಗಿ ಬಂದುದ್ದನ್ನು ಲೇಖಕಿಯರ ಕಥನ ಪರಂಪರೆಯ ಸಂಕ್ಷಿಪ್ತ ಚಿತ್ರಣದೊಂದಿಗೆ ತೌಲನಿಕ ಅಧ್ಯಯನ ಕೈಗೊಳ್ಳಲಾಗುತ್ತದೆ.

* ಇದುವರೆಗೂ ಒಟ್ಟಾರೆ ಕನ್ನಡ ಸಾಹಿತ್ಯದ ಹಲವಾರು ಕಥೆ-ಕಾದಂಬರಿಗಳಲ್ಲಿ ವಿವಿಧ ಬಗೆಯ ಸ್ತ್ರೀ ಪಾತ್ರಗಳು ಸೃಷ್ಟಿಯಾಗಿವೆ. ಆದರೆ, ಇಂತಹ ಪಾತ್ರಗಳನ್ನು ರೂಪಿಸಿದ ಲೇಖಕರು ಸ್ತ್ರೀ ಲೋಕವನ್ನು ಗ್ರಹಿಸಿರುವ ರೀತಿ ಹಲವಾರು ವಾದಗಳಿಗೆ ದಾರಿ ಮಾಡಿ ಕೊಟ್ಟಿದೆ. ಅದೇ ರೀತಿ ಜೈವಿಕ ವ್ಯತ್ಯಾಸದ ಕಾರಣದಿಂದಾಗಿ ಜಗತ್ತನ್ನು ನೋಡುವ ದೃಷ್ಟಿಕೋನ, ಸಿಗುವ ಜೀವನಾನುಭವಗಳು

ಗಂಡಿಗಿಂತ ಹೆಣ್ಣಿಗೆ ಭಿನ್ನವಾಗಿರುತ್ತವೆ. ಆದ್ದರಿಂದ ಲೇಖಕರ ಹೊರತಾಗಿ ಲೇಖಕಿಯರು ಸಹ ಮಹಿಳಾ ಸಂಬಂಧಿ ವಿಷಯಗಳನ್ನು ಹೇಗೆ ಅಭಿವ್ಯಕ್ತಿಗೊಳಿಸಿದ್ದಾರೆಂಬುದರೊಂದಿಗೆ ಸ್ತ್ರೀ ಸಂವೇದನೆಯ ಮಾನಸಿಕ ಸ್ಥಿತಿಯನ್ನು ಪರಿಚಯಿಸಿಕೊಳ್ಳುವ ಉದ್ದೇಶ ಅಧ್ಯಯನಕ್ಕಿದೆ.

* ಸರಿ ಸುಮಾರು ೭೦-೮೦ರ ದಶಕದಲ್ಲಿ ಹೆಣ್ಣಿನ ತಾಯ್ತನ, ವಿವಾಹ, ಶಿಕ್ಷಣ, ಉದ್ಯೋಗ, ಧರ್ಮ, ಕಾನೂನು ಇತ್ಯಾದಿಗಳ ಕುರಿತು ಅಂದಿನ ಸಮಾಜದಲ್ಲಿದ್ದ ಧೋರಣೆಗಳನ್ನು ಅರ್ಥೈಸಿಕೊಂಡು, ಸ್ತ್ರೀ ಕೇಂದ್ರಿತ ಅನುಭವಗಳನ್ನು ವಿವೇಚಿಸುವ ದಿಕ್ಕಿನಲ್ಲಿಯೂ ಅಧ್ಯಯನ ಸಾಗುತ್ತದೆ.

ಕೊನೆಯದಾಗಿ ಪ್ರಸ್ತುತ ಸಂಶೋಧನೆಯಲ್ಲಿ 'ಮಹಿಳಾ ದಶಕ', 'ಲೇಖಕಿಯರ ಕಥನ ಪರಂಪರೆ' ಹಾಗೂ 'ಸ್ತ್ರೀಪಾತ್ರಗಳ ಪ್ರತಿನಿಧೀಕರಣ' ಎಂಬ ಮೂರು ಪ್ರಮುಖ ಅಂಶಗಳಿವೆ. ಮಹಿಳಾ ದಶಕದಿಂದ ಪ್ರಭಾವಿತವಾದ ವಲಯಗಳಲ್ಲಿ ಸಾಹಿತ್ಯ ಕ್ಷೇತ್ರವೂ ಒಂದಾಗಿರುವುದರಿಂದ ಈ ಅವಧಿಯಲ್ಲಿನ ಪ್ರಮುಖ ಸ್ತ್ರೀವಾದಿ ಚಳುವಳಿಗಳು ಹಾಗೂ ಮಹಿಳಾ ದಶಕದ ಚಿಂತನೆಗಳನ್ನು ಹೇಳುತ್ತಲೇ ಮಹಿಳಾ ದಶಕದ ಹಿಂದಿನ ಲೇಖಕಿಯರ ಕಥನ ಪರಂಪರೆಯನ್ನು ಪರಿಚಯಿಸುವುದಾಗಿದೆ. ಇದರೊಟ್ಟಿಗೆ ಪ್ರಾತಿನಿಧಿಕ ಲೇಖಕಿಯರ ಕಥೆ-ಕಾದಂಬರಿಗಳಲ್ಲಿ ಅವರು ಚಿತ್ರಿಸಿರುವ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ವಿಶ್ಲೇಷಿಸುವುದರೊಂದಿಗೆ ಈ ಮೂರೂ ಅಂಶಗಳ ಅಂತರ್ ಸಂಬಂಧವನ್ನು ಅರಿಯುವ ಒಟ್ಟಾರೆ ಉದ್ದೇಶವನ್ನು ಅಧ್ಯಯನ ಒಳಗೊಂಡಿದೆ.

## ೧.೩. ಅಧ್ಯಯನದ ವ್ಯಾಪ್ತಿ

'ಮಹಿಳಾ ದಶಕದ ಲೇಖಕಿಯರ ಕಥನಗಳಲ್ಲಿ ಸ್ತ್ರೀ ಪ್ರತಿನಿಧೀಕರಣ' ಎಂಬ ಈ ಮಹಾಪ್ರಬಂಧ ರಚನೆಗೆ ೧೯೭೫-೮೫ರ ವರೆಗಿನ ಮಹಿಳಾ ದಶಕದ ಅವಧಿಯ ಪ್ರಾತಿನಿಧಿಕ ಲೇಖಕಿಯರ ಕಥೆ-ಕಾದಂಬರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಈ ಹಿಂದೆಯೇ ಸಾಹಿತ್ಯ ವಲಯಕ್ಕೆ ಸೇರಿದ ಅನೇಕರು ವಿವಿಧ ಕ್ಷೇತ್ರ, ಸಂಸ್ಥೆ ಹಾಗೂ ಕೌಟುಂಬಿಕ ವಲಯಗಳ ನಡುವೆ ಮಹಿಳೆಯರ ಕುರಿತಾದ ಕೆಲವು ಚಿಂತನೆಗಳನ್ನು ನಡೆಸಿದ್ದೂ ಉಂಟು. ಆದರೆ, ಕಾಲಮಿತಿ ಮತ್ತು ನಿರ್ದಿಷ್ಟತೆಗಳ ಹಿನ್ನೆಲೆಯಲ್ಲಿ ವೈದೇಹಿ, ವೀಣಾಶಾಂತೇಶ್ವರ, ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್, ಬಿ.ಟಿ.ಲಲಿತಾನಾಯಕ್, ಹೀಗೆ ಐದು ಜನ ಲೇಖಕಿಯರ ಪ್ರಾತಿನಿಧಿಕ ಕಥೆ-ಕಾದಂಬರಿಗಳ ಚೌಕಟ್ಟಿಗೆ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಲಾಗಿದೆ. ದಲಿತ, ಬುಡಕಟ್ಟು, ವೈದಿಕ, ಮುಸ್ಲಿಂ ಮುಂತಾದ ಬೇರೆ ಬೇರೆ ಸಮುದಾಯ, ಭಾಷೆ, ಪ್ರದೇಶ, ಸಂಸ್ಕೃತಿಗಳ ಹಿನ್ನೆಲೆಯನ್ನು ಒಳಗೊಂಡ ಈ ಎಲ್ಲ ಲೇಖಕಿಯರ ಮೂಲಕ ವಿಭಿನ್ನ ಸ್ತ್ರೀ ಮಾದರಿ ಪಾತ್ರಗಳ ವಿಶ್ಲೇಷಣೆ ಕೈಗೊಳ್ಳಲಾಗುತ್ತದೆ. ಅದರಲ್ಲೂ ಮಹಾಪ್ರಬಂಧ ರಚನೆಯಲ್ಲಿ ಪ್ರಮುಖವೆನಿಸುವ

ಸ್ತ್ರೀ ಪ್ರತಿನಿಧೀಕರಣದ ಒಳನೋಟವನ್ನು ಕಟ್ಟಿಕೊಡುವ ಕಥೆ–ಕಾದಂಬರಿಗಳನ್ನು ಮುಖ್ಯವಾಗಿ ಪರಿಗಣಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ದಶಕದ ಪರಿಕಲ್ಪನೆ ಸಹ ಪ್ರಮುಖವಾದುದು. ಹಾಗಾಗಿ 'ಮಹಿಳಾ ದಶಕದ' ಹಿನ್ನೆಲೆ, ಮಹತ್ವ, ಪ್ರೇರಣೆಯಾದ ಮಹಿಳಾ ಚಳುವಳಿಗಳು, ಚಿಂತಕಿಯರು, ಆಶಯಗಳು ಇತ್ಯಾದಿಗಳನ್ನು ಸಹ ಪ್ರಬಂಧದ ವ್ಯಾಪ್ತಿ ಒಳಗೊಳ್ಳುತ್ತದೆ. ಹಾಗೆಯೇ ಪ್ರಸ್ತುತ ದಶಕವನ್ನು ಹೊರತುಪಡಿಸಿ ಆರಂಭದ ದಿನಮಾನಗಳಿಂದ ಮಹಿಳಾ ಲೇಖಕಿಯರ ಕಥಾ ಪರಂಪರೆ ಕ್ರಮಿಸಿ ಬಂದ ಹಾದಿ ಮತ್ತು ಕಾಲಕಾಲಕ್ಕೆ ಸಾಹಿತ್ಯಕ್ಷೇತ್ರದಲ್ಲಿ ಘಟಿಸಿದ ಬದಲಾವಣೆಯ ಸಾಮ್ಯತೆ–ವ್ಯತ್ಯಾಸಗಳನ್ನು ಗುರುತಿಸುವ ದೃಷ್ಟಿಯಿಂದ ಲೇಖಕಿಯರ 'ಕಥಾ ಪರಂಪರೆ' ಯ ಆಂಶಿಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕಾರಣ ಆರಂಭಿಕ ಕಾಲಮಾನದ ಲೇಖಕಿಯರು ವೈಧವ್ಯ, ಸ್ತ್ರೀ ಶಿಕ್ಷಣ, ಪ್ರೇಮ ವಿವಾಹ, ವೇಶ್ಯಾ ಸಮಸ್ಯೆ ಇತ್ಯಾದಿ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಮಂಡಿಸಲು ಪ್ರಯತ್ನಿಸಿದರು. ಆದರೆ ಇವೇ ವಿಚಾರಗಳೊಂದಿಗೆ ವಿಧವಾ ವಿವಾಹ, ಹೆಣ್ಣು ಭ್ರೂಣ ಹತ್ಯೆ, ಲೈಂಗಿಕ ದೌರ್ಜನ್ಯ, ಅವಿವಾಹಿತ ತಾಯ್ತನ, ಔದ್ಯೋಗಿಕ ಸ್ವಾವಲಂಬನೆ, ಮಹಿಳಾ ಸಾಗಾಣಿಕೆಯಂತಹ ಗಂಭೀರ ಸ್ವರೂಪದ ವಿಚಾರಗಳು ಮಹಿಳಾ ದಶಕದ ಲೇಖಕಿಯರ ಕಥಾ ಸಾಹಿತ್ಯದ ಪಾತ್ರಗಳಲ್ಲಿ ಪ್ರಾಮುಖ್ಯತೆ ಪಡೆದುಕೊಂಡವು. ಅಲ್ಲದೇ ಈ ಕಾಲಮಾನದ ಲೇಖಕಿಯರು ವಿಭಿನ್ನ ಸಮುದಾಯ, ಪ್ರದೇಶ, ಸಂಸ್ಕೃತಿಗಳಲ್ಲಿ ಬದುಕುವ ಹೆಣ್ಣು ಮಕ್ಕಳ ವ್ಯಕ್ತಿಗತ ನೋವು, ಸಮಸ್ಯೆ, ಮಾನಸಿಕ ತುಮುಲಗಳಿಗೆ ಪ್ರಾಮುಖ್ಯತೆ ನೀಡಿದರು. ಅದುವರೆಗೆ ಹೆಣ್ಣಿನ ಬಾಹ್ಯ ವಲಯಕ್ಕೆ ಸೀಮಿತವಾಗಿದ್ದ ವಸ್ತು ವಿಚಾರಗಳು ಈ ಹಂತದಲ್ಲಿ ಆಕೆಯ ಖಾಸಗಿ ವಲಯಕ್ಕೆ ವಿಸ್ತಾರಗೊಂಡು ಕಥಾಸಾಹಿತ್ಯದಲ್ಲಿ ದಾಖಲಾದವು. ಈ ಮೂಲಕ ಮಹಿಳಾ ದಶಕದ ಅವಧಿಯಲ್ಲಿ ಕನ್ನಡದ ಲೇಖಕಿಯರ ಪ್ರತ್ಯೇಕ ಪರಂಪರೆಯೇ ಸೃಷ್ಟಿಯಾಯಿತು. ಆದ್ದರಿಂದಲೇ ಮಹಿಳಾ ದಶಕದ ವಿಭಿನ್ನ ಚಿಂತನೆಗಳನ್ನು ಲೇಖಕಿಯರ ಕಥಾಸಾಹಿತ್ಯದ ಸ್ತ್ರೀ ಪಾತ್ರಗಳಿಗೆ ಅನ್ವಯಿಸಿ ಅಧ್ಯಯನ ಮಾಡುವುದಾಗಿದೆ. ಹಾಗಾಗಿ ಅಂತರಾಷ್ಟ್ರೀಯ ಮಹಿಳಾ ದಶಕ ಮತ್ತು ಮೇಲೆ ತಿಳಿಸಿದ ಐದು ಜನ ಪ್ರಾತಿನಿಧಿಕ ಲೇಖಕಿಯರು ಹಾಗೂ ಅವರ ಕಥಾ ಸಾಹಿತ್ಯವನ್ನು ಪ್ರಸ್ತುತ ಅಧ್ಯಯನ ವ್ಯಾಪ್ತಿಯಾಗಿ ಒಳಗೊಂಡಿದೆ.

### ೧.೪. ಅಧ್ಯಯನದ ವೈಧಾನಿಕತೆ

ಕಥಾ ಸಾಹಿತ್ಯದ ಮೂಲ ಕೃತಿಗಳನ್ನು ಆಕರವನ್ನಾಗಿಸಿಕೊಂಡು ನಿರ್ದಿಷ್ಟ ಚಾರಿತ್ರಿಕ ಹಿನ್ನೆಲೆಯುಳ್ಳ ಕಾಲಮಾನದ ವ್ಯಾಪ್ತಿಯನ್ನು ಒಳಗೊಂಡ ಅಧ್ಯಯನ ಇದಾಗಿದೆ. ಲೇಖಕಿಯರ ಕಥಾ ಸಾಹಿತ್ಯದಲ್ಲಿನ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣವನ್ನು ಸ್ತ್ರೀವಾದಿ ದೃಷ್ಟಿಕೋನದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ. ಆದ್ದರಿಂದ ಅಧ್ಯಯನದಲ್ಲಿ ಸ್ತ್ರೀವಾದಿ ಸಂಶೋಧನಾ ವಿಧಾನವನ್ನು ಪ್ರಮುಖವಾಗಿ ಪರಿಗಣಿಸಲಾಗುತ್ತದೆ.

ಕಾರಣ ಇತರೆ ಜ್ಞಾನ ಶಿಸ್ತುಗಳಿಗೆ ಸಂಬಂಧಿಸಿದ ಸಂಶೋಧನೆಗಳು ಹೆಣ್ಣು ಮತ್ತು ಗಂಡಿನ ನಡುವೆ ಶ್ರೇಣೀಕರಣದ ಅಧಿಕಾರ ಸಂಬಂಧವನ್ನು ಒಳಗೊಂಡಿದೆ. ಆದರೆ, ಸ್ತ್ರೀವಾದಿ ಸಂಶೋಧನೆಯು ಈ ರೀತಿಯ ಅಧಿಕಾರ ಸಂಬಂಧವನ್ನು ನಿಕಾರಿಸುವ ಪ್ರಾಮಾಣಿಕ ದೃಷ್ಟಿಕೋನ ಹೊಂದಿದೆ. ಮಹಿಳೆಯ ಎಲ್ಲ ಸಾಮರ್ಥ್ಯಗಳನ್ನು ಸ್ತ್ರೀವಾದಿ ಸಂಶೋಧನೆಯು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತದೆ. ಎಚ್.ಎಸ್.ಶ್ರೀಮತಿಯವರು ಹೇಳುವಂತೆ "ವಿವಾಹ, ಕುಟುಂಬ, ಶಿಕ್ಷಣ, ಉದ್ಯೋಗ, ಸಂವಿಧಾನ, ಕಾಯ್ದೆ, ಕಾನೂನು, ವೈದ್ಯಕೀಯ, ಆಡಳಿತಗಳಂತಹ ಕ್ರಿಯಾ ವಲಯಗಳೇ ಅಲ್ಲದೆ ಅಂತರಂಗದ ಪ್ರತೀಕಗಳಾದ ಸಾಧನೆ, ಸಾಮರ್ಥ್ಯಗಳು, ವಿಜ್ಞಾನ, ಕಲೆ, ಸಂಸ್ಕೃತಿ, ಸಾಹಿತ್ಯ ಸಂಪ್ರದಾಯ, ಆಚರಣೆಗಳಂತಹ ಬುದ್ಧಿಭಾವಗಳ ವಲಯಗಳೆಲ್ಲದರಲ್ಲೂ ಈ ಮಹಿಳಾ ವಿಷಯಗಳು ತೊಡಕುಗಳಲ್ಲಿ ಸಿಲುಕಿವೆ................. ಈ ಮಹಿಳಾ ವಿಷಯಗಳ ಸಂಕೀರ್ಣ ಸಂದರ್ಭಗಳನ್ನು ಹೆಣ್ಣುನೋಟದಲ್ಲಿ ಗ್ರಹಿಸುವುದು ಸ್ತ್ರೀವಾದಿ ಸಂಶೋಧನೆಯಾಗಿದೆ." ಪ್ರಸ್ತುತ ಅಧ್ಯಯನದಲ್ಲಿಯೂ ಲೇಖಕಿಯರ ಕಥಾ ಸಾಹಿತ್ಯದಲ್ಲಿನ ಕ್ರಿಯಾವಲಯ ಮತ್ತು ಬೌದ್ಧಿಕ ವಲಯಗಳಿಗೆ ಸಂಬಂಧಿಸಿದಂತೆ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣವನ್ನು ಅಧ್ಯಯನ ನಡೆಸಲು ಸ್ತ್ರೀವಾದಿ ಸಂಶೋಧನಾ ವಿಧಾನವನ್ನು ಅನುಸರಿಸಲಾಗುತ್ತದೆ.

"ಸಾಹಿತ್ಯಕ ಕೃತಿಗಳು ಅವು ರಚನೆಯಾದ ಕಾಲದಲ್ಲಿ ಇರಿಸಿ ನೋಡುವುದು ವಿಮರ್ಶೆಯ ಒಂದು ಮಾದರಿ. ಆಗ ಆ ಕೃತಿಗಳ ಜಗತ್ತು ಚಾರಿತ್ರಿಕವಾಗಿ ಆಯಾ ಕೃತಿಗಳ ಕಾಲಕ್ಕೆ ಸಂವಾದಿಯಾಗಿ ಇರುತ್ತದೆಂದು ತಿಳಿಯಬೇಕಾಗುತ್ತದೆ. ಕೆಲವೊಮ್ಮೆ ಆ ಕೃತಿಗಳ ಜಗತ್ತಿನ ಮೂಲಕವೇ ಅದು ಹುಟ್ಟಿದ ಕಾಲದ ಚರಿತ್ರೆಯ ವಿನ್ಯಾಸವನ್ನು ತಿಳಿಯುವ ಯತ್ನವನ್ನು ಮಾಡಲಾಗುತ್ತದೆ" ಎಂದು ಶ್ರೀಮತಿ ಎಚ್.ಎಸ್. ಅವರು ಹೇಳುತ್ತಾರೆ. ಹೀಗಾಗಿ ಪ್ರಸ್ತುತ ಅಧ್ಯಯನ ಒಳಗೊಳ್ಳುವ ಅಂತರಾಷ್ಟ್ರೀಯ ಮಹಿಳಾ ದಶಕದ ಹಿನ್ನೆಲೆ ಹಾಗೂ ಇದಕ್ಕೆ ಪ್ರೇರಣೆಯಾದ ಮಹಿಳಾ ಚಳುವಳಿಗಳ ವಿವಿಧ ಹಂತಗಳ ನೋಟವನ್ನು ಚಾರಿತ್ರಿಕ ಅಧ್ಯಯನದ ಮೂಲಕ ದಾಖಲಿಸಲಾಗುತ್ತದೆ. ಅಲ್ಲದೆ ಈ ಅವಧಿಯಲ್ಲಿನ ಪ್ರಾತಿನಿಧಿಕ ಲೇಖಕಿಯರ ಕಾಲ, ಕೃತಿಗಳು, ವೈಯಕ್ತಿಕ ಹಿನ್ನೆಲೆ, ಪ್ರೇರಣೆ, ಚಿಂತನೆ, ಬರಹದ ಸ್ವರೂಪ, ಸಮಕಾಲೀನ ಪರಿಸರದ ಸವಾಲುಗಳು ಇತ್ಯಾದಿ ಅಂಶಗಳನ್ನು ಸಹ ಚಾರಿತ್ರಿಕ ವಿಧಾನದಲ್ಲಿ ಗಮನಿಸಲಾಗುತ್ತದೆ. ಹಾಗೆಯೇ ಮಹಿಳಾ ದಶಕಕ್ಕೂ ಹಿಂದಿನ ಕಾಲಮಾನದ ಲೇಖಕಿಯರ ಕಥಾ ಪರಂಪರೆಯ ಚಾರಿತ್ರಿಕ ವಿವರಗಳನ್ನು ಕಟ್ಟಿಕೊಡುವುದರಿಂದ ಈ ಅಧ್ಯಯನ ಚಾರಿತ್ರಿಕ ಸಂಶೋಧನಾ ವಿಧಾನವನ್ನೂ ಒಳಗೊಂಡಿದೆ.

ಸ್ತ್ರೀ ಸಂಬಂಧಿಯಾದ ಯಾವುದೇ ವಿಷಯಗಳನ್ನು ವಿವರಿಸುವಾಗ ಪುರುಷ ಕೇಂದ್ರಿತ ಸಮಾಜ ರೂಪಿಸಿರುವ ಪಿತೃ ಪ್ರಾಧನ್ಯತೆಯ ಲಿಂಗರಾಜಕಾರಣವನ್ನು ಗ್ರಹಿಸುವುದು ಅನಿವಾರ್ಯ

ವಾಗಿರುತ್ತದೆ. ಗಂಡು ಮತ್ತು ಹೆಣ್ಣಿನ ನಡುವಿನ ಸಂಬಂಧಗಳ ಅಸ್ಥಿರತೆಗೆ ಕಾರಣವಾಗುವುದು ಪಿತೃಪ್ರಧಾನತೆಯೇ ಆಗಿದೆ. ಈ ಬಗೆಯ ಲಿಂಗ ರಾಜಕಾರಣವನ್ನು ಗ್ರಹಿಸುವಲ್ಲಿ 'ವ್ಯಕ್ತಿನಿಷ್ಠ' ವಿಧಾನವೇ ಸೂಕ್ತವೆನಿಸುತ್ತದೆ. ಎಚ್.ಎಸ್.ಶ್ರೀಮತಿಯವರು ಹೇಳುವಂತೆ "ವ್ಯಕ್ತಿನಿಷ್ಠತೆ ಎಂಬುದು ಹೆಣ್ಣು ಬದುಕು ಎಂಬ ಸಂಶೋಧನಾ ವಿಷಯವನ್ನು ಕೇವಲ ವಸ್ತು ಎಂಬಂತೆ ಕಾಣದೆ ಅದು 'ವ್ಯಕ್ತಿ ಬದುಕು'ಎಂದು ಕಾಣುವ ನಿಲುವು." ಈ ಹಿನ್ನೆಲೆಯಲ್ಲಿ ಅಧ್ಯಯನದಲ್ಲಿ 'ವ್ಯಕ್ತಿ ನಿಷ್ಠ ವಿಧಾನ'ವನ್ನು ಕೈಗೊಳ್ಳಲಾಗಿದೆ.

ಅನುಭವಗಳನ್ನು ದಾಖಲೆಯಾಗಿ ತೆಗೆದುಕೊಳ್ಳುವ ಏಕೈಕ ಸಂಶೋಧನೆ ಎಂದರೆ ಸ್ತ್ರೀವಾದಿ ಸಂಶೋಧನೆ. ಅನುಭವಗಳನ್ನು ಕೇವಲ ಮಾಹಿತಿಯಾಗಿ ನೋಡದೇ ಜ್ಞಾನವನ್ನಾಗಿ ನೋಡಲಾಗುತ್ತದೆ. ಅನುಭವಗಳಲ್ಲಿ ಇತರರು, ವ್ಯವಸ್ಥೆಗಳು ತನ್ನ ಬಗ್ಗೆ ಏನನ್ನು ಹೇಳುತ್ತಾರೆ ಎನ್ನುವುದಕ್ಕಿಂತ ತನ್ನ ಬಗ್ಗೆ ತಾನು ಏನನ್ನು ಹೇಳಿಕೊಳ್ಳುತ್ತೇನೆ ಎನ್ನುವುದು ಮುಖ್ಯವಾಗುತ್ತದೆ. ಹಾಗಾಗಿ ಲೇಖಕಿಯರ ಬರವಣಿಗೆಗೆ ಕಾರಣವಾದ ಅವರ ಸ್ವ ಅನುಭವಗಳೂ ಸಹ ಸಂಶೋಧನೆಯಲ್ಲಿ ಪ್ರಮುಖವಾಗಿರುವುದರಿಂದ 'ಅನುಭವ ಕೇಂದ್ರಿತ' ವಿಧಾನವನ್ನು ಅನುಸರಿಸಲಾಗಿದೆ.

"ಸಂಶೋಧನೆಯ ಪ್ರಶ್ನೆಗಳಿಗಾಗಿ ಒಂದಕ್ಕಿಂತ ಹೆಚ್ಚು ಜ್ಞಾನವಲಯಗಳ ಒಳಹೊಕ್ಕು ಬರುವ ಅಗತ್ಯಗಳನ್ನು ಬಹುಶಿಸ್ತೀಯ ಅಧ್ಯಯನ ಎನ್ನಲಾಗುತ್ತದೆ." ಈ ಹಿನ್ನೆಲೆಯಲ್ಲಿ ಲೇಖಕಿಯರು ರೂಪಿಸಿದ ಸ್ತ್ರೀ ಪಾತ್ರಗಳ ಕೌಟುಂಬಿಕ, ರಾಜಕೀಯ, ಧಾರ್ಮಿಕ, ತಾತ್ವಿಕ, ಮನಃಶಾಸ್ತ್ರೀಯ, ಕಾನೂನು ಇತ್ಯಾದಿ ಹಲವು ಬಗೆಯ ಆಯಾಮಗಳಲ್ಲಿ ಎದುರಾಗುವ ಸಂಶೋಧನಾ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗುತ್ತದೆ. ಈ ವೇಳೆ ಇತರೆ ಜ್ಞಾನ ಶಾಖೆಗಳ ನೆರವನ್ನು ಅಧ್ಯಯನದಲ್ಲಿ ಪಡೆದುಕೊಳ್ಳುವುದರಿಂದ ಬಹುಶಿಸ್ತೀಯ ಅಧ್ಯಯನ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನ ಒಳಗೊಂಡಿರುವ ಪ್ರಾತಿನಿಧಿಕ ಲೇಖಕಿಯರು ಕಥಾಸಾಹಿತ್ಯ ಮಾತ್ರವಲ್ಲದೆ, ಹಲವಾರು ಬಗೆಯ ಸಾಹಿತ್ಯ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾ ಬಂದಿದ್ದಾರೆ. ಆತ್ಮಕಥೆ, ಕವನ, ವೈಚಾರಿಕ ಲೇಖನ ಇತ್ಯಾದಿಗಳಲ್ಲಿ ಅವರು ದಾಖಲಿಸಿದ ಚಿಂತನೆ ಹಾಗೂ ವಿವರಗಳು ಸಂಶೋಧನೆಗೆ ಪೂರಕವಾಗಿ ಒದಗಿಬರುತ್ತವೆ. ಆದ್ದರಿಂದ 'ಅಂತರ್‌ಪಠ್ಯೀಯ ವಿಧಾನ'ದ ಮೂಲಕ ಪ್ರಾಸಂಗಿಕವಾಗಿ ಲೇಖಕಿಯರ ಇತರೆ ಬರಹಗಳನ್ನು ಈ ಅಧ್ಯಯನವು ಗಮನಿಸುತ್ತದೆ.

ಮಹಿಳಾ ದಶಕದ ಮತ್ತು ಅದಕ್ಕೂ ಹಿಂದಿನ ಕಾಲಮಾನದ ಲೇಖಕಿಯರ ಕಥಾ ಪರಂಪರೆಯ ವಿವರಗಳನ್ನು ಇಲ್ಲಿ ಹೇಳಲಾಗುತ್ತದೆ. ಎರಡೂ ಕಾಲಮಾನದ ಲೇಖಕಿಯರ ಬರವಣಿಗೆ, ಚಿಂತನೆ, ಕಥಾ ಸಾಹಿತ್ಯದ ವಸ್ತು ವಿಷಯಗಳ ಬಗೆಗಿನ ದೃಷ್ಟಿಕೋನ ಇತ್ಯಾದಿಗಳನ್ನು 'ತೌಲನಿಕ ಅಧ್ಯಯನ' ಮಾದರಿಯನ್ನು ಅನುಸರಿಸಿ ವಿಶ್ಲೇಷಿಸಲಾಗುತ್ತದೆ. ಹೀಗೆ ಅಧ್ಯಯನಕ್ಕೆ ಸೈದ್ಧಾಂತಿಕ ಹಾಗ ತಾತ್ವಿಕ

ಒಳನೋಟಗಳನ್ನು ಕಟ್ಟಿಕೊಟ್ಟು ಒಂದು ಶಿಸ್ತಿಗೆ ಒಳಪಡಿಸುವ ಕಾರಣದಿಂದ ಹಲವು ಬಗೆಯ ವೈಧಾನಿಕತೆಗಳನ್ನು ಅಧ್ಯಯನದಲ್ಲಿ ಅನುಸರಿಸಲಾಗಿದೆ.

## ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಸಂಶೋಧನ ಪ್ರಬಂಧದಲ್ಲಿ ಒಟ್ಟು ಐದು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ತಾತ್ವಿಕ ಸ್ವರೂಪದೊಂದಿಗೆ ಇದುವರೆಗೆ ನಡೆಸಿರುವ ಪೂರ್ವಾಧ್ಯಯನ ಸಮೀಕ್ಷೆಯನ್ನು ಕೈಗೊಳ್ಳಲಾಗಿದೆ. ಸಮೀಕ್ಷೆಯಲ್ಲಿ ನಿರ್ದಿಷ್ಟ ಕಾಲಘಟ್ಟವನ್ನು ಆಧರಿಸಿ ರಚನೆಯಾದ ಮಹಿಳಾ ಕಥಾ ಸಾಹಿತ್ಯದ ಸ್ತ್ರೀಸಂವೇದನೆ, ಪ್ರತಿನಿಧೀಕರಣಕ್ಕೆ ಸಂಬಂಧಿಸಿದ ಸಂಶೋಧನಾ ಪ್ರಬಂಧಗಳು ಮತ್ತು ವಿಮರ್ಶಾತ್ಮಕ ಕೃತಿಗಳನ್ನು ಅಧ್ಯಯನ ಮಾಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಮಹಿಳಾ ದಶಕದ ಚಿಂತನೆಯ ಸ್ವರೂಪ ಹಾಗೂ ಮಹಿಳಾ ದಶಕಕ್ಕೆ ಹಿನ್ನೆಲೆಯಾಗಿ ಜರುಗಿದ ಮಹಿಳಾ ಚಳುವಳಿಗಳ ಚಾರಿತ್ರಿಕ ಸಂದರ್ಭಗಳನ್ನು ಹೇಳಲಾಗಿದೆ. ಈ ವೇಳೆ ಸ್ತ್ರೀವಾದಿ ಚಿಂತನೆಗಳ ಪ್ರತಿಪಾದನೆಯ ಮೊದಲುಗಳು ಹಾಗೂ ನಂತರದ ಬೆಳವಣಿಗೆಗಳನ್ನು ದಾಖಲಿಸುತ್ತಲೇ ಮಹಿಳಾ ಚಳುವಳಿಗಳನ್ನು ಜಾಗತಿಕ, ರಾಷ್ಟ್ರೀಯ, ಪ್ರಾದೇಶಿಕ ಹಿನ್ನೆಲೆಯಾಗಿ ವಿವರಿಸಲಾಗಿದೆ. ನಂತರ ಲೇಖಕಿಯರ ಕಥನ ಪರಂಪರೆಯನ್ನು ಅಧ್ಯಯನ ಮಾಡುವಲ್ಲಿ ಸಾಹಿತ್ಯಲೋಕಕ್ಕೆ ಮಹಿಳೆಯರ ಪ್ರವೇಶ ಮತ್ತು ಅವರ ಕಥಾಸಾಹಿತ್ಯದ ವಸ್ತು ವಿಚಾರಗಳನ್ನು ಕುರಿತಂತೆ ಮಹಿಳಾ ಹಕ್ಕುಗಳ ಅಹವಾಲು ಕ್ರಮ, ಪ್ರತಿಭಟನೆಯ ಕ್ರಮ, ಪರ್ಯಾಯ ಕ್ರಮಗಳೆಂದು ಮೂರು ಹಂತಗಳಲ್ಲಿ ಅಧ್ಯಯನ ಮಾಡಲಾಗಿದೆ. ಈ ಮೂಲಕ ಮಹಿಳಾ ದಶಕ ಮತ್ತು ಅದಕ್ಕೂ ಹಿಂದಿನ ಲೇಖಕಿಯರ ಚಿಂತನೆ, ಸಾಹಿತ್ಯ, ಪಾತ್ರ ಚಿತ್ರಣ, ವಸ್ತು-ವಿಚಾರಗಳನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸಂಶೋಧನೆಯು ಒಳಗೊಳ್ಳುವ ಪ್ರಾತಿನಿಧಿಕ ಲೇಖಕಿಯರಾದ ವೈದೇಹಿ, ವೀಣಾ ಶಾಂತೇಶ್ವರ, ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್, ಬಿ.ಟಿ.ಲಲಿತಾ ನಾಯಕ್ ಅವರ ಕಥನ ಪರಂಪರೆ, ಸಾಹಿತ್ಯ ಚಿಂತನೆ ಹಾಗೂ ಗ್ರಹಿಕೆಯ ನೆಲೆಗಳನ್ನು ಹೇಳಲಾಗಿದೆ. ಈ ವೇಳೆ ಆಯಾ ಲೇಖಕಿಯರ ಸಾಹಿತ್ಯಿಕ ಪರಿಚಯ, ಸಾಹಿತ್ಯ ರಚನೆಯ ಸಂದರ್ಭ ಮತ್ತು ವಿಶೇಷತೆ, ಬರವಣಿಗೆಯಲ್ಲಿ ಎದುರಿಸಿದ ಸವಾಲುಗಳು, ದಶಕದ ಚಿಂತನೆಗಳ ಪ್ರಭಾವವನ್ನು ಸ್ತ್ರೀವಾದಿ ಹಿನ್ನೆಲೆಯಾಗಿ ದಾಖಲಿಸಲಾಗಿದೆ. ಹೀಗೆ ಆಯ್ದ ಲೇಖಕಿಯರ ಕಥನ ಪರಂಪರೆಯ ನಿರ್ವಚನೆಯಲ್ಲಿ ಕಂಡುಕೊಂಡ ಸ್ತ್ರೀವಾದಿ ಆಶಯ, ದೃಷ್ಟಿಕೋನಗಳನ್ನು ಆಧರಿಸಿ ನಾಲ್ಕನೇ ಅಧ್ಯಾಯದಲ್ಲಿ ಲೇಖಕಿಯರ ಪ್ರಾತಿನಿಧಿಕ ಕಥಾಸಾಹಿತ್ಯದ ಸ್ತ್ರೀಪಾತ್ರ ಪ್ರತಿನಿಧೀಕರಣದ

ಅಧ್ಯಯನ ಕೈಗೊಳ್ಳಲಾಗಿದೆ. ತಾಯಿ, ಹೆಂಡತಿ, ಗೃಹಿಣಿ, ವೇಶ್ಯೆ, ದೇವದಾಸಿ, ವಿವಾಹಬಾಹಿರ ಸಂಬಂಧಗಳು, ವಿಧವೆ, ಅವಿವಾಹಿತೆ, ಪರಿತ್ಯಕ್ತೆ ಪಾತ್ರಗಳ ವಿವೇಚನೆಯನ್ನು ಸ್ಥಿರ ಮತ್ತು ಪರಿವರ್ತಿತ ಮಾದರಿಯಾಗಿ ವಿಭಾಗಿಸಿಕೊಳ್ಳಲಾಗಿದೆ. ಇವುಗಳಿಗೆ ಪೂರಕವಾಗಿ ಬಂಜೆತನ, ಲಿಂಗತಾರತಮ್ಯ, ಬಹುಪತ್ನಿತ್ವ, ಲೈಂಗಿಕ ದೌರ್ಜನ್ಯದಂತಹ ವಿಚಾರಗಳನ್ನು ಸಹ ಪಾತ್ರ ಪ್ರತಿನಿಧೀಕರಣದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಅಧ್ಯಾಯ ಐದರಲ್ಲಿ ಸಮಾರೋಪ ದೊಂದಿಗೆ ಅಧ್ಯಯನದ ಫಲಿತಗಳು, ಮುಂದಿನ ಅಧ್ಯಯನದ ಸಲಹೆ ಸಾಧ್ಯತೆಗಳನ್ನು ಮಂಡಿಸಲಾಗಿದೆ.

## ೧.೬. ಈವರೆಗೆ ನಡೆದ ಅಧ್ಯಯನ ಸಮೀಕ್ಷೆ

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಪರ ವಿಚಾರ ಮತ್ತು ಸಂವೇದನೆಗಳು, ಮಹಿಳಾ ಅಭಿವ್ಯಕ್ತಿ, ಲೇಖಕಿಯರ ವ್ಯಕ್ತಿಗತ ಸಾಧನೆ, ಮಹಿಳಾ ದೌರ್ಜನ್ಯದ ನೆಲೆಗಳು, ಪಾತ್ರಗಳ ಪ್ರತಿನಿಧೀಕರಣ ಇತ್ಯಾದಿ ಹಲವಾರು ವಿಷಯಗಳನ್ನು ಆಧರಿಸಿದ ಅಧ್ಯಯನಗಳು ಹಾಗೂ ಕೃತಿಗಳು ವ್ಯಾಪಕವಾಗಿ ಬಂದಿವೆ. ಇಂತಹ ಪ್ರಮುಖ ಅಧ್ಯಯನಗಳ ವಿಮರ್ಶಾತ್ಮಕ ಸಮೀಕ್ಷೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಹೇಳುತ್ತಲೇ ಅಧ್ಯಯನಕ್ಕೆ ತಾತ್ವಿಕ ಆಯಾಮ ಕಲ್ಪಿಸಿಕೊಡುವುದು ಉದ್ದೇಶವಾಗಿದೆ.

ಗೀತಾ ಬಾಲಿ ನಾಯಕ್ ರವರ 'ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ' ಸಂಶೋಧನ ಪ್ರಬಂಧವು ಸ್ತ್ರೀ ನಿರ್ವಚನದ ವಿಭಿನ್ನ ನೆಲೆಗಳನ್ನು ವಿವಿಧ ಆಯಾಮಗಳಲ್ಲಿ ವಿವರಿಸುವ ಪ್ರಯತ್ನ ವಾಗಿದೆ. ಸ್ತ್ರೀ ಪರವಾದ ವಿಚಾರಗಳನ್ನು ಜೀವಾಳವಾಗಿರಿಸಿಕೊಂಡ ಸಾಹಿತ್ಯದ ಅಸ್ತಿತ್ವ ಎಲ್ಲಾ ಕಾಲಕ್ಕೂ ಇದೆ. ಆದರೆ ವ್ಯಾಪಕತೆಯ ದೃಷ್ಟಿಯಿಂದ ಹೆಚ್ಚು ವಿಸ್ತಾರಗೊಂಡದ್ದು ಎಪ್ಪತ್ತರ ದಶಕದ ನಂತರದಲ್ಲಿ ಎಂದು ಹೇಳುತ್ತಾರೆ. ಈ ದಶಕದ ಮುಂಚಿನ ಮತ್ತು ನಂತರದ ಪ್ರಾತಿನಿಧಿಕ ಲೇಖಕಿಯರ ಕಥೆಗಳ ಮೂಲಕ ಆಧುನಿಕ ಕಥಾ ಸಾಹಿತ್ಯ ನಡೆದು ಬಂದ ಹಾದಿಯನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ.

'ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಂಸ್ಕೃತಿ ಪ್ರಶ್ನೆ' ಸಂಪಿಗೆ ನಾಗರಾಜರವರ ಸಂಶೋಧನಾ ಪ್ರಬಂಧವು ಸಂಸ್ಕೃತಿ ಚರ್ಚೆಯ ಪ್ರಶ್ನೆಗಳನ್ನು ಇಟ್ಟುಕೊಂಡು ಕಳೆದ ಶತಮಾನದ ಮೂರು ದಶಕಗಳ ಕಥಾ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿದೆ. ಅಂದಿನ ಲೇಖಕರ, ಲೇಖಕಿಯರ ಕಥೆಗಳು ವಾಸ್ತವ ಕಾಲದ ಸಾಂಸ್ಕೃತಿಕ ವಿದ್ಯಮಾನಗಳಿಗೆ ಪ್ರತಿಕ್ರಿಯಿಸಿದ ಬಗೆಯನ್ನು ವ್ಯಾಪ್ತಿಯಾಗಿ ಒಳಗೊಂಡಿದೆ. ಪ್ರಮುಖ ಸಾಂಸ್ಕೃತಿಕ ವಿದ್ಯಮಾನಗಳನ್ನು ದಾಖಲಿಸುವಾಗ ೧೯೭೫ ರ ಮಹಿಳಾ ವರ್ಷಾಚರಣೆ, ಮಹಿಳಾ ಅಸ್ತಿತ್ವ, ಮಹಿಳಾ ಪ್ರಶ್ನೆ, ಸ್ತ್ರೀವಾದಿ ಸಂವೇದನೆಗಳ ಬಗ್ಗೆ ಹೇಳಿರುವುದು ವಿಶೇಷವೆನಿಸುತ್ತದೆ.

ಬಿ.ಕೆ.ಮಂಜುಳಾರವರ ' ಆಧುನಿಕ ಮಹಿಳಾ ಕಥಾ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ; ಒಂದು ಅಧ್ಯಯನ' ಒಂದು ದಶಕದ ವ್ಯಾಪ್ತಿಗೆ ಕಥಾ ಸಾಹಿತ್ಯದ ಅಧ್ಯಯನವನ್ನು ಒಳಪಡಿಸಿ, ಸ್ತ್ರೀ ಸಂವೇದನೆಯ ತಾತ್ವಿಕ ಸ್ವರೂಪವನ್ನು ಚರ್ಚಿಸಿರುವ ಸಂಶೋಧನಾ ಪ್ರಬಂಧವಾಗಿದೆ. ಆಧುನಿಕ ಮಹಿಳಾ ಸಾಹಿತ್ಯದ ಕಥಾ ರಚನೆಗಳನ್ನು ವಿವಿಧ ಮಾದರಿಗಳಾಗಿ ವಿಂಗಡಿಸಿದ್ದಾರೆ. ವಿಸ್ತಾರ ಸಂಖ್ಯೆಯ ಕಥೆಗಳನ್ನು ಕೇವಲ ಸಾರಾಂಶೀಕರಿಸದೆ , ಸ್ತ್ರೀವಾದದ ತಾತ್ವಿಕ ಹಿನ್ನಲೆಯಲ್ಲಿ ಸಮಗ್ರವಾಗಿ ವಿಶ್ಲೇಷಿಸಿರುವುದು ಅಧ್ಯಯನಕ್ಕೆ ಸ್ಪಷ್ಟ ಚೌಕಟ್ಟನ್ನು ಒದಗಿಸಿದೆ. ಪ್ರಸ್ತುತ ಪ್ರಬಂಧವು ಮಹಿಳಾ ಕಥಾ ಸಾಹಿತ್ಯವನ್ನು ಒಂದು ದಶಕದ ವ್ಯಾಪ್ತಿಗೆ ಸೀಮಿತಗೊಳಿಸಿ ನಡೆಸಲಾದ ಅಧ್ಯಯನ ಮಾದರಿಯಾಗಿದೆ.

'ನವೋದಯ ಕಾದಂಬರಿಗಳಲ್ಲಿ ಮಹಿಳೆಯ ಪ್ರತಿನಿಧೀಕರಣ' ರೂಪ ಎಂ. ಪಿ ರವರ ಸಂಶೋಧನ ಪ್ರಬಂಧವಾಗಿದೆ. ನವೋದಯದ ಪ್ರಮುಖ ಕಾದಂಬರಿಗಳಲ್ಲಿ ಮಹಿಳಾ ಪ್ರತಿನಿಧೀಕರಣವನ್ನು ಸ್ತ್ರೀವಾದಿ ಅಧ್ಯಯನ ವಿಧಾನದಿಂದ ಕುಟುಂಬ, ವಿವಾಹ, ಧರ್ಮ ಇತ್ಯಾದಿ ಪರಿಕಲ್ಪನೆಗಳ ಮೂಲಕ ಗ್ರಹಿಸಲಾಗಿದೆ. ಎಂ. ಕೆ. ಮಂಜುಳಾರವರ 'ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ ಮತ್ತು ಪಿ. ಲಂಕೇಶರವರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು', ಶಶಿರೇಖಾ ಎಸ್. ರವರ 'ಗೀತಾ ನಾಗಭೂಷಣರವರ ಕಥಾನಕಗಳ ವಿಮರ್ಶಾತ್ಮಕ ಅಧ್ಯಯನ', ಸುಕನ್ಯಾರವರ 'ದಲಿತ-ಬಂಡಾಯ ಸಾಹಿತ್ಯದಲ್ಲಿ ಮಹಿಳಾ ಪ್ರತಿನಿಧೀಕರಣ', ಬಿದರಿ ಚಂದ್ರಕಲಾರವರ 'ಮಹಿಳಾ ಬದುಕು-ಹೈದರಾಬಾದ್ ಕರ್ನಾಟಕ ಕಥನ ಸಾಹಿತ್ಯದಲ್ಲಿ', ಗಿರಿಜಾ ಶಾಸ್ತ್ರಿಯವರ 'ಕನ್ನಡದ ಸಣ್ಣ ಕಥೆಗಳು-ಒಂದು ಸ್ತ್ರೀವಾದಿ ಅಧ್ಯಯನ'. ಈ ಎಲ್ಲಾ ಮಹಾ ಪ್ರಬಂಧಗಳಲ್ಲಿಯೂ ಸ್ತ್ರೀ ಪಾತ್ರ ಮತ್ತು ಸಂವೇದನೆಗಳು, ಲಿಂಗ ತಾರತಮ್ಯ, ಮಹಿಳಾ ಪ್ರಶ್ನೆ, ಅನನ್ಯತೆ ಕುರಿತಾದ ಹಾಗೂ ಆಯಾ ಕಾಲ, ಪ್ರಾದೇಶಿಕತೆಗೆ ಸಂಬಂಧಿಸಿದ ಲೇಖಕ- ಲೇಖಕಿಯರ ಕಥಾ ಸಾಹಿತ್ಯವನ್ನು ಸ್ತ್ರೀವಾದಿ ಅಧ್ಯಯನಕ್ಕೆ ತೊಡಗಿಸಲಾಗಿದೆ.

ಕನ್ನಡದ ಅನನ್ಯ ಸಂವೇದನೆಯಾದ ವಚನ ಸಾಹಿತ್ಯವನ್ನು ಬಿಟ್ಟರೆ, ಸಮುದಾಯದ ನೋವು- ನಲಿವುಗಳು ಅದರೆಲ್ಲ ಸಹಜತೆಯಲ್ಲಿ ವಿಶೇಷವಾಗಿ ಅಭಿವ್ಯಕ್ತಗೊಂಡದ್ದು ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕದಲ್ಲಿ. ವಚನ ಚಳುವಳಿಯ ಸಂದರ್ಭಕ್ಕೆ ಸಮುದಾಯದ ನೆಲೆಯಲ್ಲಿ ಕಾಣಿಸಿಕೊಂಡ ಚಳುವಳಿಗಳ ಆಶಯ ಮಹಿಳಾ ಪರವಾಗಿದ್ದು, ಜಾಗತಿಕ ಮನ್ನಣೆಯನ್ನೂ ಪಡೆದವು. ಆದರೆ ನಂತರದ ಅವಧಿಯಲ್ಲಿ ಈ ತೆರನಾದ ಪ್ರಯತ್ನಗಳಾದರೂ ಅವು ತೀವ್ರ ಸ್ವರೂಪವನ್ನು ಪಡೆಯಲಿಲ್ಲ. ಪುನಃ ಮಹಿಳಾ ದಶಕದ ಸಂದರ್ಭಕ್ಕೆ ಸ್ತ್ರೀ ಪರ ವಿಚಾರಗಳು ಮಹಿಳಾ ಅಭಿವೃದ್ಧಿಯ ಉದ್ದೇಶದೊಂದಿಗೆ ಮುಂಚೂಣಿಗೆ ಬಂದವು. ಇದಕ್ಕೆ ಕಾರಣವಾದ ಮಹಿಳಾ ಚಳುವಳಿ ಹಾಗೂ

ಸ್ವರೂಪವನ್ನು ಕುರಿತಾಗಿ ಬಂದ ಹಲವಾರು ಕೃತಿಗಳನ್ನು ಸಹ ಸಮೀಕ್ಷೆಯಲ್ಲಿ ಗಮನಿಸಲಾಗಿದೆ. ಅಂತಹವುಗಳಲ್ಲಿ ಎಂ. ಉಷಾ ರವರ 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು', ಎನ್. ಗಾಯತ್ರಿ ಅವರ 'ಮಹಿಳಾ ಚಳುವಳಿಯ ಮಜಲುಗಳು', ಮಂಗಳ ಪ್ರಿಯದರ್ಶನಿಯವರ 'ಸ್ತ್ರೀ ವಾದ ಮತ್ತು ಮಹಿಳಾ ಅಧ್ಯಯನ ಪ್ರವೇಶಿಕೆ' ಪ್ರಮುಖವಾದವುಗಳಾಗಿವೆ.

ಇದರೊಟ್ಟಿಗೆ ಮಹಿಳಾ ದಶಕ, ಮಹಿಳಾವಾದ, ಸ್ತ್ರೀ ಸಂವೇದನೆ, ಸಾಹಿತ್ಯ ಕೃತಿಗಳಲ್ಲಿ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣ ಕುರಿತಾಗಿರುವ ಕೆಲವು ಪ್ರಮುಖ ಕೃತಿಗಳನ್ನು ಸಹ ಅನುಲಕ್ಷಿಸಲಾಗಿದೆ. ಎಂ.ಎಸ್. ಆಶಾದೇವಿಯರವರ 'ನಡುವೆ ಸುಳಿವ ಆತ್ಮ; ಸ್ತ್ರೀ ಸಂಕಥನದ ಚಹರೆಗಳು' ಮತ್ತು 'ಸ್ತ್ರೀಮತವನುತ್ತರಿಸಲಾಗದೆ' ಕೃತಿಗಳು ಸಾಹಿತ್ಯ ಮತ್ತು ಸ್ತ್ರೀಯ ಸಂಬಂಧವನ್ನು ಲಿಂಗರಾಜಕಾರಣದ ಹಿನ್ನಲೆಯಲ್ಲಿ ನಿರೂಪಿಸುತ್ತವೆ. ವಿವಿಧ ಕಾಲಮಾನದ ಲೇಖಕಿಯರ ನಡುವೆ ಬೆಳೆದು ಬಂದ ಸ್ತ್ರೀವಾದಿ ಸಾಹಿತ್ಯ ಮೀಮಾಂಸೆ, ಮಹಿಳಾ ಸಂವೇದನೆಗಳು ಅವರ ಕೃತಿಗಳಲ್ಲಿ ಗ್ರಹೀತಗೊಂಡ ಬಗೆಯನ್ನು ಪ್ರಸ್ತುತ ಕೃತಿಗಳಲ್ಲಿ ವಿವರಿಸಲಾಗಿದೆ.

ಲಿಂಗಸಮಾನತೆಯ ದನಿಯನ್ನಿರಿಸಿಕೊಂಡ ಸ್ತ್ರೀವಾದ, ಸ್ತ್ರೀತ್ವದ ಹೊಸ ನಿರ್ವಚನವನ್ನು ಹೇಗೆ ಕಟ್ಟಿಕೊಟ್ಟಿತು ಎಂಬ ಪ್ರಶ್ನೆಗೆ ಉತ್ತರಿಸುವ ಹಾದಿಯಲ್ಲಿ ಗಾಯತ್ರಿ ನಾವಡರವರ 'ಮಹಿಳಾ ಸಂಕಥನ' ಕೃತಿ ಪ್ರಮುಖವೆನಿಸುತ್ತದೆ. ಪ್ರಸ್ತುತ ಕೃತಿ ಒಳಗೊಳ್ಳುವ ಮಹಿಳೆಯ ಸಮಸ್ಯೆ – ಸವಾಲು, ಸ್ತ್ರೀ ಶಿಕ್ಷಣ, ಮಹಿಳಾ ಪ್ರಶ್ನೆ ಮತ್ತು ಮೀಸಲಾತಿ ಕುರಿತಾದ ಲೇಖನಗಳು ಮಹತ್ವದ್ದಾಗಿವೆ.

'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ' ಬರಗೂರು ರಾಮಚಂದ್ರಪ್ಪನವರ ಸಂಪಾದಿತ ಕೃತಿ. ಸ್ತ್ರೀಪಾತ್ರಾಭಿವ್ಯಕ್ತಿ ವಿಧಾನ, ಸಾಮಾಜಿಕ ಸಂಬಂಧ, ಸಂವೇದನೆಯ ನೆಲೆಗಳು, ಸ್ತ್ರೀಸ್ವಾತಂತ್ರ್ಯದ ಸ್ವರೂಪದಂತಹ ವಿಚಾರಗಳನ್ನು ಆಯಾ ಸಾಹಿತ್ಯಕ ಕಾಲಮಾನಗಳಿಗೆ ಹೊಂದಿಸಿ ಬರೆಯಲಾದ ಲೇಖನಗಳನ್ನೊಳಗೊಂಡ ಕೃತಿ ಇದಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಮಲ್ಲಿಕಾ ಘಂಟಿಯವರ 'ದಲಿತ– ಬಂಡಾಯ ಸಾಹಿತ್ಯದಲ್ಲಿ ಬದಲಾವಣೆಯ ಆಶಯ ಮತ್ತು ಸ್ತ್ರೀ' ಗಮನಿಸಬಹುದಾದ ಲೇಖನವಾಗಿದೆ. ೧೯೭೦–೮೦ ರ ಕಾಲ ಘಟ್ಟದ ಮಹತ್ವದ ಲೇಖಕ–ಲೇಖಕಿಯರ ಕಥೆ– ಕವನ–ಕಾದಂಬರಿಗಳ ವಿಮರ್ಶಾತ್ಮಕ ವಿವರಣೆಯೊಂದಿಗೆ ಈ ಅವಧಿಯ ವಿಶೇಷತೆ ಪ್ರಸ್ತುತ ಲೇಖನದಲ್ಲಿ ದಾಖಲಾಗಿದೆ.

ಒಟ್ಟಾರೆಯಾಗಿ ಅಧ್ಯಯನ ಸಮೀಕ್ಷೆಗೆ ಒಳಪಟ್ಟಿರುವ ಮಹಾ ಪ್ರಬಂಧ ಹಾಗೂ ಕೃತಿಗಳಲ್ಲಿ ವಿವಿಧ ಸಾಹಿತ್ಯ ಘಟ್ಟಗಳಲ್ಲಿ ಅಭಿವ್ಯಕ್ತಗೊಂಡ ಸ್ತ್ರೀ ಸಂವೇದನೆ, ವ್ಯಕ್ತಿಗತವಾಗಿ ವಿವಿಧ ಲೇಖಕ–ಲೇಖಕಿಯರ ಕಥೆ–ಕಾದಂಬರಿಗಳಲ್ಲಿ ಬಂದಿರುವ ಸ್ತ್ರೀಪ್ರತಿನಿಧೀಕರಣ, ಮಹಿಳಾ ಹೋರಾಟಗಳು ಇತ್ಯಾದಿ ಕುರಿತಾದ ಅಧ್ಯಯನ ಚರ್ಚೆ, ವಿಮರ್ಶೆಗಳು ಪ್ರಾಶಸ್ತ್ಯವನ್ನು ಪಡೆದುಕೊಂಡಿವೆ. ಪ್ರಸ್ತುತ

ಸಂಶೋಧನಾ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಮಹಿಳಾ ದಶಕದ ಪ್ರಾಮುಖ್ಯತೆ, ಹಿನ್ನಲೆ, ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಪ್ರಾತಿನಿಧಿಕ ಲೇಖಕಿಯರ ಕಥನಗಳು, ಅಲ್ಲಿನ ಪಾತ್ರಗಳ ಆಂಶಿಕ ಚರ್ಚೆ, ವಿಮರ್ಶೆಗಳನ್ನು ಸಹ ಕಾಣಬಹುದಾಗಿದೆ. ಆದರೆ ಪ್ರಸ್ತುತ ಮಹಾಪ್ರಬಂಧವು ಮಹಿಳಾ ದಶಕದ ಚಾರಿತ್ರಿಕ ಹಿನ್ನಲೆ, ಪ್ರಭಾವದ ಜಾಡಿನಲ್ಲಿಯೇ ಅಂದಿನ ಲೇಖಕಿಯರ ಕಥನಗಳಲ್ಲಿನ ಸ್ತ್ರೀ ಮತ್ತು ಆಕೆ ನಿರ್ವಹಿಸುವ ವಿವಿಧ ಪಾತ್ರಗಳ ಪ್ರತಿನಿಧೀಕರಣ ಕುರಿತಾದ ಅಧ್ಯಯನವಾಗಿದೆ. ಹಾಗಾಗಿ ಭಿನ್ನ ಹಾಗೂ ಹೊಸ ವಿಚಾರಗಳನ್ನು ಬಹುಶಿಸ್ತೀಯ ನೆಲೆ ಮತ್ತು ತೌಲನಿಕ ಮಾದರಿಗಳಲ್ಲಿ ವಿಮರ್ಶಾತ್ಮಕವಾಗಿ ಕಟ್ಟಿಕೊಡುವ ಪ್ರಯತ್ನ ಈ ಮಹಾ ಪ್ರಬಂಧದ್ದಾಗಿದೆ.

# ಅಧ್ಯಾಯ: ಎರಡು

# ಮಹಿಳಾ ದಶಕದ ಚಿಂತನೆಯ ಸ್ವರೂಪ:
# ಮಹಿಳಾ ಚಳುವಳಿಗಳು ಹಾಗೂ ಲೇಖಕಿಯರ ಕಥನಪರಂಪರೆ

೨.೧. ಪೀಠಿಕೆ

೨.೨. ಮಹಿಳಾ ದಶಕದ ಚಿಂತನೆಯ ಸ್ವರೂಪ

೨.೩. ಮಹಿಳಾ ಚಳುವಳಿಗಳ ಚಾರಿತ್ರಿಕ ಸಂದರ್ಭ

೨.೪. ಲೇಖಕಿಯರ ಕಥನಪರಂಪರೆ

೨.೫. ಸ್ತ್ರೀ ಪ್ರತಿನಿಧೀಕರಣದ ಪರಿಕಲ್ಪನಾತ್ಮಕ ಚರ್ಚೆ

ಅಧ್ಯಾಯ: ಎರಡು

# ಮಹಿಳಾ ದಶಕದ ಚಿಂತನೆಯ ಸ್ವರೂಪ: ಮಹಿಳಾ ಚಳುವಳಿಗಳು ಹಾಗೂ ಲೇಖಕಿಯರ ಕಥನಪರಂಪರೆ

## ೨.೧. ಪೀಠಿಕೆ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ೭೦ರ ದಶಕವನ್ನು ಹಲವು ವಿಶೇಷತೆಗಳಿಂದ ಗುರುತಿಸಲಾಗಿದೆ. ದಲಿತ–ಬಂಡಾಯ ಸಾಹಿತ್ಯದ ಬೆಳವಣಿಗೆ ಹಾಗೂ ಸಂಘಟನೆ, ಬರವಣಿಗೆಯ ದೃಷ್ಟಿಕೋನದಲ್ಲಾದ ಬದಲಾವಣೆ, ಅಧಿಕ ಸಂಖ್ಯೆಯ ಲೇಖಕಿಯರು ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದುದು ಇತ್ಯಾದಿಗಳು ಪ್ರಮುಖವಾಗಿವೆ. ಈ ಬಗೆಯ ಸಾಹಿತ್ಯ ವಲಯದ ಸಂದರ್ಭಗಳೊಂದಿಗೆ ಸಾಮಾಜಿಕ, ಕಾರ್ಮಿಕ, ಮಹಿಳಾ, ರೈತಾಪಿ, ರಾಜಕೀಯ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ವಿವಿಧ ಹೋರಾಟಗಳು ಮುನ್ನಲೆಗೆ ಬಂದವು. ಇದೇ ಅವಧಿಯಲ್ಲಿ ಮಹಿಳಾ ಹೋರಾಟಗಳ ಪ್ರತಿಫಲವಾಗಿ 'ಅಂತಾರಾಷ್ಟ್ರೀಯ ಮಹಿಳಾ ದಶಕ'ವನ್ನಾಗಿ ೧೯೭೫–೮೫ರ ಅವಧಿಯನ್ನು ಘೋಷಿಸಲಾಯಿತು. ಇದರ ಭಾಗವಾಗಿ ಅನೇಕ ಮಹಿಳಾಪರ ಕಾರ್ಯಕ್ರಮಗಳು ಸಹ ಜಾರಿಗೊಂಡವು. ಈ ವಿದ್ಯಮಾನ ಸಾಹಿತ್ಯವೂ ಸೇರಿದಂತೆ ವಿವಿಧ ಬಗೆಯ ಕ್ಷೇತ್ರಗಳ ಮೇಲೆ ಮಹತ್ತರವಾದ ಪರಿಣಾಮ ಬೀರಿತು. ವಿಶೇಷವಾಗಿ ಈ ಅವಧಿಯ ಲೇಖಕಿಯರ ಬರವಣಿಗೆ ಮತ್ತು ಚಿಂತನ ಕ್ರಮಗಳಲ್ಲಿಯೂ ಸಾಕಷ್ಟು ಭಿನ್ನತೆಗಳಾಗಿದ್ದವು. ಕಾರಣ ಸಾಹಿತ್ಯ ವಲಯದಲ್ಲಿ ಅದುವರೆಗೂ ಹೆಣ್ಣಿನ ಹಲವಾರು ಸಮಸ್ಯೆ, ಶೋಷಣೆಗಳಿಗೆ ವಿರುದ್ಧವಾಗಿ ಪ್ರಗತಿಪರ ಸ್ತ್ರೀ ಪಾತ್ರಗಳನ್ನು ಚಿತ್ರಿಸಿದ ಉದಾಹರಣೆಗಳಿದ್ದವು. ಆದರೆ ಮಹಿಳಾ ದಶಕದ ಅವಧಿಯಲ್ಲಿ ಸ್ತ್ರೀವಾದಿ ಚಿಂತನೆ, ಹೋರಾಟ, ಸಂಘಟನೆಗಳ ಫಲವಾಗಿ ಮತ್ತಷ್ಟು ಗಂಭೀರ ನೆಲೆಯ ಸ್ತ್ರೀ ಸಂವೇದನೆಗಳು ಲೇಖಕಿಯರ ಕಥಾ ಸಾಹಿತ್ಯದಲ್ಲಿ ಮುನ್ನೆಲೆಗೆ ಬಂದವು. ಆದ್ದರಿಂದಲೇ ಲೇಖಕಿಯರ ಕಥಾಸಾಹಿತ್ಯದಲ್ಲಿ ಪ್ರಚುರಗೊಂಡ ದೃಷ್ಟಿಕೋನಗಳಿಗೂ ಮತ್ತು ಮಹಿಳಾ ದಶಕದ ಚಿಂತನೆಗಳಿಗೂ ಇರುವ ಅಂತರ್‌ಸಂಬಂಧವನ್ನು ಸಂಶೋಧಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಇದಕ್ಕೆ ಪೂರಕವಾಗಿ ಮಹಿಳಾ ದಶಕದ ಅವಧಿಯಲ್ಲಿನ ಲೇಖಕಿಯರು ಮತ್ತು ಅದಕ್ಕೂ ಹಿಂದಿನ ಲೇಖಕಿಯರ ಕಥಾಪರಂಪರೆಯ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಮೂಲಕ ಎರಡೂ ಕಾಲಘಟ್ಟಗಳ ಲೇಖಕಿಯರ ಸಾಹಿತ್ಯಿಕ ಸಂದರ್ಭ, ಚಿಂತನೆ, ಪ್ರಾಮುಖ್ಯತೆ ಪಡೆದುಕೊಂಡ ವಿಷಯಗಳು ಇತ್ಯಾದಿ ವ್ಯತ್ಯಾಸಗಳನ್ನು ತೌಲನಿಕ ಅಧ್ಯಯನದೊಂದಿಗೆ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಗ್ರಹಿಕೆಗೆ ಬಂದ ಅಂಶಗಳನ್ನು ಆಧರಿಸಿ ಸ್ತ್ರೀ ಪರವಾದ ವಿಭಿನ್ನ ಚಿಂತನೆಗಳನ್ನು ಅಧ್ಯಯನ ಒಳಗೊಳ್ಳುವ ಲೇಖಕಿಯರ ಕಥಾಸಾಹಿತ್ಯದ ಸ್ತ್ರೀಪಾತ್ರಗಳಿಗೆ ಅನ್ವಯಿಸಿ ಚರ್ಚಿಸಲು ಸಾಧ್ಯವಾಗುತ್ತದೆ. ಅದೇ ರೀತಿ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಗೆ ಪ್ರೇರಣೆಯಾದ ಮಹಿಳಾ ದಶಕದ ಸ್ವರೂಪ, ಇದಕ್ಕೆ ಹಿನ್ನಲೆಯಾಗಿ ವಿವಿಧ ಹಂತಗಳಲ್ಲಿ ಜರುಗಿದ ಮಹಿಳಾ ಚಳುವಳಿಗಳ ಚಾರಿತ್ರಿಕ ಸಂದರ್ಭಗಳು ಹಾಗೂ ಸ್ತ್ರೀ ಪ್ರತಿನಿಧೀಕರಣದ ಪರಿಕಲ್ಪನಾತ್ಮಕ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಹೇಳಲಾಗಿದೆ.

## ೨.೨. ಮಹಿಳಾ ದಶಕದ ಚಿಂತನೆಯ ಸ್ವರೂಪ

ಅಂತರಾಷ್ಟ್ರೀಯ ಮಹಿಳಾ ದಶಕ ಮತ್ತು ಮಹಿಳಾ ಚಳುವಳಿಗಳ ಹಿನ್ನೆಲೆಯಾಗಿ ಸಾಹಿತ್ಯ ಕ್ಷೇತ್ರದಲ್ಲಿ ಲೇಖಕಿಯರ ಆಲೋಚನೆ, ಅಭಿವ್ಯಕ್ತಿ, ಬರವಣಿಗೆಗಳು ಹೊಸದೊಂದು ಆಯಾಮವನ್ನು ಪಡೆದುಕೊಂಡವು. ಈ ಮೂಲಕ ಅಂದಿನ ಸಾಮಾಜಿಕ, ಕೌಟುಂಬಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಇತ್ಯಾದಿ ಎಲ್ಲಾ ವಲಯಗಳಲ್ಲಿ ಹೆಣ್ಣಿನ ವಾಸ್ತವ ಸ್ಥಿತಿ ಗತಿಗಳ ಗ್ರಹಿಕೆ ಮತ್ತು ಅವಲೋಕನ ಸಾಧ್ಯವಾಯಿತು. ಮಹಿಳಾ ದಶಕದ ಅವಧಿಯಲ್ಲಿ ಮುನ್ನೆಲೆಗೆ ಬಂದ ವಿವಿಧ ಸ್ತ್ರೀವಾದಿ ಸಂಘಟನೆಗಳು, ಮಹಿಳಾ ಅಭಿವೃದ್ಧಿಗಾಗಿ ಸರ್ಕಾರ ರೂಪಿಸಿದ ಕಾರ್ಯಕ್ರಮಗಳು, ಹೆಣ್ಣಿನ ಬಾಹ್ಯ ಮತ್ತು ಖಾಸಗಿ ವಲಯದ ಸಮಸ್ಯೆಗಳಿಗೆ ಪರಿಹಾರವಾಗಿ ರೂಪಿಸಿದ ಕಾಯ್ದೆ-ಕಾನೂನುಗಳು ಹಲವಾರು ಲೇಖಕಿಯರ ಬದುಕು ಮತ್ತು ಬರವಣಿಗೆಗೆ ಪ್ರೇರಣೆಯಾದವು. ಈ ಮೂಲಕ ಇವೇ ಮಹತ್ವದ ವಿಚಾರಗಳನ್ನು ಲೇಖಕಿಯರು ತಮ್ಮ ಕಥಾಸಾಹಿತ್ಯದ ಸ್ತ್ರೀ ಪಾತ್ರಗಳಲ್ಲಿ ಅನ್ವಯಿಸಿ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಸಂಚಲನವನ್ನೇ ಸೃಷ್ಟಿಸಿದರು. ಅದರಲ್ಲೂ ಪ್ರಸ್ತುತ ಅಧ್ಯಯನ ಒಳಗೊಳ್ಳುವ ಪ್ರಾತಿನಿಧಿಕ ಲೇಖಕಿಯರು ದಲಿತ, ಬುಡಕಟ್ಟು, ಮುಸ್ಲಿಂ, ಬಡವ-ಶ್ರೀಮಂತ, ವಿದ್ಯಾವಂತ-ಅವಿದ್ಯಾವಂತ, ಸಾಂಪ್ರದಾಯಿಕ-ಆಧುನಿಕ, ಹಳ್ಳಿ-ನಗರ ಮುಂತಾದ ಭಿನ್ನ ವಲಯಗಳ ಸಂಸ್ಕೃತಿ ಹಾಗೂ ಪ್ರಾದೇಶಿಕ ಹಿನ್ನೆಲೆಯುಳ್ಳ ಸ್ತ್ರೀ ಪಾತ್ರಗಳನ್ನು ತಮ್ಮ ಕಥಾ ಸಾಹಿತ್ಯದಲ್ಲಿ ತರುವಂತಾಯಿತು. ಪರಿಣಾಮ ಮಹಿಳಾ ದಶಕದ ಚಿಂತನೆಗಳು, ಜಾರಿಯಾದ ಸ್ತ್ರೀಪರ ಕಾನೂನುಗಳು, ಯೋಜನೆಗಳು, ಹೋರಾಟಗಳು ಸಹ ಲೇಖಕಿಯರ ಕಥಾ ಸಾಹಿತ್ಯದಲ್ಲಿ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣದ

ಮೂಲಕ ದಾಖಲಾಗಿವೆ. ಆದ್ದರಿಂದ ಸಾಹಿತ್ಯ ಸೇರಿದಂತೆ ಇತರೆ ಎಲ್ಲಾ ಕ್ಷೇತ್ರಗಳಲ್ಲಿ ಇಂಥಹದೊಂದು ಮಹತ್ವದ ಬದಲಾವಣೆಗೆ ಕಾರಣವಾದ ಮಹಿಳಾ ದಶಕದ ಹಿನ್ನೆಲೆ, ಚಿಂತನೆ ಕಾರ್ಯಕ್ರಮಗಳ ಅನುಷ್ಠಾನ, ಪರಿಣಾಮಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಜಾಗತಿಕವಾಗಿ ನಡೆದ ಮಹಿಳಾ ಚಳುವಳಿಗಳ ಪರಿಣಾಮವಾಗಿ ಅಂತಾರಾಷ್ಟ್ರೀಯ ಮಹಿಳಾ ವರ್ಷವಾಗಿ ೧೯೭೫ನೆಯ ಇಸ್ವಿಯನ್ನು ಆಚರಿಸಲಾಯಿತು. ಆದರೆ, ಈ ಆಚರಣೆ ಇಡಿಯಾಗಿ ೧೯೭೫-೮೫ರ ಒಂದು ದಶಕದ ಅವಧಿಯನ್ನು 'ಅಂತಾರಾಷ್ಟ್ರೀಯ ಮಹಿಳಾ ದಶಕ'ವೆಂದು ಘೋಷಿಸುವಷ್ಟು ವಿಸ್ತಾರತೆಯನ್ನು ತಾಳಿತು. ಯಾವುದೇ ಒಂದು ಸಮಾಜದ ಅಭಿವೃದ್ಧಿ ಮಹಿಳೆಯರ ಸ್ಥಿತಿಗತಿಗಳನ್ನವಲಂಬಿಸಿಯೇ ಸಾಧ್ಯ ಎಂಬುದನ್ನು ವಿಶ್ವಸಂಸ್ಥೆ ಗ್ರಹಿಸಿತು. ಮಹಿಳಾ ವರ್ಷದ ಸಂದರ್ಭದಲ್ಲಿ ಮಹಿಳೆಯರ ಪ್ರಗತಿ ಮತ್ತು ಪರಿಣಾಮಗಳ ಕುರಿತಾಗಿ ಸಮೀಕ್ಷೆಯೊಂದನ್ನು ಕೈಗೊಂಡಿತು. ಈ ಸಮೀಕ್ಷೆಯ ನಂತರ 'ವಿಮೆನ್ಸ್ ಇಂಟರ್ ನ್ಯಾಶನಲ್ ಡೆಮಾಕ್ರಟಿಕ್ ಫೆಡರೇಶನ್' ಸಂಘಟನೆಯು ವಿಶ್ವಸಂಸ್ಥೆಗೆ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತು ಸಲಹೆಯೊಂದನ್ನು ನೀಡಿತು. ಈ ಸಲಹೆಯಂತೆ ೧೯೭೫ರಿಂದ ೧೯೮೫ರ ಅವಧಿಯನ್ನು 'ಅಂತಾರಾಷ್ಟ್ರೀಯ ಮಹಿಳಾ ದಶಕ'ವನ್ನಾಗಿ ಘೋಷಿಸುವುದಾಗಿತ್ತು. ಕಾರಣ ಹಲವು ಶತಮಾನಗಳಿಂದ ದಮನಿತವಾಗಿರುವ ಸ್ತ್ರೀ ಸಮುದಾಯ ಪ್ರಗತಿ ಹೊಂದಲು ಒಂದು ವರ್ಷದ ಅವಧಿ ಕಡಿಮೆ ಎಂಬುದು ಸಮಿತಿ ಗುರುತಿಸಿದ ವಾಸ್ತವ ವಿಚಾರವಾಗಿತ್ತು. ಇದೇ ವೇಳೆಗೆ ಮೆಕ್ಸಿಕೋದಲ್ಲಿ ಜಾಗತಿಕ ಸಮಾವೇಶವನ್ನು ಹಮ್ಮಿಕೊಳ್ಳಲಾಯಿತು. ಮಹಿಳೆಯರ ಪ್ರಗತಿಗಾಗಿ ಪುರುಷ ಸಮಾಜವೂ ಕಾರ್ಯನಿರ್ವಹಿಸಬೇಕು. ಮಹಿಳೆಯರಿಂದ ಮಾತ್ರ ಮಹಿಳೆಯರ ಸಮಸ್ಯೆಗಳ ನಿವಾರಣೆ ಸಾಧ್ಯವಿಲ್ಲ. ಇದಕ್ಕೆ ದೇಶ, ಸಮಾಜ, ವರ್ಗ ಎಲ್ಲವೂ ಕಟಿಬದ್ಧವಾಗಿರಬೇಕೆಂದು ಆಶಿಸಲಾಯಿತು. ಪರಿಣಾಮವಾಗಿ ಮೆಕ್ಸಿಕೋದ ಈ ಸಮಾವೇಶದಲ್ಲಿ ಮಹಿಳೆಯರ ಸಮಾನತೆ, ಅಭಿವೃದ್ಧಿ, ಶಾಂತಿಯನ್ನು ಸಾಧಿಸುವ ಉದ್ದೇಶದೊಂದಿದೆ ೧೯೭೫-೮೫ರ ಅವಧಿಯನ್ನು 'ಅಂತಾರಾಷ್ಟ್ರೀಯ ಮಹಿಳಾ ದಶಕ'ವನ್ನಾಗಿ ಘೋಷಿಸಲಾಯಿತು.

ಅಂತಾರಾಷ್ಟ್ರೀಯ ಮಹಿಳಾ ದಶಕವು ಜಾಗತಿಕ, ರಾಷ್ಟ್ರೀಯ ಹಾಗೂ ಪ್ರಾದೇಶಿಕತೆಗನುಗುಣವಾಗಿ ಮಹಿಳೆಯರ ಸಮಾನತೆಯನ್ನು ಸಾಧಿಸಲು ಇದ್ದ ತೊಡಕುಗಳನ್ನು ನಿವಾರಿಸುವ ಹಾದಿಯಲ್ಲಿ ರೂಪಿತವಾಯಿತು. ಮಹಿಳೆಯ ಶೋಷಣೆ, ಆಕೆಯ ನಿಕೃಷ್ಟ ಸ್ಥಿತಿಯ ಕಾರಣಗಳನ್ನು ಶೋಧಿಸಿ, ಮಹಿಳಾ ಉದ್ಯೋಗ, ಶಿಕ್ಷಣ, ಆರೋಗ್ಯದ ಗುರಿಗಳನ್ನು ಸಾಧಿಸಲು ಪ್ರಯತ್ನಿಸಲಾಯಿತು. ಮಹಿಳಾ ದಶಕದ ಮಧ್ಯಂತರ ಅವಧಿಯಾದ ೧೯೮೦ರಲ್ಲಿ ಹಾಗೂ ೧೯೮೫ರಲ್ಲಿ ಕ್ರಮವಾಗಿ

ಕೊಪೆನ್‌ಹೇಗ್ ಮತ್ತು ನೈರೋಬಿಯಾಗಳಲ್ಲಿ ಜಾಗತಿಕ ಸಮಾವೇಶಗಳು ನಡೆದವು. ಜಗತ್ತಿನ ಹಲವಾರು ರಾಷ್ಟ್ರಗಳು ಭಾಗವಹಿಸಿದ ಈ ಸಮಾವೇಶಗಳಲ್ಲಿ ಮಹಿಳಾ ದಶಕದ ಸಾಧನೆಗಳನ್ನು ಪರಾಮರ್ಶಿಸಲಾಯಿತು. ಮಹಿಳೆಯ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳಲ್ಲಿ ಸುಧಾರಣೆಗಳನ್ನು ತರುವ ನಿಟ್ಟಿನಲ್ಲಿ ನಿರ್ಧರಿಸಲಾಯಿತು. ಇದಕ್ಕಾಗಿ ಪ್ರತಿಯೊಂದು ದೇಶದ ಸರ್ಕಾರಗಳು ಕ್ರಮಕೈಗೊಳ್ಳುವಂತೆ ಸೂಚಿಸಲಾಯಿತು. ಸ್ತ್ರೀಮಾರಾಟ, ಅಸಹಾಯಕತೆ, ಶೋಷಣೆ, ಲೈಂಗಿಕ ಪ್ರವಾಸೋದ್ಯಮ, ಒತ್ತಾಯದ ವೇಶ್ಯಾವೃತ್ತಿ ಮುಂತಾದ ಮಹಿಳಾ ಸಮಸ್ಯೆಗಳನ್ನು ತಡೆಯಲು ಕರೆ ನೀಡಲಾಯಿತು. ಆಯಾದೇಶಗಳು ತಮ್ಮ ದೇಶದ ಆರ್ಥಿಕ, ರಾಜಕೀಯ ಸ್ಥಿತಿಗಳನ್ನು ಅನುಸರಿಸಿ ಮಹಿಳೆಯರ ಸಮಸ್ಯೆಗಳಿಗೆ ಪರಿಹಾರಗಳನ್ನು ರೂಪಿಸುವಂತೆ ಸೂಚಿಸಲಾಯಿತು. ಕುಟುಂಬ, ಸಮಾಜ, ಆರ್ಥಿಕ, ಉದ್ಯೋಗ ಇತ್ಯಾದಿ ಎಲ್ಲಾ ಕ್ಷೇತ್ರಗಳಲ್ಲಿ ಮಹಿಳೆಯ ಹಕ್ಕುಗಳನ್ನು ಆಯಾ ದೇಶದ ಸರ್ಕಾರಗಳು ಮಾನ್ಯ ಮಾಡಬೇಕೆಂದು ಹೇಳಲಾಯಿತು ಆಗ ಅನೇಕ ರಾಷ್ಟ್ರೀಯ, ಅಂತಾರಾಷ್ಟ್ರೀಯ, ಪ್ರಾದೇಶಿಕ ವೇದಿಕೆಗಳಾದ ILO, FAO, UNESCO, UNICEF, WHO, UNIDO ಗಳು ಈ ದಶಕದ ಕಾರ್ಯಕ್ರಮಗಳನ್ನು ಅಂಗೀಕರಿಸಿದವು. ವಿಶ್ವಸಂಸ್ಥೆಯ ಮಾರ್ಗದರ್ಶನದ ಅನುಸಾರ ವೈವಿಧ್ಯಮಯ ಮಹಿಳಾಪರ ಕಾರ್ಯಕ್ರಮಗಳನ್ನು ರೂಪಿಸಿ, ಜಾರಿಗೊಳಿಸಿದವು. ಆದರೆ ಮಹಿಳೆಯರ ಸ್ಥಿತಿಗತಿಗಳ ಸುಧಾರಣೆಗಾಗಿ ಎಷ್ಟೆಲ್ಲಾ ಮಹತ್ವದ ಯೋಜನೆಗಳನ್ನು ರೂಪಿಸಿದಾಗಲೂ, ಅವುಗಳ ಕಾರ್ಯಪರತೆ ಮತ್ತು ಪಾರದರ್ಶಕತೆಗಳಲ್ಲಿ ನಿಧಾನಗತಿಯನ್ನು ಗುರುತಿಸಲಾಯಿತು. ಹಾಗಾಗಿ ಪುನಃ ೧೯೮೬ ರಿಂದ ೨೦೦೦ರ ವರ್ಷದ ವರೆಗೂ ಮಹಿಳಾ ದಶಕದ ಕಾರ್ಯಕ್ರಮಗಳನ್ನು ವಿಸ್ತರಿಸಲು ವಿಶ್ವಸಂಸ್ಥೆ ನಿರ್ಧರಿಸಿತು.

**೨.೨.೧. ಭಾರತದಲ್ಲಿ ಮಹಿಳಾ ದಶಕದ ಕಾರ್ಯಕ್ರಮಗಳು**

ಅಂತಾರಾಷ್ಟ್ರೀಯ ಮಹಿಳಾ ವರ್ಷಾಚರಣೆಯಿಂದ ಭಾರತವೂ ಹೊರತಾಗಿರಲಿಲ್ಲ. ಸರ್ಕಾರದ ವಿವಿಧ ಅಂಗಸಂಸ್ಥೆಗಳು ಈ ಕಾರ್ಯಕ್ರಮವನ್ನು ವಿಭಿನ್ನ ರೀತಿಯಲ್ಲಿ ಆಚರಿಸಿದವು. ಅವುಗಳಲ್ಲಿ ಮಹಿಳಾ ಅಂಚೆ ಕಚೇರಿಗಳಿಗೆ ಚಾಲನೆ, ಮಹಿಳಾ ವರ್ಷದ ನೆನಪಿನ ಅಂಚೆ ಚೀಟಿ ಜಾರಿ, ಕುಟುಂಬ ಯೋಜನೆಯ ವಿಸ್ತರಣೆ, ವಿಚಾರ ಸಂಕಿರಣ, ವಿಶೇಷ ಪ್ರಕಟಣೆ ಇತ್ಯಾದಿಗಳು ಪ್ರಮುಖವಾದವು. ಇವುಗಳ ಆಚರಣೆಗಾಗಿಯೇ ಪ್ರಧಾನಮಂತ್ರಿಯವರ ಅಧ್ಯಕ್ಷತೆಯಲ್ಲಿ ೩೭ ಮಹಿಳೆಯರು ಮತ್ತು ೪೧ ಮಹಿಳಾ ಸಂಘಟನೆಗಳನ್ನೊಳಗೊಂಡ ಸಮಿತಿಯನ್ನು ರಚಿಸಿದ್ದು, ವಿಶೇಷ ಸಂಗತಿ. ಸರ್ಕಾರದ ತುರ್ತು ಪರಿಸ್ಥಿತಿಯ ನಡುವೆಯೂ ಮಹಿಳಾ ವರ್ಷಚರಣೆ ನೊಂದ ಮಹಿಳೆಯರಿಗೆ ಮತ್ತು ಮಹಿಳಾ ಪರ ಸಂಘಟನೆಗಳಿಗೆ ಮತ್ತಷ್ಟು ಗಟ್ಟಿ ದನಿಯನ್ನು, ಸಂಘಟಿತ ರೂಪವನ್ನು ಕೊಟ್ಟಿತು. ಎಂ.ಉಷಾರವರು "೧೯೭೫ರ ನಂತರ ಭಾರತದಲ್ಲಿ ಪ್ರಚಾರಗೊಂಡ ಸ್ತ್ರೀವಾದಿ ಚಿಂತನೆ ಮಹಿಳಾ ಸಂಘಟನೆಗಳ ಧ್ಯೇಯ-ಧೋರಣೆಗಳನ್ನು ಪುನರ್

ನಿರ್ದೇಶಿಸಿದವು. ಅದರ ಮೊದಲ ಪರಿಣಾಮವೆಂದರೆ, ಅದುವರೆಗಿನ ಸುಧಾರಣವಾದಿ ಚಳುವಳಿ ಸ್ವಾಯುತ್ತ ಚಳುವಳಿಯಾಗಿ ಬದಲಾದುದು"[೧] ಎಂದು ಹೇಳುವ ಮೂಲಕ ಈ ಅವಧಿಯಲ್ಲಾದ ಬದಲಾವಣೆಯನ್ನು ಗುರುತಿಸುತ್ತಾರೆ. ಸ್ತ್ರೀವಾದಿ ಚಿಂತನೆಗಳ ಪ್ರಭಾವದಿಂದ ಸುಧಾರಣವಾದಿ ಚಳುವಳಿಗಳ ಸಂದರ್ಭಕ್ಕಿಂತಲೂ ಭಿನ್ನವಾಗಿ ಮಹಿಳಾ ವಿಷಯಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಯಿತು. ಈ ಸಂದರ್ಭದಲ್ಲಿ ಬಾಹ್ಯವಾಗಿ ಮಾತ್ರ ಆಕೆಯ ಸಮಸ್ಯೆ, ಸನ್ನಿವೇಶಗಳನ್ನು ಪರಿಗಣಿಸದೆ, ವ್ಯವಸ್ಥೆಯೊಳಗೆ ಆಕೆಯ ಅಸ್ತಿತ್ವವನ್ನು ಪರಿಗಣನೆಗೆ ತೆಗೆದುಕೊಳ್ಳಲಾಯಿತು. ಕೇವಲ ಹೆಣ್ಣಿನ ಬಾಹ್ಯ ಸಮಸ್ಯೆಗಳ ನಿವಾರಣೆ ಸಂಪೂರ್ಣವಾಗಿ ಸಮಾಜದ ಸಂರಚನೆಯ ನೆಲೆಯಿಂದಲೇ ಆರಂಭವಾಗಬೇಕು. ವಿವಾಹ, ಕುಟುಂಬ, ಧರ್ಮದಂತಹ ಸಾಮಾಜಿಕ ಸಂಸ್ಥೆಗಳಲ್ಲಿನ ಪೂರ್ವಾಗ್ರಹಗಳು, ಧೋರಣೆಗಳು ಬದಲಾಗಬೇಕೆಂಬ ಆಶಯ ಪ್ರಸ್ತಾಪವಾಯಿತು.

ರಾಜಕೀಯ ಪಕ್ಷಗಳು ಮಹಿಳಾ ಶಾಖೆಗಳನ್ನು ತೆರೆದಿದ್ದೇ ಅಲ್ಲದೆ ಮಹಿಳಾ ದೌರ್ಜನ್ಯದಂತಹ ವಿಷಯಗಳ ಕಡೆ ಗಮನಹರಿಸುವಂತಾಯಿತು. ಮಹಿಳೆ ಮತ್ತು ಚುನಾವಣೆಯ ಕುರಿತಾದ ದೃಷ್ಟಿಕೋನ ಬದಲಾಯಿತಲ್ಲದೇ, ಮಹಿಳೆಯರು ರಾಜಕೀಯವಾಗಿ ಹೆಚ್ಚು ಕ್ರಿಯಾಶೀಲರಾದರು. ಧಾರ್ಮಿಕವಾಗಿಯೂ ಹಲವಾರು ಕಟ್ಟುಪಾಡು, ಕಾನೂನುಗಳ ಮೂಲಕ ಹೆಣ್ಣಿನ ಶೋಷಣೆ ಹಾಗೂ ಧಾರ್ಮಿಕ ಮೂಲಭೂತವಾದಿತನದ ವಿರುದ್ಧ ಪ್ರಗತಿಪರ ಹೋರಾಟಗಳು ನಡೆದವು. ಹೆಣ್ಣಿನ ಅಪೌಷ್ಠಿಕತೆ, ಆರೋಗ್ಯ ಸೌಲಭ್ಯಗಳ ಕೊರತೆ, ಹೆಣ್ಣು ಶಿಶುವಿನ ಮರಣ ಪ್ರಮಾಣಗಳ ಕುರಿತಾಗಿ ಈ ದಶಕದಲ್ಲಿ ಸುಧಾರಣೆಯ ಕ್ರಮಗಳನ್ನು ರೂಪಿಸಲಾಯಿತು. ಇದಕ್ಕಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಕುಟುಂಬ ಯೋಜನಾ ಕೇಂದ್ರಗಳ ಮೂಲಕ ಶ್ರಮಿಸಲಾಯಿತು. ವಿಶ್ವ ಆರೋಗ್ಯ ಸಂಸ್ಥೆ, ಅಂತಾರಾಷ್ಟ್ರೀಯ ಹಣಕಾಸು ನಿಧಿ, ಫೋರ್ಡ್ ಫೌಂಡೇಶನ್‌ನಂತಹ ಅಂತಾರಾಷ್ಟ್ರಿಯ ಸಂಸ್ಥೆಗಳು ತಮ್ಮ ಸಹಾಯ ಹಸ್ತವನ್ನು ಚಾಚಿದವು. ಹಾಗಾಗಿ ಈ ದಶಕವನ್ನು 'ಮಹಿಳಾ ಚಳುವಳಿಯ ಎರಡನೆಯ ಅಲೆ' ಎನ್ನಲಾಗಿದೆ. ಮಹಿಳಾ ಪರ ಹೋರಾಟ ಮತ್ತು ಪ್ರಚಾರದ ಮೂಲಕ ಜಾಗೃತಿ ಮೂಡಿಸುವ ಸ್ವಾಯತ್ತ ಮಹಿಳಾ ಸಂಘಟನೆಗಳು, ಕಾರ್ಮಿಕ ಕೃಷಿ ಸಂಘಟನೆಗಳು, ಬುಡಕಟ್ಟು ಜನಾಂಗ ಸಂಘಟನೆಗಳು, ವೃತ್ತಿಪರ ಮಹಿಳೆಯರು, ಲೇಖಕಿಯರು, ವಿಜ್ಞಾನಿಗಳು, ಶಿಕ್ಷಕಿಯರು, ಕಲಾವಿದರು, ರಾಜಕೀಯ ಪಕ್ಷಗಳ ಕಾರ್ಯಕರ್ತೆಯರು, ಪತ್ರಕರ್ತೆಯರ ಹಲವಾರು ಸಂಘಟನೆಗಳು ವಿವಿಧ ಉದ್ದೇಶಗಳೊಂದಿಗೆ ಅಸ್ತಿತ್ವಕ್ಕೆ ಬಂದವು.

ಮಹಿಳಾ ಶೋಷಣೆಯ ವಿರುದ್ಧ ಹೋರಾಡಲು ಕರಪತ್ರ, ಭಿತ್ತಿಪತ್ರಗಳು, ಪತ್ರಿಕಾ ಲೇಖನ, ಸಹಿಸಂಗ್ರಹ, ಪ್ರತಿಭಟನೆ, ಧರಣಿ, ಮೆರವಣಿಗೆ, ಸಭೆಗಳನ್ನು ಮಾಧ್ಯಮಗಳನ್ನಾಗಿಸಿಕೊಳ್ಳ ಲಾಯಿತು. ಎಲ್ಲಾ ಪ್ರಾಂತೀಯ ಭಾಷೆಗಳಲ್ಲೂ ಚಳುವಳಿಗೆ ಸಂಬಂಧಿಸಿದ ಮಹಿಳಾ ಪತ್ರಿಕೆಗಳು

ಹೊರಬಂದವು. ಇಷ್ಟೇ ಅಲ್ಲದೆ, ಮಹಿಳೆಯರ ಸ್ಥಿತಿಗತಿಗಳ ಅಧ್ಯಯನಕ್ಕಾಗಿ ಆರೋಗ್ಯ, ಮಾಧ್ಯಮ, ಕಾನೂನು, ಕೌಟುಂಬಿಕ ಹಿಂಸೆಗಳಂತಹ ವಿಷಯಗಳ ಮೇಲೆ ಸಮೀಕ್ಷೆಯನ್ನು ಕೈಗೊಳ್ಳಲಾಯಿತು. ಕೌಟುಂಬಿಕ ವಲಯದಲ್ಲಿ, ದುಡಿಯುವ ಸ್ಥಳಗಳಲ್ಲಿ ಹಾಗೂ ಧರ್ಮದ ಹೆಸರಿನಲ್ಲಿ ಹಿಂದುಳಿದ, ಅಲ್ಪಸಂಖ್ಯಾತ, ದಲಿತ ಮಹಿಳೆಯರ ಮೇಲಿನ ದೈಹಿಕ, ಮಾನಸಿಕ, ಲೈಂಗಿಕ, ಭಾವನಾತ್ಮಕ ದೌರ್ಜನ್ಯಗಳ ವಿರುದ್ಧ ಈ ಸಂಘಟನೆಗಳು ಹೆಚ್ಚು ಕ್ರಿಯಾಶೀಲವಾದವು. ಸರ್ಕಾರದ ತುರ್ತುಪರಿಸ್ಥಿತಿಯನ್ನು ಸಹ ಪ್ರತಿಭಟಿಸಿದ ಎದೆಗಾರಿಕೆಯನ್ನು ಸಂಘಟನೆಗಳು ಮೆರೆದವು. ಆದರೆ ಇದಕ್ಕೆ ಯಾವ ಸಕಾರಾತ್ಮಕ ಪ್ರತಿಕ್ರಿಯೆ ದೊರೆಯದೆ ಮಹಿಳಾಪರ ವಿಚಾರಗಳಿಗೆ ತಾತ್ಕಾಲಿಕ ಹಿನ್ನಡೆಯಾಯಿತು.

ತುರ್ತು ಪರಿಸ್ಥಿತಿ ತೆರವುಗೊಂಡ ನಂತರ ಪೊಲೀಸ್‌ರಿಂದಲೇ ಅತ್ಯಾಚಾರದಂತಹ ದೌರ್ಜನ್ಯಕ್ಕೆ ಒಳಗಾದ ಹಲವಾರು ಪ್ರಕರಣಗಳ ವಿರುದ್ಧ ವ್ಯಾಪಕ ಹೋರಾಟಗಳಾದವು. ಈ ಮೂಲಕ ಅತ್ಯಾಚಾರ ಕಾನೂನಿನ ತಿದ್ದುಪಡಿಗೆ ಒತ್ತಾಯವಾಯಿತು. ಇದೆಲ್ಲಕ್ಕೂ ಹೆಚ್ಚಾಗಿ ಮಹಿಳೆಯರ ವಿಷಯಗಳ ಕುರಿತಾದ 'ಮಹಿಳಾ ಅಧ್ಯಯನ' ಒಂದು ಶೈಕ್ಷಣಿಕ ಶಿಸ್ತಾಗಿ ಒಪ್ಪಿತವಾಯಿತು. ಭಾರತದಲ್ಲಿ ಸಹ ಮುಂಬಯಿಯ ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯದಲ್ಲಿ ೧೯೭೪ರಲ್ಲಿ ಮಹಿಳಾ ಅಧ್ಯಯನದ ಸಂಶೋಧನಾ ಘಟಕ, ದೆಹಲಿಯ ಮಹಿಳಾ ಅಭಿವೃದ್ಧಿ ಅಧ್ಯಯನ ಕೇಂದ್ರಗಳ ಸ್ಥಾಪನೆಯಾಯಿತು. ೧೯೭೫ರ ನಂತರದ ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ವಿಷಯಗಳು ಮತ್ತಷ್ಟು ಪ್ರಾಶಸ್ತ್ಯ ಪಡೆದುಕೊಂಡವು. ಕೌಟುಂಬಿಕ ನ್ಯಾಯಾಲಯಗಳ ಸ್ಥಾಪನೆಯಾಯಿತು. ಮಹಿಳಾ ಅಭಿವೃದ್ಧಿಯ ಸಾಧನೆಗೆ ರಾಷ್ಟ್ರಮಟ್ಟದ ಸಮಿತಿಗಳ ರಚನೆ ಮತ್ತು ಮಹಿಳೆಯರ ಕಲ್ಯಾಣ ಹಾಗೂ ಅಭಿವೃದ್ಧಿ ಕಾರ್ಯತಂತ್ರಗಳನ್ನು ರೂಪಿಸಲಾಯಿತು. ೧೯೮೫ರ ವೇಳೆಗೆ ೨೭ಕ್ಕೂ ಹೆಚ್ಚು ಯೋಜನೆಗಳನ್ನು ವಿವಿಧ ಇಲಾಖೆಗಳ ಅಡಿಯಲ್ಲಿ ರೂಪಿಸಲಾಯಿತು. 'ಇಕ್ವೆಲ್ ರೆಮ್ಯುರೇಶನ್ ಆ್ಯಕ್ಟ್'(೧೯೭೬), 'ಫ್ಯಾಮಿಲಿ ಕೋರ್ಟ್ ಆ್ಯಕ್ಟ್'(೧೯೮೪), 'ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆ್ಯಕ್ಟ್'ನಂತಹ ಮಹತ್ವದ ಕಾಯ್ದೆಗಳು ಜಾರಿಯಾದವು. ಭಾರತೀಯ ದಂಡ ಸಂಹಿತೆಯಲ್ಲಿ ಮಹಿಳೆಯರ ರಕ್ಷಣೆಯ ಗುರಿಯನ್ನು ಹೊಂದಿದ ಅತ್ಯಾಚಾರ ಮತ್ತು ಕೌಟುಂಬಿಕ ಹಿಂಸಾಚಾರದ ವಿರುದ್ಧ ಮಹತ್ವದ ತಿದ್ದುಪಡಿಗಳಾದವು. ಆದರೆ, ಈ ವೇಳೆ ವೈವಾಹಿಕ ಚೌಕಟ್ಟಿನೊಳಗೆ ನಡೆಯುವ ಅತ್ಯಾಚಾರವನ್ನು ಗುರುತಿಸಲಿಲ್ಲ ಮತ್ತು ಹಿಂಸಾಚಾರ ವೆಂಬುದು ಕೇವಲ ವರದಕ್ಷಿಣೆ ವಿಚಾರಕ್ಕೆ ಸೀಮಿತಗೊಂಡಿತು. ಹೀಗಾಗಿ ಇಲ್ಲಿಯೂ ಸಹ ಪಿತೃಪ್ರಧಾನತೆ ಅಗೋಚರ ರೀತಿಯಲ್ಲಿ ವ್ಯವಸ್ಥೆಯನ್ನು ಪುನರ್‌ರಚಿಸಿಕೊಂಡು ತನ್ನ ವ್ಯಾಖ್ಯಾನವನ್ನು ಉಳಿಸಿಕೊಂಡದ್ದು ಕಂಡುಬರುತ್ತದೆ.

ಒಟ್ಟಾರೆ 'ಅಂತಾರಾಷ್ಟ್ರೀಯ ಮಹಿಳಾ ದಶಕ'ದ ಪ್ರಭಾವದಿಂದ ಜಗತ್ತು ಮಹಿಳೆಯರ ವಿಚಾರಗಳಿಗೆ ಸ್ಪಂದಿಸುವಂತಾಯಿತು. ಮಹಿಳೆಯರ ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಎಲ್ಲಾ ಆಯಾಮಗಳಿಗೂ ಬದಲಾವಣೆಯ ಮುನ್ನುಡಿಯನ್ನು ಬರೆಯಿತು. ಮಹಿಳೆಯರ ಸ್ಥಿತಿಗತಿಗಳು, ಸಮಸ್ಯೆಯ ಸ್ವರೂಪಗಳು ಕಾಲಕ್ಕೆ ತಕ್ಕಂತೆ ಬದಲಾಗುತ್ತಿವೆ. ಇದಕ್ಕೆ ಅನುಗುಣವಾಗಿ ಇಂದಿನವರೆಗೂ ಮಹಿಳಾ ಸಂಘಟನೆ, ಹೋರಾಟ, ಕಾನೂನುಗಳಲ್ಲಿಯೂ ಹಲವಾರು ಬದಲಾವಣೆಗಳನ್ನು ಕಾಣುತ್ತಲೇ ಬರಲಾಗಿದೆ. ಮಹಿಳಾ ದಶಕದಿಂದಾಚೆಗೆ ಹೊಸ ಬದಲಾವಣೆ ಎಂಬಂತೆ ಸರ್ಕಾರ ಮತ್ತು ಅಂತಾರಾಷ್ಟ್ರೀಯ ಮೂಲಗಳಿಂದ ಬರಬಹುದಾದ ಧನಸಹಾಯ, ಪ್ರೋತ್ಸಾಹಗಳ ಪರಿಣಾಮದಿಂದ ಮಹಿಳಾ ಸಂಘಟನೆಗಳು ಇತ್ತೀಚೆಗೆ ಹೋರಾಟದಿಂದ ಅಭಿವೃದ್ಧಿಯ ಗುರಿಯ ಕಡೆ ಪಲ್ಲಟಗೊಂಡಿವೆ.

## ೨.೩. ಮಹಿಳಾ ಚಳುವಳಿಗಳ ಚಾರಿತ್ರಿಕ ಸಂದರ್ಭ

ಮಹಿಳೆಯರ ಹಿತಾಸಕ್ತಿಗಳ ಹೋರಾಟ ಮತ್ತು ಸಂಘಟನೆಗಳ ಹಿನ್ನಲೆಯಲ್ಲಿ ಜಾಗತಿಕವಾಗಿ 'ಮಹಿಳಾ ದಶಕ'ವೆಂದು ಘೋಷಣೆಯಾದ ೧೯೭೫-೮೫ರ ಅವಧಿ ಅತ್ಯಂತ ಪ್ರಮುಖವಾದುದು. ಇಂತಹದೊಂದು ಮಹತ್ವದ ವಿದ್ಯಮಾನಕ್ಕೆ ಜಾಗತಿಕವಾಗಿ ಮಾತ್ರವಲ್ಲದೆ ಭಾರತ ಹಾಗೂ ಕರ್ನಾಟಕದಲ್ಲಿ ನಡೆದ ಅನೇಕ ಮಹಿಳಾ ಚಳುವಳಿಗಳು ಮತ್ತು ಶೈಕ್ಷಣಿಕ ವಲಯದಲ್ಲಿ ಒಂದು ಜ್ಞಾನ ಶಿಸ್ತಾಗಿ ಜಾರಿಯಾದ ಮಹಿಳಾ ಅಧ್ಯಯನದಂತಹ ವಿಚಾರಗಳು ಸಹ ಪ್ರಮುಖ ಕಾರಣ ವಾಗಿವೆ. ಆದ್ದರಿಂದಲೇ ಮಹಿಳಾ ದಶಕ ಹಾಗೂ ವಿವಿಧ ಹಂತಗಳಲ್ಲಿ ನಡೆದ ಮಹಿಳಾ ಸಂಘಟನೆ-ಚಳುವಳಿಗಳು ಒಂದಕ್ಕೊಂದು ಅಂತರ್ ಸಂಬಂಧವನ್ನು ಹೊಂದಿವೆ. ಮಹಿಳಾ ದಶಕದ ಚಾರಿತ್ರಿಕ ಹಿನ್ನೆಲೆ, ಉದ್ದೇಶಗಳ ಅಧ್ಯಯನದ ಸಂದರ್ಭದಲ್ಲಿ ಮಹಿಳಾ ಚಳುವಳಿಗಳೂ ಸಹ ಪ್ರಮುಖವಾಗುತ್ತವೆ. ಕಾರಣ ಚಳುವಳಿಗಳು ಮಹಿಳಾ ವಿಷಯಗಳನ್ನು ಆದ್ಯತೆಗಳಾಗಿ ತೆಗೆದುಕೊಂಡು ಹೆಣ್ಣಿನ ಸ್ಥಿತಿಗತಿಗಳ ಸುಧಾರಣೆಗಾಗಿ ಬೆಳೆದುಬಂದವುಗಳಾಗಿವೆ. ಹಲವು ದಶಕಗಳ ಮಹಿಳಾ ಪರ ಬೇಡಿಕೆ ಹಾಗೂ ವಿಷಯಗಳಿಗೆ ತಾತ್ವಿಕ ಅಂಕಿತ ದೊರೆತು, ಮುನ್ನೆಲೆಗೆ ಬಂದದ್ದು ಅಂತರಾಷ್ಟ್ರೀಯ ಮಹಿಳಾ ದಶಕದ ಅವಧಿಯಲ್ಲಿ. ಈ ವೇಳೆ ಜಾಗತಿಕವಾಗಿ, ರಾಷ್ಟ್ರೀಯವಾಗಿ, ಪ್ರಾದೇಶಿಕವಾಗಿ ಪ್ರಮುಖ ವಿದ್ಯಮಾನಗಳಾಗಿ ಹೊಮ್ಮಿದ ಹಲವಾರು ಮಹಿಳಾ ಚಳುವಳಿಗಳನ್ನು ಗಮನಿಸಲಾಗಿದೆ. ಮಹಿಳೆಯರ ಬೇಡಿಕೆಗಳು, ಸ್ತ್ರೀಪರ ಕಾಳಜಿಗಳ ವಿಚಾರವಾಗಿ ಇಡೀ ಜಗತ್ತಿನ ಗಮನವನ್ನು ಕೇಂದ್ರೀಕರಿಸಿದ ಸಂದರ್ಭ ಅದಾಗಿತ್ತು. ಹಾಗಾಗಿ 'ಮಹಿಳಾ ದಶಕದ' ಚಾರಿತ್ರಿಕ ಹಿನ್ನೆಲೆ, ಮಹತ್ವಗಳ ಹಿಂದಣ ಹೆಜ್ಜೆಗಳಾಗಿ ಕಾಣಸಿಗುವ ಮಹಿಳಾ ಚಳುವಳಿಗಳ ಕುರಿತಾದ ಅಧ್ಯಯನ ಅಗತ್ಯವೆನಿಸುತ್ತದೆ.

ಮಹಿಳಾ ಚಳುವಳಿಗಳನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮತದಾನದ ಹಕ್ಕೊತ್ತಾಯದೊಂದಿಗೆ ಗುರುತಿಸಲಾಗುತ್ತದೆ. ಆದರೆ ಭಾರತಕ್ಕೆ ಸಂಬಂಧಿಸಿದಂತೆ ಇವುಗಳ ಕುರುಹುಗಳನ್ನು ವಚನ ಚಳುವಳಿ, ಸಮಾಜೋ ಧಾರ್ಮಿಕ ಸುಧಾರಣಾ ಚಳುವಳಿ, ರಾಷ್ಟ್ರೀಯ ಚಳುವಳಿ ಮತ್ತು ಆಧುನಿಕ ಭಾರತದ ಸಂದರ್ಭಗಳಲ್ಲಿ ಗುರುತಿಸಬಹುದಾಗಿದೆ. "ಪರಿಧಿಯಲ್ಲಿರುವ ಮನುಷ್ಯನು ಕೇಂದ್ರದೆಡೆಗೆ ಚಲಿಸಲು ವ್ಯವಸ್ಥಿತವಾಗಿ ರೂಪಿಸಿಕೊಳ್ಳುವ ಸಾಮೂಹಿಕ ಕ್ರಿಯೆಯನ್ನು ಚಳುವಳಿ ಎನ್ನಲಾಗುತ್ತದೆ."[೨] ಅದುವರೆಗೂ ವ್ಯವಸ್ಥೆಯ ಕೇಂದ್ರಸ್ಥಾನದಲ್ಲಿ ಪುರುಷನಿದ್ದು, ಹೆಣ್ಣನ್ನು ಪರಧಿಯಲ್ಲಿಟ್ಟು, ಆಕೆಯನ್ನು ನಿಯಂತ್ರಿಸುವ ಸಂದರ್ಭವಿತ್ತು. ಈ ಕುರಿತಾದ ಜಾಗೃತಿ ಎಚ್ಚೆತ್ತು ಕೊಳ್ಳುತ್ತಲೇ ವ್ಯವಸ್ಥೆಯಲ್ಲಿ ಪುರುಷನಿಗೆ ಸಮಾನವಾದ ಹಕ್ಕು ಮತ್ತು ಬೇಡಿಕೆಗಳಿಗಾಗಿ ಮಹಿಳಾ ಚಳುವಳಿಗಳು ಆರಂಭಗೊಂಡವು. ಹಾಗೆಯೇ ಚಳುವಳಿಗಳ ಸ್ಥಳ, ಉದ್ದೇಶ, ಕಾಲ, ಸ್ವರೂಪಗಳಲ್ಲಿ ವ್ಯತ್ಯಾಸಗಳಿದ್ದರೂ ಪರಸ್ಪರ ಪೂರಕ ಪ್ರಭಾವ ಬೀರುವ ಸಾಧ್ಯತೆಗಳಿರುತ್ತವೆ. ಹಲವು ಬಾರಿ ಆಶಯಗಳು ಸಹ ಸಾಮ್ಯತೆಯನ್ನು ತಾಳಿರುತ್ತವೆ. ಈ ಹಿನ್ನೆಲೆಯಲ್ಲಿ 'ಅಂತರಾಷ್ಟ್ರೀಯ ಮಹಿಳಾ ದಶಕಕ್ಕೂ' ಮುನ್ನ ನಡೆದ ಪ್ರಮುಖ ಮಹಿಳಾ ಚಳುವಳಿಗಳು, ಸಂಘಟನೆಗಳ ಹಿನ್ನೋಟವನ್ನು ಕಟ್ಟಿಕೊಡಲಾಗಿದೆ. ಹಾಗೆಯೇ ಇವುಗಳ ಸುಲಭ ಗ್ರಹಿಕೆಗಾಗಿ ಜಾಗತಿಕ, ರಾಷ್ಟ್ರೀಯ ಮತ್ತು ಪ್ರಾದೇಶಿಕವಾಗಿ(ಕರ್ನಾಟಕದ ಮಟ್ಟಿಗೆ) ಚಳುವಳಿಗಳನ್ನು ವರ್ಗೀಕರಿಸಿ ಹೇಳುವ ಪ್ರಯತ್ನ ಪ್ರಸ್ತುತ ಅಧ್ಯಾಯದ್ದಾಗಿದೆ.

### ೨.೩.೧. ಜಾಗತಿಕ ಮಹಿಳಾ ಚಳುವಳಿಗಳು

ಜಾಗತಿಕವಾಗಿ ಮಹಿಳಾ ಚಳುವಳಿ, ಮಹಿಳಾಪರ ಹೋರಾಟಗಳ ಮೂಲವನ್ನು ೧೭– ೧೮ನೇ ಶತಮಾನದ ಅವಧಿಯಲ್ಲಿಯೇ ಕಾಣಬಹುದಾಗಿದೆ. ಮಹಿಳಾ ವಿಮೋಚನಾ ಚಳುವಳಿಗಳ ಬೆಳವಣಿಗೆಯನ್ನು ಗಮನಿಸಿದರೆ, ಅವುಗಳು ಕೇವಲ ಮಹಿಳೆಯರ ಶೋಷಣೆಗೆ ಸಂಬಂಧಿಸಿದ ಯಾವುದೋ ಒಂದು ಸಿದ್ಧಾಂತಕ್ಕೆ ಪರಿಮಿತಗೊಂಡಂತೆ ಎನಿಸುವುದಿಲ್ಲ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕೈಗಾರಿಕೀಕರಣದ ಪರಿಣಾಮವಾಗಿ ಗೃಹಕೃತ್ಯಗಳಿಗೆ ಸೀಮಿತವಾಗಿದ್ದ ಮಹಿಳೆ, ಔದ್ಯೋಗಿಕ ಕ್ಷೇತ್ರಕ್ಕೆ ಕಾಲಿರಿಸುವಂತಾಯಿತು. ಕಡಿಮೆ ಕೂಲಿಗೆ ದುಡಿಯುವರಾಗಿದ್ದರಿಂದ ಉದ್ಯಮಗಳಿಗೂ ಅವರು ಅನಿವಾರ್ಯವಾದರು. ಹೊರಜಗತ್ತಿನ ಪರಿಸರ, ಸವಾಲುಗಳಿಗೆ ತಮ್ಮನ್ನು ಒಡ್ಡಿಕೊಂಡಾಗ, ಸಹಜವಾಗಿಯೇ ಮಹಿಳೆಯರ ಶಿಕ್ಷಣ, ಆರೋಗ್ಯ, ಸಮಾನತೆ ಮುಂತಾದವು ಹೊಸ ಬೇಡಿಕೆಗಳಾಗಿ ರೂಪುಗೊಂಡವು. ಇದರ ಭಾಗವಾಗಿ ೧೮೬೪ರ ಹಿಂದೆಯೇ ಕಾರ್ಮಿಕ ವರ್ಗಗಳ ಹೋರಾಟದ ಭಾಗವಾಗಿ ಮಹಿಳೆಯರ ಸಮಸ್ಯೆಗಳು ಮಾರ್ಕ್ಸ್‌ನ ತಾತ್ವಿಕ ಮಾರ್ಗದರ್ಶನದಲ್ಲಿ ಪ್ರಾಮುಖ್ಯತೆಯನ್ನು

ಪಡೆದುಕೊಂಡಿದ್ದವು. ಹಾಗಾಗಿ ಮತದಾನ ಹಕ್ಕು, ಉದಾರವಾದಿ ಬೂರ್ಜ್ವಾ ಚಳುವಳಿಗಳಂತಹವುಗಳ ಮೂಲಕ ಹೊಸ ಹೊಸ ಆಯಾಮಗಳಲ್ಲಿ ಚಳುವಳಿಗಳು ಮೂಡಿಬಂದವು.

ಮೊಟ್ಟಮೊದಲ ಅಂತರಾಷ್ಟ್ರೀಯ ಕಾರ್ಮಿಕ ಸಂಘಟನೆ ಸ್ತ್ರೀ–ಪುರುಷರಿಬ್ಬರಿಗೂ ಸಮಾನ ಹಕ್ಕುಗಳನ್ನು ಪೋಷಿಸಿತು. ಫ್ರಾನ್ಸ್, ಜಪಾನ್, ಜರ್ಮನಿ ಮುಂತಾದ ಕಡೆ ಮಹಿಳಾ ಕಾರ್ಮಿಕರು, ಕಾರ್ಮಿಕ ವರ್ಗದ ಚಳುವಳಿಗಳಲ್ಲಿ ಕಾಣಿಸಿಕೊಳ್ಳಲಾರಂಭಿಸಿದರು. ಇಬ್ಸೆನ್, ಕ್ಲಾರಾ ಝೆಟಕಿನ್, ಲಾರಾ ಲಾಫರ್, ಬೆಬೆಲ್‌ರಂತಹ ಹಲವಾರು ಚಿಂತಕಿಯರ ವಿಚಾರಧಾರೆಗಳು, ಸ್ತ್ರೀವಾದಿ ಚಿಂತನೆಯ ಪುಸ್ತಕಗಳು ಮಹಿಳಾ ಆಂದೋಲನಗಳಿಗೆ ಸ್ಫೂರ್ತಿಯನ್ನು ನೀಡಿದವು. ಸ್ತ್ರೀಯರ ಆರ್ಥಿಕ ಸ್ವಾವಲಂಬನೆ, ಮತದಾನದ ಹಕ್ಕು, ಔದ್ಯೋಗಿಕ ಸ್ವಾತಂತ್ರ್ಯಗಳು ಚಳುವಳಿ ಹಾಗೂ ಸಮ್ಮೇಳನಗಳ ಪ್ರಮುಖ ಬೇಡಿಕೆಗಳಾದವು. ಈ ಮಹತ್ವದ ಘಟನೆಯ ನೆನಪಿಗಾಗಿ, ಸಾರ್ವತ್ರಿಕ ಮಹಿಳಾ ಮತದಾನದ ಹಕ್ಕನ್ನು ಬೇಡಿಕೆಯನ್ನಾಗಿಟ್ಟುಕೊಂಡು ೧೯೧೧ರ ಮಾರ್ಚ್ ೮ರಂದು ಮೊದಲ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಆಚರಿಸಲಾಯಿತು. ೧೯೬೦ರ ವೇಳೆ 'ಅಂತರಾಷ್ಟ್ರೀಯ ಮಹಿಳಾ ದಿನ' ಮಹಿಳೆಯರ ಅಂತರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟದಡಿಯಲ್ಲಿ (Women's International Democratic Fedaration-WIDF) ೫೦ನೇ ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡಿತು. ಸುವರ್ಣ ಸಂಭ್ರಮವನ್ನು ಕೋಪನ್ ಹೇಗ್‌ನಲ್ಲಿ ಆಚರಿಸಿದಾಗ ೭೩ ರಾಷ್ಟ್ರಗಳ ೭೨೯ ಪ್ರತಿನಿಧಿಗಳು ಇದಕ್ಕೆ ಸಾಕ್ಷಿಯಾದರು. ಸಮ್ಮೇಳನದಲ್ಲಿ ಮಹಿಳೆಯರ ರಾಜಕೀಯ, ಆರ್ಥಿಕ, ಸಾಮಾಜಿಕ ಹಕ್ಕುಗಳನ್ನು ಬೆಂಬಲಿಸಿ ಘೋಷಣೆಗಳನ್ನು ಅಂಗೀಕರಿಸಲಾಯಿತು.

ಈ ವೇಳೆಗೆ ತೀರಾ ವ್ಯಾಪಕವಾಗಿ ಅಲ್ಲದಿದ್ದರೂ ಭಾರತ ಸೇರಿದಂತೆ ವಿವಿಧ ರಾಷ್ಟ್ರಗಳಲ್ಲಿ ಮಹಿಳೆಯರು ತಮ್ಮ ಹೋರಾಟಗಳ ಮೂಲಕ ಮತದಾನದ ಹಕ್ಕು, ಆರ್ಥಿಕ ಸ್ವಾವಲಂಬನೆ, ಶಿಕ್ಷಣ, ಔದ್ಯೋಗಿಕ ಕ್ಷೇತ್ರಗಳಿಗೆ ಪ್ರವೇಶ ಪಡೆಯುವಲ್ಲಿ ಯಶಸ್ವಿಯೂ ಆದರು. ಇದರ ಫಲವಾಗಿ ಸಾಮಾಜಿಕ, ಆರ್ಥಿಕ ಮುಂತಾದ ವ್ಯವಸ್ಥೆಗಳಲ್ಲಿ ಬದಲಾವಣೆಗಳು ಕಂಡು ಬಂದವು. ಸಮಾನತೆ, ಸ್ವಾತಂತ್ರ್ಯ, ವ್ಯಕ್ತಿವಾದದಂತಹ ಹೊಸ ಮೌಲ್ಯಗಳನ್ನು ಎತ್ತಿ ಹಿಡಿಯುವ ಮೂಲಕ ಹೆಣ್ಣಿನ ಮೇಲಿನ ಶಾರೀರಿಕ, ಮಾನಸಿಕ, ಕ್ರಿಯಾತ್ಮಕ ನಿಯಂತ್ರಣಗಳನ್ನು ಮುರಿಯುವ ಪ್ರಯತ್ನವಾಯಿತು. ಆದರೆ, ಖಾಸಗಿಯಾಗಿ ಹೆಣ್ಣಿಗೆ ಸಂಬಂಧಿಸಿದ ವೈವಾಹಿಕ ವ್ಯವಸ್ಥೆ, ಕೌಟುಂಬಿಕ ಸಂಬಂಧ, ಮಕ್ಕಳ ಪಾಲನೆ, ಪೋಷಣೆ, ಲೈಂಗಿಕತೆ ಕುರಿತಾದ ಶೋಷಣೆ ನಿರ್ಬಂಧ ಇತ್ಯಾದಿಗಳಲ್ಲಿ ಯಾವುದೇ ಬದಲಾವಣೆಗಳಾಗಲಿಲ್ಲ. ಪರ್ಯಾಯವಾಗಿ ಅವುಗಳು

ಹೆಣ್ತನದ ಆದರ್ಶ ಹಾಗೂ ಅಗತ್ಯ ಮೌಲ್ಯಗಳೆಂದು ಈ ಬಗೆಯ ಯಾವುದೇ ವಿಚಾರಗಳು ಪ್ರಸ್ತುತವಲ್ಲವೆಂದು ಮಾನ್ಯತೆಯನ್ನು ಕಳೆದುಕೊಂಡವು.

ಆದರೆ ೧೯ನೇ ಶತಮಾನದ ಕೊನೆಯ ದಶಕಗಳಲ್ಲಿ ಬಹುಸಂಖ್ಯಾತ ಸಮಾಜವಾದಿ ಚಳುವಳಿಗಳಲ್ಲಿ ಸ್ತ್ರೀ ವಿಮೋಚನೆಯೇ ಪ್ರಾತಿನಿಧಿಕ ಗುರಿಯಾಯಿತು. ೧೯೬೦ರ ನಂತರದ ದಶಕಗಳಲ್ಲಿ ಮಹಿಳೆಯರ ದೃಷ್ಟಿಕೋನಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದವು. ಈ ಸಂದರ್ಭದಲ್ಲಿ "ಮೌನದ ಸಂಚನ್ನು(Conspiracy of silence) ಶಾಶ್ವತವಾಗಿ ಹೊಡೆದಟ್ಟಲಾಯಿತು. ವಿಶೇಷವೆಂದರೆ, ಅದುವರೆಗೂ ನಡೆದ ಪ್ರಾಥಮಿಕ ಚಳುವಳಿಗಳಾವುವು ಮಹಿಳೆಯರ ಲೈಂಗಿಕ ದೌರ್ಜನ್ಯ ಕುರಿತು ಪ್ರಶ್ನಿಸಿರಲಿಲ್ಲ. ಈ ವೇಳೆ ಶರೀರ ಧರ್ಮವೇ ನಮ್ಮ ಅಂತಿಮ ಗುರಿ(Biology in Destiny) ಎಂಬ ಕಲ್ಪನೆಯನ್ನು ತಲೆಕೆಳಗು ಮಾಡಿತು. ಮಹಿಳೆಯರೆಂದರೆ ಸಾಕು ಮಕ್ಕಳನ್ನು ಹೆರುವ ಯಂತ್ರಗಳಂತೆ ಮಾತ್ರವೇ ನೋಡುವ ಸಮಾಜದ ದೃಷ್ಟಿಯನ್ನೇ ಮಾರ್ಪಡಿಸಿಕೊಳ್ಳುವ ಅಗತ್ಯವುಂಟಾಯಿತು. ಜನಸಂಖ್ಯೆಯನ್ನು ನಿಯಂತ್ರಿಸಲು ಸಂತಾನೋತ್ಪತ್ತಿಯ ವಿಷಯದಲ್ಲಿ ಮಹಿಳಾ ಸ್ವಾತಂತ್ರ್ಯದ ನಡುವೆ ಒಂದು ದೊಡ್ಡ ಯುದ್ಧವೇ ಆರಂಭವಾಯಿತು. ಇತಿಹಾಸದಲ್ಲಿ ಮೊದಲ ಬಾರಿಗೆ ಮಹಿಳಾ ಲೈಂಗಿಕತೆ ಪ್ರಧಾನವಾದ ಚರ್ಚೆಯ ವಿಷಯವಾಯಿತು."[೩] ಹೆಣ್ಣು ಅದುವರೆಗೂ ದೇಹ ಕೇಂದ್ರಿತ ನೆಲೆಯಲ್ಲಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಿದ್ದ ಸಂದರ್ಭವಿತ್ತು. ಅದರಾಚೆಗೂ ಬೌದ್ಧಿಕ, ಲೈಂಗಿಕ, ಕ್ರಿಯಾತ್ಮಕ ಮುಂತಾದ ಸ್ತರಗಳಲ್ಲಿ ಆಕೆಗೂ ಅಸ್ತಿತ್ವವಿದೆ ಎನ್ನುವುದನ್ನು ಪ್ರತಿಪಾದಿಸಲಾಯಿತು. ಈ ಮೂಲಕ ಮಹಿಳೆಯರು ತಮ್ಮ ವೈಯಕ್ತಿಕ ಬದುಕಿನ ಮೇಲೆ ನಿಯಂತ್ರಣ ಹೊಂದುವುದು ಅವರ 'ಶಕ್ತಿ'ಯಾಗಿ ಗುರುತಿಸಿಕೊಂಡರು. ಉದಾರವಾದಿ, ಮಾರ್ಕ್ಸ್‌ವಾದಿ, ಸಮಾಜವಾದಿ, ತೀವ್ರಗಾಮಿ, ಸಾಂಸ್ಕೃತಿಕ ಹಾಗೂ ಕಪ್ಪು ಸ್ತ್ರೀವಾದಿಗಳ ಚಿಂತನೆಗಳ ಪ್ರಭಾವವಾಯಿತು. ಹಾಗಾಗಿ ೧೯೭೦-೮೦ರ ದಶಕದ ವೇಳೆಗೆ ಮಹಿಳೆಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿದ ಬೇಡಿಕೆಗಳು, ಹೋರಾಟಗಳು ಅವರ ಖಾಸಗಿ ಜೀವನದ ವಿಚಾರಗಳಿಗೆ ವಿಸ್ತರಿಸಿಕೊಂಡವು.

ಉದಾರವಾದಿ ಸ್ತ್ರೀವಾದದ ಲೈಂಗಿಕ ಅಸಮಾನತೆ, ದ್ವಿಲಿಂಗತ್ವ ಪರಿಕಲ್ಪನೆಗಳು, ಲಿಂಗಾಧಾರಿತ ಶ್ರಮ ವಿಭಜನೆಯನ್ನು ಮಾರ್ಕ್ಸ್‌ವಾದ ಖಂಡಿಸಿತು. ಗಂಡು-ಹೆಣ್ಣಿನ ನಡುವಿನ ಜೈವಿಕ ವ್ಯತ್ಯಾಸಗಳೇ ಅಸಮಾನತೆಗೆ ಮೂಲ ಕಾರಣವೆಂದು ೧೯೬೮ರಲ್ಲಿ ತಮ್ಮ ಒಳ ಉಡುಪುಗಳನ್ನು ಸುಟ್ಟು ಹಾಕಿ, ಸಾಂಕೇತಿಕ ಪ್ರತಿಭಟನೆ ಮಾಡುವ ಮೂಲಕ ಜೈವಿಕ ತಾಯ್ತನವನ್ನೇ ತೀವ್ರಗಾಮಿಗಳು ತಿರಸ್ಕರಿಸಿದರು. 'ತನ್ನ ದೇಹ ತನ್ನ ಆಸ್ತಿ' ಎಂದು ಸಾಂಸ್ಕೃತಿಕ ಸ್ತ್ರೀವಾದಿಗಳು ಪ್ರತಿಪಾದಿಸಿದರು. ಹೀಗೆ ಹಲವಾರು ಸ್ತ್ರೀವಾದಗಳು ಮತ್ತು ಚಿಂತಕಿಯರ ವಿಚಾರ ಸರಣಿಗಳು

ಜಾಗತಿಕವಾಗಿ ಹೊಸ ಕ್ರಾಂತಿಯನ್ನೇ ಉಂಟು ಮಾಡಿದವು. ಈ ಚಿಂತನೆಗಳ ಕಾರಣವಾಗಿ ಮಹಿಳಾ ಚಳುವಳಿಗಳು ಎಪ್ಪತ್ತರ ದಶಕದ ವೇಳೆಗೆ ಸಂತಾನದ ಹಕ್ಕುಗಳು, ಕೌಟುಂಬಿಕ ಕಲಹ, ಸಮಾನ ವೇತನ, ಲೈಂಗಿಕ ದೌರ್ಜನ್ಯಗಳಂತಹ ವಿಷಯಗಳನ್ನು ತಮ್ಮ ಹೋರಾಟದ ಪರಿಧಿಯಲ್ಲಿ ಸೇರಿಸಿಕೊಂಡವು. ಇದರ ಹೊರತಾಗಿಯೂ ಚಳುವಳಿಯ ಉದ್ದೇಶಗಳು ಆಯಾ ದೇಶದ ವ್ಯವಸ್ಥೆಗೆ ಹೊಂದಿಕೊಂಡಂತೆ ಭಿನ್ನವಾಗಿಯೂ ಇದ್ದವು. ಕಾರಣ ಈಗಾಗಲೇ ತಿಳಿದಂತೆ ಮಹಿಳೆಯರ ಸಮಸ್ಯೆ, ಬೇಡಿಕೆಗಳು ಏಕಮುಖವಾಗಿಲ್ಲ. ಆದ್ದರಿಂದಲೇ ೧೯೭೦ರ ಮಹಿಳಾ ಚಳುವಳಿಗಳು ಹೊಸ ಕಾಲಘಟ್ಟಕ್ಕೆ ಪ್ರೇರಣೆಯನ್ನು ನೀಡಿದವು. ಮಹಿಳಾ ಚಳುವಳಿಗಳ ಇತಿಹಾಸದಲ್ಲಿ ೧೯೭೫-೮೫ರ ಅವಧಿ 'ಮಹಿಳಾ ದಶಕ'ವಾಗಿ ವಿಶ್ವದಾದ್ಯಂತ ಎಲ್ಲ ವರ್ಣಗಳ ಹಾಗೂ ವರ್ಗಗಳ ಮಹಿಳೆಯರ ಮೇಲೆ ಪ್ರಭಾವ ಬೀರಿತು. ಇವೆಲ್ಲವು ಜಾಗತಿಕವಾಗಿ ನಡೆದ ಮಹಿಳಾ ಚಳುವಳಿಗಳ ಕಿರುನೋಟವಾಗಿದೆ. ಇದೇ ಜಾಗತಿಕ ವಿದ್ಯಮಾನಗಳಿಗೆ ಸ್ಪಂದಿಸಿ, ಅವುಗಳ ಪ್ರಭಾವದಲ್ಲಿಯೇ ಆಗಿ ಹೋಗಿರುವ ಭಾರತದ ಮಹಿಳಾ ಚಳುವಳಿಗಳ ನೋಟವನ್ನು ಮುಂದಿನ ಹಂತದಲ್ಲಿ ಪ್ರಸ್ತಾಪಿಸಲಾಗಿದೆ.

**೨.೩.೨. ಭಾರತದ ಮಹಿಳಾ ಚಳುವಳಿಗಳು**

ಭಾರತದ ಸಮಕಾಲೀನ ಮಹಿಳಾ ಚಳುವಳಿಗಳಿಗೆ ಪಾಶ್ಚಿಮಾತ್ಯ ಮಹಿಳಾ ಚಳುವಳಿಗಳ ಪ್ರಭಾವವಿದೆ. ಮಹಿಳಾ ಕೇಂದ್ರಿತ ವಿಷಯಗಳನ್ನು ಮುಂದಿರಿಸಿಕೊಂಡು ಮಹಿಳೆಯರ ವಿವಿಧ ಹಕ್ಕು-ಬೇಡಿಕೆಗಳಿಗಾಗಿ ಭಾರತದಲ್ಲಿ ಹಲವಾರು ಚಳುವಳಿಗಳು ನಡೆದಿವೆ. ಹಾಗೆ ನೋಡಿದರೆ ೧೨ನೇ ಶತಮಾನದ ವಚನ ಚಳುವಳಿಯ ಕಾಲಕ್ಕೆ ಅಕ್ಕಮಹಾದೇವಿಯಂತಹ ಶಿವಶರಣೆಯರಿಂದಲೇ ಹೆಣ್ಣಿನ ಶೋಷಣೆಯ ವಿರುದ್ಧದ ದನಿಯನ್ನು ಗುರುತಿಸಬಹುದು. ಇದಲ್ಲದೆ ಹಲವು ರಾಜಮನೆತನಗಳ ಆಳ್ವಿಕೆಯ ಸಂದರ್ಭಗಳಲ್ಲಿಯೂ ತಮ್ಮ ಮೇಲಿನ ದೌರ್ಜನ್ಯದ ವಿರುದ್ಧ ಹೆಣ್ಣುಮಕ್ಕಳು ಸಿಡಿದೆದ್ದ ಪ್ರಸಂಗಗಳೂ ನಮ್ಮ ಚರಿತ್ರೆಯಲ್ಲಿವೆ. ಆದರೆ ವ್ಯಕ್ತಿಗತವಾದ ಈ ಪ್ರತಿಭಟನೆಗಳು ಹಲವಾರು ದಮನಕಾರಿ ಪ್ರವೃತ್ತಿ, ವ್ಯವಸ್ಥೆಗಳ ಪರಿಣಾಮವಾಗಿ ದೊಡ್ಡ ಆಂದೋಲನದ ಸ್ವರೂಪ ಪಡೆಯಲು ಸಾಧ್ಯವಾಗಲಿಲ್ಲ.

ಹಾಗಾಗಿ ಈ ಹಿಂದೆ ಜಾಗತಿಕವಾಗಿ ನಡೆದ ಚಳುವಳಿಗಳ ಅವಧಿಯನ್ನೇ ಗಮನದಲ್ಲಿಟ್ಟುಕೊಂಡು, ಅವುಗಳ ಪ್ರೇರಣೆಯಲ್ಲಿ ಭಾರತದ ಮಟ್ಟಿಗೆ ಕಂಡುಬಂದ ಪ್ರಮುಖ ಮಹಿಳಾ ಆಂದೋಲನಗಳ ಕುರಿತಾಗಿ ಈ ಅಧ್ಯಾಯದಲ್ಲಿ ಹೇಳಲಾಗಿದೆ. ಹೀಗೆ ಹೇಳುವಾಗ ಈ ಮಹಿಳಾ ಹೋರಾಟಗಳನ್ನು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರೋತ್ತರ ಎಂಬ ಎರಡು ಹಂತಗಳಲ್ಲಿ ವಿವರಿಸಲಾಗಿದೆ.

**ಅ. ಸ್ವಾತಂತ್ರ್ಯಪೂರ್ವದಲ್ಲಿನ ಮಹಿಳಾ ಹೋರಾಟಗಳು:** ಸ್ವಾತಂತ್ರ್ಯಪೂರ್ವದಲ್ಲಿ ಭಾರತೀಯ ಮಹಿಳಾ ಚಳುವಳಿಯ ಬೇರುಗಳನ್ನು ಸಮಾಜ ಸುಧಾರಣಾ ಚಳುವಳಿಗಳು ಮತ್ತು ೨೦ನೆಯ ಶತಮಾನದ ಆರಂಭದ ರಾಷ್ಟ್ರೀಯ ಚಳುವಳಿಗಳಲ್ಲಿ ಗುರುತಿಸಲಾಗಿದೆ. ಬ್ರಿಟಿಷ್ ವಸಹಾತುಶಾಹಿಯ ಪ್ರಭಾವದಿಂದಾಗಿ ಆಧುನಿಕತೆ, ಸುಧಾರಣೆ, ರಾಷ್ಟ್ರೀಯತಾವಾದ ಮುಂತಾದ ಚಿಂತನೆಗಳ ಭಾಗವಾಗಿ ಮಹಿಳೆಯರನ್ನು ಪರಿಗಣಿಸಲಾಗಿದೆ. ಭಾರತದ ಮಹಿಳಾ ಚಳುವಳಿಗಳ ಕುರಿತಾಗಿ ಎನ್.ಗಾಯತ್ರಿಯವರು "ಮಹಿಳೆಯರಿಗಾಗಿ ನಡೆದ ಸುಧಾರಣಾ ಚಳುವಳಿಗಳು, ಪುರುಷ ನೇತೃತ್ವದ ಸಾಮಾಜಿಕ ಚಳುವಳಿಗಳಲ್ಲಿನ ಮಹಿಳೆಯರ ಕಾಳಜಿಗಳು ಮತ್ತು ಮಹಿಳೆಯರೇ ಮುನ್ನಡೆಸಿದ ಮಹಿಳಾ ಚಳುವಳಿಗಳು ಎಂದು ಸ್ಥೂಲವಾಗಿ ವಿಂಗಡಿಸುತ್ತಾರೆ."[೪] ಈ ಪ್ರಕಾರ ಒಂದು ಕಡೆ ಮಹಿಳೆಯರ ಸ್ಥಿತಿಗಳ ಸುಧಾರಣೆ ಹಾಗೂ ಅವರನ್ನು ಶೋಷಣೆಗೊಳಪಡಿಸುವ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳ ವಿರುದ್ಧ ಪುರುಷ ನಾಯಕರುಗಳ ನೇತೃತ್ವದಲ್ಲಿ ಚಳುವಳಿಗಳು ನಡೆದವು. ಮತ್ತೊಂದು ಕಡೆ ಕೆಲವು ವಿಚಾರವಂತ ಹೆಣ್ಣುಮಕ್ಕಳೇ ಮಹಿಳಾ ಪರವಾದ ಚಳುವಳಿಗಳ ನೇತೃತ್ವವನ್ನು ವಹಿಸಿಕೊಂಡುದು ಕಂಡುಬರುತ್ತದೆ.

ಮೊದಲ ಹಂತದಲ್ಲಿ ಸಾಮಾಜಿಕ ಸುಧಾರಣಾ ಚಳುವಳಿಗಳ ಒಂದು ಭಾಗವಾಗಿಯೇ ಮಹಿಳಾ ಚಳುವಳಿಗಳನ್ನು ಮುನ್ನಲೆಗೆ ತರಲಾಯಿತು. ಬ್ರಹ್ಮಸಮಾಜ, ಆರ್ಯಸಮಾಜದಂತಹ ಸಮಾಜೋ-ಧಾರ್ಮಿಕ ಸಂಘಟನೆಗಳು ಮಹಿಳೆಯರಲ್ಲಿ ಸಾಂಘಿಕ ಪ್ರಜ್ಞೆಯನ್ನು ಮೂಡಿಸಿದವು. ರಾಜಾರಾಮ್ ಮೋಹನ್‌ರಾಯ್, ದಯಾನಂದ ಸರಸ್ವತಿ, ಈಶ್ವರಚಂದ್ರ ವಿದ್ಯಾಸಾಗರ, ದೋಂಡೊ ಕೇಶೋಪಂತ ಕರ್ವೆ, ವೀರೇಶ ಲಿಂಗಂ, ಮಹಾದೇವ ರಾನಡೆಯಂತಹ ಸುಧಾರಕರಿಂದಾಗಿ ಸತಿಪದ್ಧತಿ ನಿಷೇಧ, ಬಹುಪತ್ನಿತ್ವ ನಿಷೇಧ, ಸ್ತ್ರೀಶಿಕ್ಷಣ, ವಿಧವಾ ಪುನರ್ವಿವಾಹ, ಬಾಲ್ಯವಿವಾಹ ನಿಷೇಧದಂತಹ ವಿಚಾರಗಳು ಹೊಸ ಸಂಚಲನವನ್ನುಂಟು ಮಾಡಿದವು. ಅಸ್ಪೃಶ್ಯರ ಅಭಿವೃದ್ಧಿಗಾಗಿ ತಂದ ಕಾರ್ಯಕ್ರಮಗಳು, ವಿಧವಾ ಪುನರ್ವಸತಿ ಕೇಂದ್ರಗಳು, ಅನಾಥಾಲಯಗಳು, ಶಾಲೆಗಳ ಸ್ಥಾಪನೆಗಳ ಪ್ರಭಾವದಿಂದ ಹಲವಾರು ಸುಶಿಕ್ಷಿತ ಮಹಿಳೆಯರು, ಸಾಮಾಜಿಕ ಕಾರ್ಯಕರ್ತರು ಸಂಘಟಿತರಾಗಿ ಮಹಿಳಾ ಸಂಘಟನೆಗಳು ಜನ್ಮತಾಳಿದವು. ಈ ಸಮಯಕ್ಕೆ ರಾಷ್ಟ್ರೀಯ ಚಳುವಳಿಗಳಲ್ಲಿಯೂ ಮಹಿಳೆಯರು ಭಾಗವಹಿಸುವಂತಾಗಿತ್ತು. ಆಗ ಸ್ವತಃ ಮಹಿಳೆಯರೇ ಮಹಿಳಾ ಚಳುವಳಿಗಳನ್ನು ಮುನ್ನಡೆಸುವ ಸಂದರ್ಭ ಒದಗಿ ಬಂದಿತು.

ಸರೋಜ್ ನಳಿನಿದತ್ ಎಂಬುವರಿಂದ ಗ್ರಾಮೀಣ ಮಹಿಳಾ ಸಂಸ್ಥೆಗಳ ಸ್ಥಾಪನೆಯಾಯಿತು. ೧೯ನೇ ಶತಮಾನದ ಆರಂಭದಲ್ಲಿಯೇ ಸಾಹಿತ್ಯ ವಲಯದಲ್ಲಿ ತೊಡಗಿಸಿಕೊಂಡು, ಅಧ್ಯಾಪಕಿಯಾದ

ಬಂಗಾಳದ ಸರಳಾದೇವಿ ಚೌಧುರಾಣಿ, ಸ್ತ್ರೀ ಶಿಕ್ಷಣವನ್ನು ಮುನ್ನಡೆಸಿ ಶಾಲೆಗಳನ್ನು ಆರಂಭಿಸಿದ ಮಹಿಳಾ ಹಕ್ಕುಗಳ ಹೋರಾಟದ ಧುರೀಣೆ ಪಂಡಿತ್ ರಮಾಬಾಯಿ, ಸ್ತ್ರೀ ಶಿಕ್ಷಣಕ್ಕಾಗಿ ಸ್ವತಃ ಶಾಲೆಗಳನ್ನು ತೆರೆದ ದಖನ್‌ನ ಮಾತಾಜಿ ಮಹಾರಾಣಿ ತಪಸ್ವಿನಿ, ಮುಸ್ಲಿಂ ಹೆಣ್ಣುಮಕ್ಕಳಿಗಾಗಿ ಶಾಲೆಗಳನ್ನು ತೆರೆದ ಬಿಹಾರದ ಬೇಗಂ ರೊಕೆಯಾ ಶೇಖಾವತ್, ಮದ್ರಾಸ್‌ನಲ್ಲಿ ಉನ್ನತ ಜಾತಿಯ ವಿಧವೆಯರಿಗಾಗಿ ಶಾಲೆಗಳನ್ನು ತೆರೆದ ಸಿಸ್ಟರ್ ಸುಬ್ಬುಲಕ್ಷ್ಮಿ, ಮದ್ರಾಸಿನಲ್ಲಿ 'ಥಿಯಾಸಾಫಿಕಲ್ ಸೊಸೈಟಿ'ಯ ಮೂಲಕ ಸ್ತ್ರೀ ಶಿಕ್ಷಣವನ್ನು ಪ್ರಚುರಪಡಿಸಿ ಸಮಾಜದ ದುಷ್ಟ ಪದ್ಧತಿಗಳ ವಿರುದ್ಧ ಹೋರಾಟ ಕೈಗೊಂಡ ಅನ್ನಿಬೆಸೆಂಟ್, ೧೮೮೮ರ ಸಂದರ್ಭದಲ್ಲೇ ತನ್ನ ಬಾಲ್ಯ ವಿವಾಹವನ್ನು ಅಸಿಂಧುಗೊಳಿಸಬೇಕೆಂದು ವಾದಿಸಿದ ಮೊದಲ ಮಹಿಳಾ ವೈದ್ಯೆ ಮಹಾರಾಷ್ಟ್ರದ ರುಕ್ಮಾಬಾಯಿ ಮುಂತಾದ ಹಲವಾರು ಮಹಿಳೆಯರು ಮಹಿಳಾ ಚಳುವಳಿ ಮತ್ತು ಸಂಘಟನೆಗಳ ಹುಟ್ಟಿಗೆ ಭೂಮಿಕೆಯಾದರು.

೧೮೮೦ರ ಕೊನೆಯಲ್ಲಿ ಪ್ರಾಂತೀಯ ನೆಲೆಯಲ್ಲಿದ್ದ ಈ ಮಹಿಳಾ ಸಂಘಟನೆಗಳು ೧೯೧೦ರ ವೇಳೆಗೆ ರಾಷ್ಟ್ರೀಯ ಮಹಿಳಾ ಸಂಘಟನೆಗಳಾಗಿ ತಲೆ ಎತ್ತಿದವು. ಅವುಗಳಲ್ಲಿ 'The Women's India Association'(W.I.A), 'National Council of Women Indian Association'(N.C.W.I.A), 'All India Women conference'(A.I.W.C) ಪ್ರಮುಖವಾದವುಗಳಾಗಿವೆ. ಈ ಎಲ್ಲ ಸಂಘಟನೆಗಳ ಸಹಯೋಗದಲ್ಲಿ ೧೯೧೭ರಲ್ಲಿ ಮತದಾನದ ಹಕ್ಕೊತ್ತಾಯವನ್ನು ಮಂಡಿಸಿತು. ಹಿರಿಯ ಕಾಂಗ್ರೆಸ್ ಕಾರ್ಯಕರ್ತೆ ಕವಯತ್ರಿಯಾಗಿದ್ದ ಸರೋಜಿನಿ ನಾಯ್ಡುರವರು ಮಾಂಟೆಗೋ ಮತ್ತು ಚೆಮ್ಸ್ ಪೋರ್ಡ್‌ರವರನ್ನು ಭೇಟಿ ಮಾಡಿ ಮಹಿಳೆಯರ ಸ್ಥಾನಮಾನಗಳಿಗಾಗಿ ಒತ್ತಾಯಿಸಿ ೧೯೧೮ರ ಕಾಂಗ್ರೆಸ್ ಅಧಿವೇಶನದಲ್ಲಿ ಮಹಿಳಾ ಸಂಕಷ್ಟಗಳನ್ನು ಪ್ರಸ್ತಾಪಿಸಿದರು. ಮುಂಬೈ ಮತ್ತು ಮದ್ರಾಸ್ ಪ್ರಾಂತೀಯ ಕಾನ್ಫರೆನ್ಸ್‌ಗಳಲ್ಲಿ ಸುಧಾರಣಾ ಮಸೂದೆಯಿಂದ ಲಿಂಗಾಧಾರಿತ ಅರ್ಹತೆಯ ಕಾಲವನ್ನು ತೆಗೆದು ಹಾಕಬೇಕೆಂದು ನಿರ್ಣಯ ಮಂಡಿಸಲಾಯಿತು. ಆದರೆ ಹಲವಾರು ರಾಷ್ಟ್ರೀಯ ನಾಯಕರು ಮತದಾನದ ಹಕ್ಕು, ಸಮಾನತೆಗಳ ಬೇಡಿಕೆಗೆ ಪೂರಕವಾಗಿ ಮಾತನಾಡಿದರೆ, ಗಾಂಧಿಯಂತಹ ರಾಷ್ಟ್ರೀಯ ನಾಯಕರು ಮಹಿಳೆಯರು ತಮ್ಮ ವೈಯಕ್ತಿಕ ಬೇಡಿಕೆಗಳನ್ನು ಬದಿಗೊತ್ತಿ ರಾಷ್ಟ್ರೀಯ ಚಳುವಳಿಯನ್ನು ಬೆಂಬಲಿಸುವಂತೆ ಹೇಳಿದರು. ತಮ್ಮ 'ಯಂಗ್ ಇಂಡಿಯಾ'ದ ಲೇಖನದಲ್ಲಿ "ಮಹಿಳೆಯರು ಪುರುಷರ ಬಳಿಯಲ್ಲಿ ಸೂಕ್ತ ಜಾಗದಲ್ಲಿ ಬಂದು ನಿಲ್ಲುವುದನ್ನು ನಾನು ಅಪೇಕ್ಷಿಸುತ್ತೇನೆ. ಆದರೆ ಮಹಿಳೆಯರಿಗೆ ಮತದಾನದ ಹಕ್ಕು ಬೇಕೆಂಬ ಪ್ರಚಾರವನ್ನು ಖಂಡಿತಾ ಬೆಂಬಲಿಸುವುದಿಲ್ಲ"[೫] ಎಂದು ಉಲ್ಲೇಖಿಸಿ ಸಲಹೆಯನ್ನು ನೀಡಿದರು. ದೇಶಕ್ಕೆ ಸ್ವಾತಂತ್ರ್ಯಬೇಕು ಎನ್ನುವ ವಿಚಾರದಲ್ಲಿ ನಿಷ್ಠವಾಗಿದ್ದ

ಗಾಂಧಿಯವರ ಈ ಆಲೋಚನೆ ಸಹಜವೇ ಎಂಬಂತೆ ಇತ್ತು. ಹಾಗೆಂದು ಮಹಿಳಾ ಸುಧಾರಣೆಗೆ ಸಂಬಂಧಿಸಿದ ವಿಷಯಗಳನ್ನು ನಿರಾಕರಿಸಿ ಕೂಡುವ ಸಂದರ್ಭವೂ ಅದಾಗಿರಲಿಲ್ಲ. ಹೀಗಾಗಿ ಇದೊಂದು ತಾತ್ವಿಕ ಭಿನ್ನಾಭಿಪ್ರಾಯಕ್ಕೆ ಎಡೆ ಮಾಡಿಕೊಡುವಂತಿತ್ತು. ಆದರೆ ಮಹಿಳಾ ಚಳುವಳಿಗಳು ನಿಲ್ಲಲಿಲ್ಲ, ಮಹಿಳೆಯರ ಶಿಕ್ಷಣ, ಸಾಮಾಜಿಕ ನ್ಯಾಯ, ಹಕ್ಕುಗಳಿಗಾಗಿ ರಾಷ್ಟ್ರೀಯ ಚಳುವಳಿಗಳೊಂದಿಗೆ ಆಂದೋಲನ ಮುಂದುವರಿದವು. ೧೯೨೧ರಲ್ಲಿ ಮುಂಬೈ ಪ್ರಾಂತ್ಯದಿಂದ ಆರಂಭವಾಗಿ ೧೯೩೦ರ ವೇಳೆಗೆ ಪಂಜಾಬ್, ಬಂಗಾಳ, ಅಸ್ಸಾಂ, ಬಿಹಾರ್, ಒರಿಸ್ಸಾ ಪ್ರಾಂತ್ಯಗಳು ಮಹಿಳಾ ಸಮಾನತೆಗೆ ಒಪ್ಪಿಗೆ ನೀಡಿದವು. ಕೊನೆಗೂ ೧೯೨೬ರಲ್ಲಿ ಮತದಾನ ಹಕ್ಕಿನ ಮಸೂದೆ ಅಂಗೀಕರಿಸಲ್ಪಟ್ಟಿತು. ಇದು ಮಹಿಳಾ ಸಂಘಟನೆಗಳು ಸ್ವಾತಂತ್ರ್ಯಪೂರ್ವದಲ್ಲಿ ದಕ್ಕಿಸಿಕೊಂಡ ಮಹತ್ವದ ಜಯ. ಇದರ ನಂತರ ಸಂಸತ್ತಿಗೆ ಆಯ್ಕೆಗೊಳ್ಳುವ ಹೋರಾಟಕ್ಕೂ ಗೆಲುವು ದೊರೆಯಿತು. ೧೯೨೪ರಲ್ಲಿ ಸ್ಥಾಪಿತವಾದ 'ಅಖಿಲ ಭಾರತ ಮಹಿಳಾ ಸಮಾವೇಶ' (AIWC)ತನ್ನ ಎಲ್ಲಾ ಬೇಡಿಕೆಗಳನ್ನು 'ಸಮಾನಹಕ್ಕು'ಗಳ ದೃಷ್ಟಿಕೋನದಿಂದ ನಿರ್ಣಯಿಸಿತು. ಶಿಕ್ಷಣದ ಬೇಡಿಕೆಯು ಸಹಶಿಕ್ಷಣ(Co-Education) ಬೇಡಿಕೆಯಾಗಿ ವಿಸ್ತಾರಗೊಂಡಿತು. ಕಾನೂನಿನ ಸುಧಾರಣೆಯು ವಿವಾಹ ವಿಚ್ಛೇದನ ಮತ್ತು ಪಿತ್ರಾರ್ಜಿತ ಆಸ್ತಿಯ ವಾರಸುದಾರಿಕೆಯ ಹಕ್ಕನ್ನು ಒಳಗೊಂಡಿತು. ಆರ್ಥಿಕ ಸಮಾನತೆಯು ಪತಿಯ ವೇತನದ ಮೇಲಿನ ಹಕ್ಕು ಮತ್ತು ವಿಧವೆಯರಿಗೆ ನಿವೃತ್ತಿ ವೇತನಗಳನ್ನು ಒಳಗೊಂಡಿತ್ತು. ಇವುಗಳಲ್ಲಿ ಗರ್ಭಪಾತದ ಹಕ್ಕಿನ ಬೇಡಿಕೆಯೂ ಇದ್ದದ್ದು ವಿಶೇಷ.

೧೯೨೭ರ 'ನ್ಯೂ ಇಂಡಿಯಾ ಆ್ಯಕ್ಟ್' ರೂಪಿಸುವ ಸಂದರ್ಭದಲ್ಲಿ ಮತ್ತೊಮ್ಮೆ ಮಹಿಳಾ ಸಮಾನತೆಯ ಪ್ರೇರಣೆಯಾಯಿತು. ಆದರೂ ಸಹ ರಾಷ್ಟ್ರೀಯ ಚಳುವಳಿಯ ತೀವ್ರತೆಯ ಸಂದರ್ಭದಲ್ಲಿ ನಿರ್ದಿಷ್ಟ ಮಿತಿಯನ್ನು ಕಾಯ್ದುಕೊಳ್ಳುವ ಅನಿವಾರ್ಯತೆ ಎದುರಾಯಿತು. ರಾಷ್ಟ್ರೀಯ ಮಹಿಳಾ ಸಂಸ್ಥೆಯಾದ 'ದ ವುಮೆನ್ ಇಂಡಿಯಾ ಅಸೋಸಿಯೇಷನ್'ನ ಸರೋಜಿನಿ ನಾಯ್ಡು, ಮುತ್ತುಲಕ್ಷ್ಮಿರೆಡ್ಡಿ, ರಾಮೇಶ್ವರಿ ನೆಹರು, ಬೇಗಂ ಶಾ ನವಾಜ, ರಾಧಾಬಾಯಿಯವರು ದುಂಡು ಮೇಜಿನ ಸಭೆಗಳಲ್ಲಿ ಭಾಗವಹಿಸಿದರು. ಅಲ್ಲಿಯೂ ಸಹ 'ವಯಸ್ಕರ ಸಮಾನತೆ' ಮೀಸಲಾತಿ ಸ್ಥಾನಮಾನಗಳ ಕುರಿತಾಗಿ ಬೇಡಿಕೆಯಾಯಿತು. ೧೯೩೧ರಲ್ಲಿ ಮಹಿಳೆಯರಿಗೆ ಹೆಚ್ಚಿನ ಸಮಾನತೆ ದೊರೆಯಬೇಕೆಂಬುದರ ಬಗ್ಗೆ ಪಾರ್ಲಿಮೆಂಟಿನಲ್ಲಿ ಪ್ರಸ್ತಾಪಿಸಲಾಯಿತು. ೧೯೩೩ರ ವೇಳೆಗೆ ಮಹಿಳೆಯರ ಮತ ಚಲಾವಣೆಯ ಸಾಮರ್ಥ್ಯವನ್ನು ಪುರುಷರ ಸಾಮರ್ಥ್ಯಕ್ಕೆ ೧:೧೦ ಪ್ರಮಾಣಕ್ಕೆ ಇರುವಂತೆ ಶಿಫಾರಸ್ಸು ಮಾಡಲಾಯಿತು. ಆದರೆ ಈ ಅನುಪಾತ ೧:೫ಕ್ಕಾದರೂ ಉಳಿಸಿಕೊಳ್ಳಲು ಪ್ರಯತ್ನಿಸಲಾಯಿತು. ಮತಚಲಾಯಿಸುವ ಮಹಿಳೆಯರ ಗಣತಿಗಾಗಿ ಸಮಿತಿಯನ್ನು ರಚಿಸಲಾಯಿತು. ೧೯೩೫ರಲ್ಲಿ ಇಂಡಿಯಾ ಆ್ಯಕ್ಟ್ ಅಂಗೀಕೃತಗೊಂಡಾಗ ಮಹಿಳಾ

ಪ್ರಾತಿನಿಧ್ಯಕ್ಕೆ ಮಹತ್ವ ನೀಡಿತಲ್ಲದೆ ಈ ಅನುಪಾತವನ್ನು ಅನುಮೋದಿಸಿತು. ಆದರೆ ಈ ನಿರ್ಣಯ ಮಹಿಳಾ ಚಳುವಳಿಕಾರರಿಗೇನೋ ಅಷ್ಟಾಗಿ ಸಂತಸ ತರಲಿಲ್ಲ. ಮಹಿಳೆಯರ ಸ್ಥಿತಿಗತಿ ಸುಧಾರಣೆ ಕುರಿತಾಗಿ ಬ್ರಿಟಿಷ್ ಸರ್ಕಾರ ಮತ್ತು ರಾಷ್ಟ್ರೀಯವಾದಿಗಳ ಮುಖೇನ ಪೂರ್ಣ ಸಹಕಾರ ದೊರೆಯಲಿಲ್ಲವೆಂದೇ ಹೇಳಬಹುದಾಗಿದೆ.

ಆದಾಗ್ಯೂ ಸಹ ಶಿಕ್ಷಣ, ಸಾಮಾಜಿಕ, ರಾಷ್ಟ್ರೀಯ ಚಳುವಳಿಗಳಲ್ಲಿ ತೊಡಗಿಕೊಂಡ ಅನುಭವಗಳ ಕಾರಣವಾಗಿ 'ಸಮಾನತೆಯ ಹಕ್ಕನ್ನು' ಹೊಂದುವುದರಲ್ಲಿ ಹೆಚ್ಚು ಆಸಕ್ತಿಯಿಂದ ಮಹಿಳೆಯರು ತೊಡಗುವಂತಾಯಿತು. ಈ ಬಗ್ಗೆ ತಮ್ಮ ಹಕ್ಕುಗಳನ್ನು ಹೊಂದಲು ಮಹಿಳೆಯರಿಗೆ ಇರಬಹುದಾದ ಕಾನೂನು ತೊಡಕುಗಳ ಕುರಿತಾದ ಅಧ್ಯಯನಕ್ಕೆ ವಿಶೇಷ ಆಯೋಗವನ್ನು AIWC(All India Women conference) ನೇತೃತ್ವದಲ್ಲಿ ನೇಮಿಸಲಾಯಿತು. ೧೯೩೭–೩೮ರ ವೇಳೆಗೆ ಹಿಂದೂ ಮಹಿಳೆಯರ ಆಸ್ತಿಹಕ್ಕು, ಬಾಲ್ಯವಿವಾಹ ನಿಷೇಧ, ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹ, ಬಹುಪತ್ನಿತ್ವ ನಿಷೇಧ, ವರದಕ್ಷಿಣೆ, ವೈವಾಹಿಕ ಕಾನೂನು ಇತ್ಯಾದಿಗಳಿಗೆ ಸಂಬಂಧಿಸಿದ ಹಕ್ಕುಗಳನ್ನು ಸಂಸತ್ತಿನ ಮುಂದಿಡಲಾಯಿತು. ರಾಷ್ಟ್ರೀಯ ಚಳುವಳಿಗಳಲ್ಲಿ ಮಹಿಳೆಯರು ನೀಡಿದ ಕೊಡುಗೆಗಳನ್ನು ಗುರುತಿಸಲಾಯಿತು. ಕಾಂಗ್ರೆಸ್ ರಾಷ್ಟ್ರೀಯ ಪಕ್ಷದಲ್ಲಿ ಪ್ರತ್ಯೇಕ ಮಹಿಳಾ ವಿಭಾಗವೂ ಆರಂಭಗೊಂಡಿತು. ೧೯೪೧ರ ರಾವ್ ಸಮಿತಿಯ ವರದಿ ಅನ್ವಯ ೧೯೪೩ರ ವೇಳೆಗೆ ವಿವಾಹ ಮತ್ತು ಆಸ್ತಿ ವಾರಸುದಾರಿಕೆಯನ್ನು ಕುರಿತಾದ ಎರಡು ಹಕ್ಕುಗಳು ಸಂಸತ್ತಿನಲ್ಲಿ ಅಂಗೀಕಾರ ಹೊಂದಿದವು. ಪುನಃ ೧೯೪೪ರಲ್ಲಿ 'ಹಿಂದು ಕಾಯಿದೆ ಕೋಡ್' ರಚನೆಗಾಗಿ ರಾವ್ ಸಮಿತಿಗೆ ಜವಾಬ್ದಾರಿಯನ್ನು ವಹಿಸಲಾಯಿತು. ಆದರೂ ಪ್ರಸ್ತುತ ಕಾಯಿದೆ ಪರಿಗಣನೆಗೆ ಒಳಗಾಗಲೇ ಇಲ್ಲ. ಹಾಗಾಗಿ ಈ ಕುರಿತು "ಹಕ್ಕುಗಳಿಗಾಗಿ ನಡೆಸುವ ಹೋರಾಟ ಸುಗಮವಲ್ಲ ಎಂಬುದನ್ನು ಮಹಿಳೆಯರು ಅನುಭವದಿಂದ ಅರಿತರು. ಕಾಲಕಾಲಕ್ಕೆ ಆ ಬಗ್ಗೆ ಹೋರಾಡುತ್ತಲೇ, ದಕ್ಕಿದಷ್ಟೇ ನ್ಯಾಯವನ್ನು ಒಪ್ಪಿಕೊಳ್ಳುತ್ತಲೇ ಬಾಳುವ ಅನಿವಾರ್ಯವೇ ಅವರ ಕಥೆಯಾಗಿದೆ"[೬] ಎಂದು ಎಚ್.ಎಸ್.ಶ್ರೀಮತಿಯವರು ಉಲ್ಲೇಖಿಸುತ್ತಾರೆ. ಮಹಿಳೆಯರು ಹಲವು ಹಕ್ಕೊತ್ತಾಯಗಳಿಗಾಗಿ ಅನೇಕ ಹೋರಾಟಗಳನ್ನು ನಡೆಸಿದರೂ ಸಹ ಅವುಗಳಲ್ಲಿ ಫಲಿತ ಕಂಡವುಗಳ ಪ್ರಮಾಣಕ್ಕಿಂತಲೂ ರಾಜಿ ಒಪ್ಪಂದಗಳಿಂದ ಹಿಂದೆ ಸರಿದದ್ದೇ ಹೆಚ್ಚು. ಇಲ್ಲಿ ಮಹಿಳಾ ಹೋರಾಟಗಳನ್ನು ಗಮನಿಸುವಲ್ಲಿ ಎರಡು ಪ್ರಮುಖ ಆಯಾಮಗಳಿವೆ. ಮಹಿಳಾಪರ ಬೇಡಿಕೆಗಳಲ್ಲದೆ ಸ್ವದೇಶಿ ಚಳುವಳಿ, ಕಾನೂನು ಭಂಗ ಚಳುವಳಿ, ಅಸಹಕಾರ ಚಳುವಳಿ, ಚಿತ್ತಗಾಂಗ್ ಶಸ್ತ್ರಾಸ್ತ್ರ ಸೇನಾದಾಳಿ, ಹೋಂರೂಲ್ ಚಳುವಳಿ, ಬಂಗಾಳ ವಿಭಜನೆ ಪ್ರತಿಭಟನಾ ಚಳುವಳಿ ಮುಂತಾದ ರಾಷ್ಟ್ರೀಯವಾದಿ ಹೋರಾಟಗಳಲ್ಲಿ ಮಹಿಳಾ ಶಕ್ತಿ ಮಹತ್ವದ ಪಾತ್ರವಹಿಸಿದೆ. ಹೀಗೆ ಇವೆಲ್ಲ ಚಳುವಳಿಗಳಲ್ಲಿ ಮಹಿಳೆಯರ

ಪಾಲ್ಗೊಳ್ಳುವಿಕೆಯು ಒಂದು ಆಯಾಮವಾದರೆ ಎನ್.ಗಾಯತ್ರಿಯವರು ಹೇಳುವಂತೆ "ಸ್ವಾತಂತ್ರ್ಯ ಹೋರಾಟವು ಶಿಕ್ಷಿತ, ಮೇಲು ಜಾತಿಯ ಹಾಗೂ ಮಧ್ಯಮವರ್ಗಗಳ ಮಹಿಳೆಯರನ್ನು ಒಳಗೊಂಡಿದ್ದಾಗ ಇದರ ಜೊತೆ ಜೊತೆಯಲ್ಲಿಯೇ ಗ್ರಾಮೀಣ ಮಹಿಳೆಯರು ಅಂದು ದೇಶದಲ್ಲಿ ನಡೆದ ಹಲವಾರು ಸಾಮಾಜಿಕ ಆರ್ಥಿಕ ಹೋರಾಟಗಳಲ್ಲಿ ಭಾಗವಹಿಸುತ್ತಿದ್ದರು."[೭] ಇವುಗಳನ್ನು ಮಹಿಳೆಯರ ಸಾಮಾಜಿಕ ಹೋರಾಟದ ಸಂದರ್ಭದ ಮತ್ತೊಂದು ಆಯಾಮವಾಗಿ ಗುರುತಿಸಬಹುದಾಗಿದೆ. ಅದುವರೆಗೂ ರಾಷ್ಟ್ರೀಯ ಚಳುವಳಿಗಳಲ್ಲಿ ಶಿಕ್ಷಿತ, ಮಧ್ಯಮ, ಮೇಲ್ವರ್ಗದ ಮಹಿಳೆಯರೇ ಹೆಚ್ಚಾಗಿ ಭಾಗವಹಿಸಿದ್ದರು. ಆದರೆ ಇದಕ್ಕೆ ಸರಿಸಮಾನವಾಗಿ ನಡೆದ ಇತರೆ ಹೋರಾಟಗಳಲ್ಲಿ ಗ್ರಾಮೀಣ ಮಹಿಳೆಯರ ಪಾತ್ರವೂ ಗಣನೀಯವಾಗಿತ್ತು. ಹೀಗಾಗಿ ಎಲ್ಲ ಸ್ತರದ ಮಹಿಳೆಯರಲ್ಲಿ ಹೋರಾಟದ ಮನೋಭಾವ ಜಾಗೃತವಾಗಿತ್ತು. ಇದಕ್ಕೆ ಉದಾಹರಣೆಯಾಗಿ ಅಸ್ಪೃಶ್ಯತಾ ನಿವಾರಣಾ ಚಳುವಳಿ, ಮಣಿಪುರದ ನ್ಯೂಪಿಲ್ಯಾನ್ ಚಳುವಳಿ, ಔಧ್‌ನ ರೈತ ಚಳುವಳಿ, ಮಹಾರಾಷ್ಟ್ರದ ವರ್ಲಿಗಳ ಹೋರಾಟ, ಬಂಗಾಳದ ತೇಭಾಗ ಚಳುವಳಿ, ಆಂಧ್ರದ ತೆಲಂಗಾಣ ಚಳುವಳಿ, ತಮಿಳುನಾಡಿನ ದ್ರಾವಿಡ ಚಳುವಳಿ, ಕೇರಳದ ಪುನ್ನಪ್ಪ-ವಯಲಾರ್ ಚಳುವಳಿಗಳನ್ನು ಹೆಸರಿಸಬಹುದಾಗಿದೆ. ಆದರೆ, ಮಹಿಳೆಯರು ತಮ್ಮ ವ್ಯಕ್ತಿಗತ ಸಮಸ್ಯೆ, ಸಮಾನತೆ ಮತ್ತು ಹಕ್ಕುಗಳ ಬೇಡಿಕೆಗಾಗಿ ನಡೆಸಿದ ಚಳುವಳಿಗಳಲ್ಲಿ ನಿರೀಕ್ಷಿತ ಫಲಿತಾಂಶ ದೊರೆಯದೇ ಹೋಯಿತು. ಆದರೆ ಈ ಎಲ್ಲದರ ಮಧ್ಯೆ ಅದುವರೆಗೂ ಪಿತೃಪ್ರಧಾನ ವ್ಯವಸ್ಥೆಯ ಪ್ರಭಾವದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿದ್ದ ಮಹಿಳಾ ವಿಷಯಗಳು ಇಡೀ ಜಗತ್ತಿನ ಗಮನ ಸೆಳೆದದ್ದು ವಿಶೇಷ.

**ಆ. ಸ್ವಾತಂತ್ರ್ಯೋತ್ತರದಲ್ಲಿನ ಮಹಿಳಾ ಹೋರಾಟಗಳು:** ಸ್ವಾತಂತ್ರ್ಯಪೂರ್ವದಲ್ಲಿ ಮಾನವತಾವಾದದ ಮತ್ತೊಂದು ರೂಪವಾಗಿ ಆರಂಭಗೊಂಡ ಸ್ತ್ರೀವಾದಿ ಚಳುವಳಿಗಳು ಲಿಂಗಸಮಾನತೆಯ ಹೊಸ ಆಶಯದಲ್ಲಿ ಮುಂದುವರಿದು ಬಂದವು. ಆದರೆ, ಅಂದಿನ ಸಂದರ್ಭಕ್ಕೆ ರಾಷ್ಟ್ರೀಯವಾದ ಚಳುವಳಿಯ ಅಂತಿಮ ನಿಷ್ಠೆ ದೇಶಕ್ಕೆ ಸ್ವಾತಂತ್ರ್ಯ ತಂದುಕೊಡುವಲ್ಲಿ ಬದ್ಧವಾಗಿತ್ತು. ಇದು ಕಾರಣವಾಗಿ ಮಹಿಳೆಯರ ಧ್ವನಿಗಳನ್ನು ನಿಶ್ಯಬ್ಧಗೊಳಿಸಿ, ಮಹಿಳಾ ಸಂಘಟನೆಗಳ ಪಾಲಿಗೆ ನಿರಾಸೆ ಮೂಡಿಸಲಾಯಿತು. ಇದರೊಂದಿಗೆ ದೇಶವಿಭಜನೆಯಂತಹ ರಾಜಕೀಯ ಚಿತ್ರಣದ ಬದಲಾವಣೆ, ಪ್ರತ್ಯೇಕತೆಗಳು ಮಹಿಳಾ ಚಳುವಳಿಗಳಿಗೆ ಅಲ್ಪಕಾಲಿಕ ತಡೆಯೊಡ್ಡಿ ಮಂಕಾಗಿಸಿದವು. ಬ್ರಿಟಿಷರ ವಸಾಹತುಶಾಹಿ ಆಡಳಿತದಿಂದ ಭಾರತ ಸ್ವತಂತ್ರವಾದ ಮೇಲೆ "ಆರ್ಥಿಕ ಬೆಳವಣಿಗೆ, ಸಾಮಾಜಿಕ-ರಾಜಕೀಯ ಚಳುವಳಿಗಳ ಪರಿಣಾಮ ಇವೆರಡೂ ಸೇರಿ ಮಧ್ಯಮವರ್ಗದ ಮಹಿಳೆಗೆ ವಿದ್ಯಾಭ್ಯಾಸ ಮತ್ತು ಉದ್ಯೋಗ ಕೈಗೆಟುಕುವಂತಾಯಿತು. ಈ ಬದಲಾವಣೆಗಳಿಂದ ಸಮಾಜದಲ್ಲಿರುವ

ಅಮಾನವೀಯ ಪದ್ಧತಿಗಳಾದ ಸತಿ, ಹೆಣ್ಣು ಭ್ರೂಣಹತ್ಯೆ, ವಿಧವಾ ವಿವಾಹ ಮುಂತಾದವುಗಳ ಬಗ್ಗೆ ಅರಿವು ಮೂಡಿಸಿದರೆ, ಇನ್ನೊಂದು ಕಡೆ ಬದಲಾಗುತ್ತಿರುವ ಆರ್ಥಿಕ, ಸಾಮಾಜಿಕ, ರಾಜಕೀಯ ಪರಿಸ್ಥಿತಿಯಲ್ಲಿ ವರದಕ್ಷಿಣೆಯ ಸಾವು ಹೆಣ್ಣಿನ ಮೇಲಿನ ಲೈಂಗಿಕ ಹಲ್ಲೆ, ಅತ್ಯಾಚಾರ ಪ್ರಕರಣಗಳು ಧಾರ್ಮಿಕ ಪುನರುತ್ಥಾನ ಜಾತೀಯ ಹಾಗೂ ಮತೀಯ ಕಲಹಗಳು ಹೆಣ್ಣಿನ ಬದುಕನ್ನು ಅಪಮೌಲ್ಯಗೊಳಿಸುತ್ತಾ ಹೊರಟವು."[೮] ಇದರರ್ಥ ರಾಷ್ಟ್ರೀಯವಾದದ ಚಳುವಳಿಗಳಲ್ಲಿ ಮಹಿಳೆಯರ ಬಾಹ್ಯಸಮಸ್ಯೆ ಹಾಗೂ ಬೇಡಿಕೆಗಳನ್ನು ಗುರುತಿಸಲಾಯಿತು. ಇದರ ಹೊರತಾಗಿ ಕೌಟುಂಬಿಕ ನೆಲೆಯಲ್ಲಿ ಆಕೆ ಅನುಭವಿಸುವ ಇತರೆ ಸಮಸ್ಯೆಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಿಲ್ಲವೆನ್ನಬಹುದು. ಇದರಿಂದ ಪರಿಹಾರದ ಹಂತಕ್ಕೆ ಬರುವ ಆಶಯದಲ್ಲಿದ್ದ ಹೆಣ್ಣಿನ ಸಮಸ್ಯೆಗಳು ಹಾಗೆಯೇ ಮುಂದುವರೆದವು.

ಆದಾಗ್ಯೂ ಸಮಾಧಾನಕರ ಸಂಗತಿಯೆಂದರೆ ಸ್ವಾತಂತ್ರ್ಯದ ನಂತರ ಲಿಂಗ ಸಮಾನತೆ, ನೀತಿ ಮತ್ತು ಪ್ರಜಾಪ್ರಭುತ್ವವುಳ್ಳ ಸಮಾಜ ನಿರ್ಮಾಣ ಪ್ರಮುಖವಾಯಿತು. ಸ್ವತಂತ್ರ ಭಾರತದ ಸಂವಿಧಾನವು ಮಹಿಳೆಯರಿಗೆ ಸಂಬಂಧಿಸಿದಂತೆ ಅತ್ಯಂತ ಪ್ರಗತಿಶೀಲ ಕಾನೂನುಗಳನ್ನು ಜಾರಿಗೆ ತಂದಿತು. ಮತ್ತಷ್ಟು ಸಂಖ್ಯೆಯ ಮಹಿಳಾಪರ ಸಂಘ-ಸಂಸ್ಥೆಗಳ ಬೆಳವಣಿಗೆಯಾಯಿತು. ಮಧ್ಯಮವರ್ಗದ ಮಹಿಳೆಯರು ಹೆಚ್ಚು ವಿಸ್ತಾರವಾಗುತ್ತಿದ್ದ ಸೇವೆ, ಶಿಕ್ಷಣ ಇತರ ಕ್ಷೇತ್ರಗಳಲ್ಲಿ ಸ್ಥಾನಪಡೆದರು. ಇಷ್ಟಾಗಿಯೂ ಸ್ವಾತಂತ್ರ್ಯಪೂರ್ವದಲ್ಲಿ ಬಡ, ಶ್ರಮಿಕ ಹೆಣ್ಣುಮಕ್ಕಳ ಮೇಲಾಗುತ್ತಿದ್ದ ಶೋಷಣೆ, ಹಿಂಸೆಗಳು ಸ್ವಾತಂತ್ರ್ಯದ ನಂತರವೂ ಮುಂದುವರಿದು ಹೊಸಸ್ವರೂಪವನ್ನು ಪಡೆದು ಕೊಂಡವು.

ಸ್ವತಂತ್ರ ಭಾರತದ ರಾಜಕೀಯ ಬಿಕ್ಕಟ್ಟಿನ ನಡುವೆಯೂ ನಿಜಾಮ ಮತ್ತು ರಜಾಕರ ದೌರ್ಜನ್ಯವನ್ನು ಪ್ರತಿಭಟಿಸಿ ೧೯೪೮ರಲ್ಲಿ ನಡೆದ ತೆಲಂಗಾಣದ ಮಹಿಳಾ ಚಳುವಳಿ ಗಮನ ಸೆಳೆಯಿತು. ೧೯೪೯ರಲ್ಲಿ ಅನಕ್ಷರಸ್ಥ ದಲಿತ, ಶೂದ್ರ ಸ್ತ್ರೀಯರ ಮೇಲಿನ ಶೋಷಣೆಯ ವಿರುದ್ಧವಾಗಿ ಹೋರಾಡಿ ಪೊಲೀಸರ ಗುಂಡಿನ ದಾಳಿಯಲ್ಲಿ 'ಮಹಿಳಾ ಆತ್ಮ ರಕ್ಷಣ ಸಮಿತಿ'ಯ ನಾಲ್ವರು ಮಹಿಳೆಯರು ಪ್ರಾಣತೆತ್ತರು. ಮಹಿಳೆಯ ಪ್ರಜಾಸತ್ತಾತ್ಮಕ ಚಳುವಳಿಗಳಿಂದ ಅಂತಾರಾಷ್ಟ್ರೀಯ ಸಂಬಂಧ ಬೆಳೆದು, ಹಲವಾರು ಶಾಂತಿ ಸಮಾವೇಶಗಳಲ್ಲಿ ಭಾರತದ ಮಹಿಳಾ ಪ್ರತಿನಿಧಿಗಳು ಪಾಲ್ಗೊಳ್ಳುವಂತಾಯಿತು. ಇದರ ಫಲವಾಗಿ 'ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್' ಸ್ಥಾಪನೆಗೊಂಡಿತು. ಈ ಮೂಲಕ ಭಾರತೀಯ ಮಹಿಳೆಯರಿಗೆ ಸಮಾನ ಹಕ್ಕನ್ನು ಒದಗಿಸಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ವಿಮೋಚನೆಗಾಗಿ ಕಾರ್ಯಪ್ರವೃತ್ತವಾಯಿತು. ೧೯೫೨ರ ವೇಳೆಗೆ ಭಾರತದ ಮೊದಲ ಸಾರ್ವತ್ರಿಕ ಚುನಾವಣೆ ನಡೆದು ಹಲವಾರು

ಕಮ್ಯುನಿಸ್ಟ್ ಮಹಿಳೆಯರು ಲೋಕಸಭೆಗೆ ಚುನಾಯಿತರಾದರು. ಮಹಿಳಾ ಹಕ್ಕುಗಳಿಗೆ ಸಂಬಂಧಿಸಿದ ಶಾಸನಗಳ ಅಂಗೀಕಾರಕ್ಕೆ ಶ್ರಮಿಸಿದರು. ಇದರ ಫಲವಾಗಿ ಭಾರತದ ಯೋಜನಾ ಆಯೋಗವು ಮಹಿಳಾ ಪ್ರಗತಿಯನ್ನು ಗುರುತಿಸಿಕೊಂಡಿತು. ಶಿಕ್ಷಣ, ಸಾಮಾಜಿಕ ಕ್ಷೇಮಾಭಿವೃದ್ಧಿ, ಆರೋಗ್ಯದ ವಿಚಾರಗಳ ಮೇಲ್ವಿಚಾರಣೆಗಾಗಿ 'ನ್ಯಾಷನಲ್ ಕೌನ್ಸಿಲ್ ಫಾರ್ ವುಮೆನ್ ಎಜುಕೇಶನ್'ನಂತಹ ಅಂಗಸಂಸ್ಥೆಗಳನ್ನು ರಚಿಸಿ ಮಹಿಳಾ ಅಭಿವೃದ್ಧಿಯ ಜವಾಬ್ದಾರಿಯನ್ನು ವಹಿಸಲಾಯಿತು. ಪಂಚವಾರ್ಷಿಕ ಯೋಜನೆ ಗಳಲ್ಲಿಯೂ ಮಹಿಳಾ ಪ್ರಗತಿಯ ಗುರಿಯನ್ನು ಯೋಜಿಸಲಾಯಿತು. ಮೊದಲ ಐದು ಯೋಜನೆಗಳಲ್ಲಿ ಹೆಣ್ಣುಮಕ್ಕಳ ಶಿಕ್ಷಣ, ಕೌಟುಂಬಿಕ ಕ್ಷೇಮಾಭಿವೃದ್ಧಿ, ಗರ್ಭಿಣಿ ಹಾಗೂ ಶಿಶು ಆರೋಗ್ಯ ಸಂರಕ್ಷಣೆ, ಕುಟುಂಬ ಯೋಜನೆ, ಮಹಿಳಾ ಕಾರ್ಮಿಕರ ಕ್ಷೇಮಾಭಿವೃದ್ಧಿ ಇತ್ಯಾದಿ ಕಾರ್ಯಕ್ರಮಗಳು ರೂಪುಗೊಂಡವು.

ಇದೇ ಸಂದರ್ಭಕ್ಕೆ ೧೯೫೭ರ ಕೋಪನ್ ಹೇಗ್‌ನ ಅಂತರಾಷ್ಟ್ರೀಯ ಮಹಿಳಾ ಕಾಂಗ್ರೆಸ್ ಸಮಾವೇಶ, ೧೯೫೫ರ ಸ್ವಿಜ್ಜರ್‌ಲ್ಯಾಂಡಿನ 'ತಾಯಂದಿರ ಸಮಾವೇಶ', ೧೯೬೦ ಮಾರ್ಚ್ ೮ರ 'ಅಂತಾರಾಷ್ಟ್ರೀಯ ಮಹಿಳಾ ದಿನದ ಸುವರ್ಣ ಮಹೋತ್ಸವ ಆಚರಣೆ'ಯ ಘಟನೆಗಳು ಅಂತಾರಾಷ್ಟ್ರೀಯ ಮಹಿಳಾ ಆಂದೋಲನಕ್ಕೆ ಸಂಬಂಧಿಸಿದಂತೆ ಜರುಗಿದವು. ಇದರ ಪರಿಣಾಮವಾಗಿ ಭಾರತದಲ್ಲಿ ೧೯೫೫-೫೬ರಲ್ಲಿ 'ಹಿಂದೂ ವಿವಾಹ ಕಾಯ್ದೆ', ೧೯೫೪ರಲ್ಲಿ 'ವಿಶೇಷ ವಿವಾಹ ಕಾಯ್ದೆ' ಮತ್ತು 'ಕುಟುಂಬ ನ್ಯಾಯಾಲಯ ಕಾಯ್ದೆ', ೧೯೬೧ರಲ್ಲಿ 'ವರದಕ್ಷಿಣೆ ನಿಷೇಧ' ಮತ್ತು 'ಹೆರಿಗೆ ಸೌಲಭ್ಯ ಕಾಯ್ದೆ'ಗಳು ಜಾರಿಬಂದವು. ಆದರೆ ೧೯೫೫ರ ಹಿಂದೂ ಶಾಸನದ ಮಸೂದೆಯು ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರ ಹಕ್ಕಿನ ಬೇಡಿಕೆಯನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಸಾರ್ವತ್ರಿಕ ನಾಗರಿಕ ಸಂಹಿತೆಯ ಜಾರಿಗೆ ಹಿಂದೇಟು ಹಾಕಲಾಯಿತು. ಇದರಿಂದ ೧೯೬೦ರ ವೇಳೆಗೆ ಮಹಿಳೆಯರ ಹಲವಾರು ಆಶ್ವಾಸನೆಗಳು ಪೂರೈಸಲ್ಪಡಲಿಲ್ಲ ಎಂಬುದು ಸ್ಪಷ್ಟವಾಗುತ್ತಾ ಹೋಯಿತು. ಪ್ರತಿಯಾಗಿ ಮಹಿಳಾ ಚಳುವಳಿಯ ಸ್ವರೂಪ ಬದಲಾಯಿತು.

ಬೆಲೆ ಏರಿಕೆ ವಿರುದ್ಧ ಚಳುವಳಿ, ಭೂ ಹಕ್ಕುಗಳ ಚಳುವಳಿ, ರೈತಾಪಿ ಚಳುವಳಿ, ದಲಿತ ಚಳುವಳಿ ಮುಂತಾದವುಗಳಲ್ಲಿ ಮಹಿಳೆಯರು ಸಕ್ರಿಯವಾಗಿ ಭಾಗವಹಿಸಿದರು. ಉದಾಹರಣೆಗೆ ೧೯೭೦ರ ಮಹಾರಾಷ್ಟ್ರದ ದುಲಿಯಾ ಜಿಲ್ಲೆಯ ಭೂ ಮಾಲೀಕರು ಮತ್ತು ಬಿಲ್ ಆದಿವಾಸಿಗಳ ನಡುವಿನ ಸಂಘರ್ಷ, ೧೯೭೩ರ ಗುಜರಾತಿನ ಬೆಲೆ ಏರಿಕೆ ವಿರೋಧಿ ಪ್ರತಿಭಟನೆ, ೧೯೭೪ರ ಬಿಹಾರದ ಭ್ರಷ್ಟಾಚಾರ ವಿರೋಧಿ ಚಳುವಳಿ, ಮುಂಬಯಿಯಲ್ಲಿ ನಡೆದ ಲಾಲ್ ಮೋರ್ಚಾ ಹೀಗೆ ಮಹಿಳಾ ವಿಷಯಗಳ ಹೊರತಾಗಿಯೂ ಪರ್ಯಾಯ ಅಭಿವೃದ್ಧಿ ಚಟುವಟಿಕೆ ಮತ್ತು ಸಾಮೂಹಿಕ ಪ್ರತಿಭಟನೆಗಳಲ್ಲಿ ಮಹಿಳೆಯರು ಭಾಗವಹಿಸಿದರು. ಈ ವೇಳೆ ಮಹಿಳೆಯರ

ಹೋರಾಟ ಮತ್ತು ಸಾಮೂಹಿಕ ಶಕ್ತಿಯ ಅರಿವಾಯಿತು. ಇದಕ್ಕೆ ಅಂಬೇಡ್ಕರ್, ಪುಲೆ, ಲೋಹಿಯಾ, ನಾರಾಯಣರಂತಹ ಚಿಂತಕರ ವಿಚಾರಗಳು ಮತ್ತಷ್ಟು ಪ್ರಭಾವ, ಪ್ರೋತ್ಸಾಹ ನೀಡಿದವು.

ಇದೇ ಪ್ರೇರಣೆಯಿಂದ ದೇಶದೆಲ್ಲೆಡೆ ಕೌಟುಂಬಿಕ ಹಿಂಸೆ, ಮದ್ಯಪಾನ ವಿರೋಧ, ಲೈಂಗಿಕ ಕಿರುಕುಳ, ವರದಕ್ಷಿಣೆ ವಿರೋಧಿ ಹೋರಾಟಗಳು ನಡೆದವು. ಆದರೆ ೧೯೭೫ರ ತುರ್ತು ಪರಿಸ್ಥಿತಿಯ ಕಾರಣದಿಂದ ಮಹಿಳಾ ಹೋರಾಟಗಳು ಮತ್ತೆ ಎರಡನೇ ಬಾರಿಗೆ ಅಲ್ಪಕಾಲಿಕವಾಗಿ ತೆರೆಮರೆಗೆ ಸರಿದವು. ಕಾರಣ ಮಹಿಳಾ ಹೋರಾಟಗಳಿಗೆ ತಾತ್ಕಾಲಿಕ ತಡೆ ಯಾಯಿತು. ಪುನಃ ೧೯೭೫-೮೫ರ ಮಹಿಳಾ ದಶಕದ ಅವಧಿಯಲ್ಲಿ ಹೊಸ ಚಿಂತನೆ, ಹೋರಾಟಗಳು ಮುಂಚೂಣಿಗೆ ಬಂದವು. ಇದರಿಂದಾಗಿ ೧೯೭೫ರ ಅಂತಾರಾಷ್ಟ್ರೀಯ ಮಹಿಳಾ ವರ್ಷ ಮತ್ತು ೧೯೭೫-೮೫ರ ಮಹಿಳಾ ದಶಕದ ಆಚರಣೆಗಳು ಮಹಿಳೆಯರ ಹಿತಾಸಕ್ತಿಯ ಪರವಾದ ಹೋರಾಟವನ್ನು ಜಾಗತಿಕ ನೆಲೆಯಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದವು.

### ೨.೩.೩. ಕರ್ನಾಟಕದ ಮಹಿಳಾ ಚಳುವಳಿಗಳು

ಕರ್ನಾಟಕದ ಮಟ್ಟಿಗೆ ಚಳುವಳಿ ಎನ್ನುವ ಪರಿಕಲ್ಪನೆಯನ್ನು ಅಧಿಕೃತವಾಗಿ ಗುರುತಿಸಿ ಕೊಳ್ಳುವುದು ವಚನ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ. ಕಾರಣ ಇದಕ್ಕೂ ಮುಂಚಿನ ಅವಧಿಯಲ್ಲಿ ಯಾವುದೇ ಕ್ಷೇತ್ರದಲ್ಲಿಯೂ ಇದರ ಪ್ರವೇಶ ಆಗಿದ್ದಿಲ್ಲ. ವಚನ ಚಳುವಳಿಯ ಸಂದರ್ಭದಲ್ಲಿ ಎಲ್ಲ ಸಮುದಾಯದ ಮಹಿಳೆಯರು ಧಾರ್ಮಿಕ ಹಾಗೂ ಸಾಮಾಜಿಕ ಸಮಾನತೆಗಾಗಿ ಕೈಜೋಡಿಸಿದರು. ಅಕ್ಕಮಹಾದೇವಿ, ಮುಕ್ತಾಯಕ್ಕ, ಕಾಳವ್ವೆ, ಆಯ್ದಕ್ಕಿ ಲಕ್ಕಮ್ಮ ಹೀಗೆ ಅನೇಕ ಶಿವಶರಣೆಯರು ಮುನ್ನೆಲೆಗೆ ಬಂದರು. ಹಾಗಾಗಿ ಈ ವಿದ್ಯಮಾನ ಕರ್ನಾಟಕದ ಇತಿಹಾಸದಲ್ಲಿ 'ಚಳುವಳಿ' ಮತ್ತು 'ಮಹಿಳೆಯ ಭಾಗವಹಿಸುವಿಕೆ'ಯ ದೃಷ್ಟಿಯಿಂದ ತುಂಬಾ ಮಹತ್ವವನನ್ನು ಪಡೆದುಕೊಂಡಿದೆ.

ಇದಾದ ನಂತರ ಕರ್ನಾಟಕದ ಮಹಿಳಾ ಚಳುವಳಿಗಳ ಹೆಜ್ಜೆ ಗುರುತುಗಳನ್ನು ಪುನಃ ಕಾಣುವುದು ಭಾರತದ ಮಹಿಳಾ ಚಳುವಳಿಗಳ ಸಂದರ್ಭದಲ್ಲಿ. ರಾಷ್ಟ್ರೀಯ ಚಳುವಳಿ ಮತ್ತು ಸಮಾಜ ಸುಧಾರಣಾ ಚಳುವಳಿಗಳ ನೆರಳಿನಲ್ಲಿಯೇ ಮಹಿಳಾ ಚಳುವಳಿಗಳನ್ನು ಗುರುತಿಸುವ ಸಂದರ್ಭ ಇತ್ತು. ಕರ್ನಾಟಕದಲ್ಲಿ ಇದರ ತೀವ್ರತೆಯನ್ನು ತುಂಬಾ ದೊಡ್ಡಮಟ್ಟದಲ್ಲಿ ಗುರುತಿಸ ಲಾಗದಿದ್ದರೂ ಸಹ ಪೂರ್ಣ ಪ್ರಮಾಣದಲ್ಲಿ ಮಹಿಳಾ ಚಳುವಳಿಗಳ ಒತ್ತಾಸೆಗಳಿಂದ ದೂರವಿತ್ತು ಎಂದು ಹೇಳಲಾಗದು.

ಸ್ವಾತಂತ್ರ್ಯಪೂರ್ವದ ಸಂದರ್ಭದಲ್ಲಿ ಗಾಂಧೀಜಿಯವರ ಸ್ಫೂರ್ತಿ, ಬೆಂಬಲಗಳಿಂದ ಮಹಿಳೆಯರು ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಇಳಿದರು. ಅಸಹಕಾರ ಚಳುವಳಿಯ ಸಂದರ್ಭದಲ್ಲಿ ಇದು ಮತ್ತಷ್ಟು ತೀವ್ರತೆಯನ್ನು ಪಡೆದುಕೊಂಡಿತು. ಹೋರಾಟಗಾರರ ಬೇಕು ಬೇಡಗಳನ್ನು ನೋಡಿಕೊಳ್ಳುತ್ತ ತಮ್ಮ ಒಡವೆ ವಸ್ತ್ರಗಳನ್ನು ಚಳುವಳಿಗೆ ಅರ್ಪಿಸುವುದರೊಂದಿಗೆ, ಖಾದಿಯನ್ನು ತಯಾರಿಸುವ ಮೂಲಕವೂ ಮಹಿಳೆಯರು ಪರೋಕ್ಷವಾಗಿ ರಾಷ್ಟ್ರೀಯ ಚಳುವಳಿಯನ್ನು ಬೆಂಬಲಿಸಿದರು. ಇನ್ನೂ ಕೆಲವರು ಮುಕ್ತ ಹೋರಾಟಕ್ಕೂ ಇಳಿದರು. ಕರ್ನಾಟಕದ ಸಂದರ್ಭದಲ್ಲಿ ಮೈಸೂರಿನ ಸುಬ್ಬಮ್ಮ, ಯಶೋಧರಾ ದಾಸಪ್ಪ, ಗೌರಮ್ಮ ವೆಂಕಟರಾಮಯ್ಯ, ಉಮಾಬಾಯಿ ಕುಂದಾಪುರ, ಬಳ್ಳಾರಿ ಸಿದ್ಧಮ್ಮ, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರು ಪ್ರಮುಖರಾದವರು.

ಇಷ್ಟಾದರೂ ರಾಷ್ಟ್ರೀಯ ಚಳುವಳಿಗಳ ಪ್ರಭಾವದಲ್ಲಿ ಮಹಿಳಾಪರ ಹೋರಾಟ ಮತ್ತು ಬೇಡಿಕೆಗಳು ಎರಡನೆಯ ಆದ್ಯತೆಯಾದವು. ಆದಾಗ್ಯೂ ಸಹ ಕರ್ನಾಟಕದಲ್ಲಿ ಈ ವೇಳೆಗೆ ದೊರೆತ ಸ್ತ್ರೀ ಶಿಕ್ಷಣ ಪ್ರಭಾವದಿಂದ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶ, ಪ್ರೋತ್ಸಾಹಗಳು ದೊರೆತಿದ್ದವು. ಪರಿಣಾಮವಾಗಿ ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾದೇವಿ ಬೆಳಗಾಂವಕರ್ ಮುಂತಾದವರು ಮಹಿಳಾ ಸುಧಾರಣೆ ಮತ್ತು ಹೋರಾಟಗಳಲ್ಲಿ ತೊಡಗಿಕೊಂಡರು. ತಿರುಮಲಾಂಬರವರು 'ಸತಿ ಹಿತೈಷಿಣಿ' ಎಂಬ ಗ್ರಂಥ ಮಾಲೆಯನ್ನು ಆರಂಭಿಸಿ ಮಹಿಳೆಯರ ಅಭಿವೃದ್ಧಿಗಾಗಿ ದುಡಿದರು. ಅಂದಿನ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶದ ಹಾಗೂ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಅವರಿಗಿದ್ದ ಕಾಳಜಿಗಳನ್ನು ತಮ್ಮ ಕಾದಂಬರಿಗಳಲ್ಲಿ ಅನಾವರಣಗೊಳಿಸಿದರು. ಕಲ್ಯಾಣಮ್ಮನವರು 'ಸರಸ್ವತಿ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಇದರೊಂದಿಗೆ ೧೯೧೩ರಲ್ಲಿ 'ಶಾರದಾ ಸ್ತ್ರೀ ಸಮಾಜ'ವನ್ನು ಸ್ಥಾಪಿಸಿದರು. ಈ ಮೂಲಕ ಮಹಿಳೆಯರು ಬಹುಭಾಷೆಗಳ ಪರಿಣಿತಿಯನ್ನು ಸಾಧಿಸಿಕೊಳ್ಳುವುದನ್ನು ಪ್ರೋತ್ಸಾಹಿಸಿ ಉಪನ್ಯಾಸ, ಚರ್ಚೆಯಂತಹವುಗಳ ಮೂಲಕ ಹೆಣ್ಣುಮಕ್ಕಳ ಅಭಿವ್ಯಕ್ತಿ ಸಾಮರ್ಥ್ಯವನ್ನು ಬೆಳೆಸಲು ಪ್ರಯತ್ನಿಸಿದರು. ೧೯೨೮ನೇ ಮಾರ್ಚ್ ತಿಂಗಳಲ್ಲಿ ಆರಂಭಗೊಂಡ ಧಾರವಾಡದ 'ವನಿತಾ ಸಮಾಜ' ೧೯೬೬ರ ವರೆಗೆ ಶಾಲಾ ಶಿಕ್ಷಣ ಮತ್ತು ವಿವಿಧ ವೃತ್ತಿಪರ ವಿಷಯಗಳಲ್ಲಿ ಮಹಿಳೆಯರಿಗೆ ತರಬೇತಿಯನ್ನು ನೀಡಿತು. ಅಲ್ಲದೆ 'ವೀರವನಿತೆ' ಎಂಬ ಪತ್ರಿಕೆಯ ಮೂಲಕ ಮಹಿಳೆಯರ ಪ್ರಗತಿಪರ ಚಿಂತನೆಗಳನ್ನು ಪ್ರಚುರಪಡಿಸಿತು. ಇದೇ ವೇಳೆ ಕನ್ನಡ ಸಾಹಿತ್ಯಲೋಕದಲ್ಲಿ ಸ್ತ್ರೀಪರ ಚಿಂತನೆ, ಸೃಜನಶೀಲ ಬರವಣಿಗೆಯ ಮೂಲಕ ಹೆಸರಾಗಿದ್ದ ಶ್ಯಾಮಲಾದೇವಿ ಬೆಳಗಾಂವಕರ್‌ರವರು ೧೯೨೭ರಲ್ಲಿ ಪುಣೆಯಲ್ಲಿ ನಡೆದ 'ಅಖಿಲ ಭಾರತ ಮಹಿಳಾ ಪರಿಷತ್ತಿ'ನ ಅಧಿವೇಶನದಲ್ಲಿ ಕರ್ನಾಟಕದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಹೀಗೆ ಲೇಖಕಿಯರು ಮಹಿಳಾ ಸಂಘಟನೆಗಳಲ್ಲಿ ಹೆಚ್ಚು ಕ್ರಿಯಾಶೀಲರಾಗಿ ತೊಡಗಿಕೊಂಡದ್ದು

ಅಂದಿನ ಕಾಲಮಾನಕ್ಕೆ ಕರ್ನಾಟಕದ ಮಹಿಳಾ ಹೋರಾಟಗಳಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ. ಗಾಂಧೀಜಿಯವರ ನೇತೃತ್ವದಲ್ಲಿ ನಡೆದ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿಯೂ ಕರ್ನಾಟಕದ ನೂರಾರು ವಿದ್ಯಾರ್ಥಿನಿಯರು ಹಾಗೂ ಅಸಂಘಟಿತ ವಲಯಗಳಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರು ಭಾಗವಹಿಸಿದರು. ಈ ಘಟನೆ ಮಹಿಳೆಯರಲ್ಲಿನ ಹೋರಾಟದ ಮನೋಭಾವವನ್ನು ಮತ್ತಷ್ಟು ಜಾಗೃತಗೊಳಿಸಿತು.

ಸ್ವಾತಂತ್ರ್ಯದ ನಂತರದಲ್ಲಿ ಆಧುನೀಕರಣ, ಪಂಚವಾರ್ಷಿಕ ಯೋಜನೆಗಳು, ಉನ್ನತ ಶಿಕ್ಷಣ, ಉದ್ಯೋಗ ಇತ್ಯಾದಿಗಳ ಕಾರಣವಾಗಿ ಮಹಿಳೆಯರ ಸ್ಥಿತಿಗತಿಗಳು ಮತ್ತೊಂದು ಆಯಾಮ ವನ್ನು ಪಡೆದುಕೊಂಡವು. ಸ್ವಾತಂತ್ರ್ಯಪೂರ್ವದ ಹೋರಾಟ, ಆಶಯಗಳ ಪ್ರಭಾವದಿಂದಾಗಿ ತಾವು ದುಡಿಯುವಂತಹ ಕ್ಷೇತ್ರಗಳಲ್ಲಿ ಮಹಿಳೆಯರು ಸಂಘಟಿತರಾದರು. ವಿವಿಧ ಸಮಸ್ಯೆಗಳ ವಿರುದ್ಧ ದನಿಯೆತ್ತುವಂತಾಯಿತು. ಇಷ್ಟಾದರೂ ಸಾಮಾಜಿಕ ಹಾಗೂ ಕೌಟುಂಬಿಕ ವಲಯದಲ್ಲಿ ಮಹಿಳೆಯ ಮೇಲಿನ ದೌರ್ಜನ್ಯ, ಶೋಷಣೆ, ಮೂಢನಂಬಿಕೆ, ವರದಕ್ಷಿಣೆ, ಬಾಲ್ಯವಿವಾಹ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡೇ ಇದ್ದವು. ಹಾಗಾಗಿ ಎರಡನೇ ಹಂತದಲ್ಲಿ ಇವುಗಳ ವಿರುದ್ಧದ ಹೋರಾಟಕ್ಕೆ ಮಹಿಳೆಯರು ಸಂಘಟನೆಗೊಳ್ಳಬೇಕಾಯಿತು. ಪರಿಣಾಮವಾಗಿ ಅನೇಕ ದಲಿತ, ಬಂಡಾಯ, ರೈತಾಪಿ, ಕಾರ್ಮಿಕ ಹೋರಾಟಗಳು ಜರುಗಿದವು. ಇವೆಲ್ಲವುಗಳ ನಡುವೆ ೧೯೭೫ರ 'ಅಂತಾರಾಷ್ಟ್ರೀಯ ಮಹಿಳಾ ದಶಕ' ಘೋಷಣೆಯಾದ ನಂತರ ವಿಶ್ವಸಂಸ್ಥೆಯ ಸೂಚನೆಯ ಮೇರೆಗೆ ಕರ್ನಾಟಕವನ್ನೊಳಗೊಂಡಂತೆ ಮಹಿಳೆಯರ ಸ್ಥಾನಮಾನಗಳ ಅಧ್ಯಯನವನ್ನು ಕೈಗೊಳ್ಳಲಾಯಿತು. ನಮ್ಮ ಭಾರತ ಸರ್ಕಾರ 'ಸಮಾನತೆಯೆಡೆಗೆ'(Towards Equality)ಎಂಬ ಸಮೀಕ್ಷೆಯನ್ನು ಮಂಡಿಸಿತು. ಇದೇ ಸಮಯಕ್ಕೆ ದಲಿತ ಸಂಘರ್ಷ ಸಮಿತಿ, ಬಂಡಾಯ ಸಾಹಿತ್ಯ ಸಂಘಟನೆ, ಮಹಿಳಾ ಸಂಘಟನೆ, ರೈತ ಸಂಘಟನೆ, ಪರಿಸರ ಚಳುವಳಿ, ಸಮಾಜವಾದಿ ಸಂಘಟನೆ, ಕಾರ್ಮಿಕ ಚಳುವಳಿಗಳು ಮುಂಚೂಣಿಗೆ ಬಂದವು. ರಾಜ್ಯಾದ್ಯಂತ ವರದಕ್ಷಿಣೆ, ಅತ್ಯಾಚಾರ, ಮಹಿಳಾ ದೌರ್ಜನ್ಯ, ಬಾಲ್ಯವಿವಾಹ, ಆ್ಯಸಿಡ್ ದಾಳಿ, ಲೈಂಗಿಕ ದೌರ್ಜನ್ಯಗಳ ವಿರುದ್ಧವಾಗಿ ಮಹಿಳಾ ಸಂಘಟನೆಗಳು ದನಿಯೆತ್ತಿದವು.

ಮಹಿಳಾ ವರ್ಷವು ಮಹಿಳಾ ದಶಕವಾಗಿ ವಿಸ್ತರಣೆ ಪಡೆದುಕೊಂಡ ಮೇಲೆ ಮಹಿಳಾ ವಿಷಯಗಳು ಮತ್ತಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡವು. ಕರ್ನಾಟಕದಲ್ಲಿ ಮಹಿಳಾ ದಶಕದ ವೇಳೆಗೆ ಸ್ತ್ರೀವಾದದ ಪ್ರಭಾವವನ್ನು ಗುರುತಿಸಲಾಯಿತು. ಮಹಿಳಾ ಚಿಂತನೆಗಳ ಪ್ರಭಾವದಿಂದ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯರಿಗೆ ಸಮಾನಹಕ್ಕು, ಕೆಲವು ನೇಮಕಾತಿ ಮತ್ತು ಚುನಾವಣೆಗಳಲ್ಲಿ ಮೀಸಲಾತಿ, ಶಿಕ್ಷಣ, ಉದ್ಯೋಗ, ಕೈಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ

ವಿವಿಧ ಸೌಲಭ್ಯಗಳನ್ನು ಕೊಡಮಾಡುವ ಸಂವಿಧಾನಾತ್ಮಕ ಮತ್ತು ಆಡಳಿತಾತ್ಮಕವಾದ ಪರಿವರ್ತನೆಗಳು ಕಂಡುಬಂದವು. ರಾಷ್ಟ್ರಮಟ್ಟದಲ್ಲಿ ಸ್ಥಾಪನೆಯಾದ ವಿವಿಧ ಮಹಿಳಾ ಸಂಘಟನೆಗಳ ರಾಜ್ಯಶಾಖೆಗಳು ಆರಂಭಗೊಂಡವು. 'ಸಮತಾ ವೇದಿಕೆ', 'ವಿಮೋಚನಾ', ವಿಮನ್ಸ್ ವಾಯ್ಸ್', 'ದುಡಿಯುವ ಮಹಿಳೆಯರ ಸಮನ್ವಯ ಸಮಿತಿ', 'ಕರ್ನಾಟಕ ರಾಜ್ಯ ಮಹಿಳಾ ಸಂಘ', 'ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ' ಮುಂತಾದವು ಅಸ್ತಿತ್ವಕ್ಕೆ ಬಂದವು. ಈ ಸಂಘಟನೆಗಳು ಮಹಿಳಾ ಚಳುವಳಿಯ ದನಿಯಾಗಿ ವಿವಿಧ ಪತ್ರಿಕೆಗಳನ್ನು ಮುನ್ನಡೆಸಿದವು. ಸಮಾಜದ ಎಲ್ಲಾ ವರ್ಗದ ಮಹಿಳಾ ವಿಷಯ ಹಾಗೂ ವಿದ್ಯಮಾನಗಳನ್ನು ಗಮನಕ್ಕೆ ತೆಗೆದುಕೊಂಡದ್ದಲ್ಲದೆ ಮಹಿಳೆಯರನ್ನು ಸಂಘಟಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾದವು. ಇದರ ಫಲವಾಗಿ ಮಹಿಳಾ ಮೀಸಲಾತಿ, ಅತ್ಯಾಚಾರ ಪ್ರಕರಣ, ಆ್ಯಸಿಡ್ ದಾಳಿ, ಕೌಟುಂಬಿಕ ಹಾಗೂ ಸಾಮಾಜಿಕ ವಲಯಗಳಲ್ಲಾಗುವ ಲೈಂಗಿಕ ದೌರ್ಜನ್ಯಗಳನ್ನು ಖಂಡಿಸಿ ಹೋರಾಟವನ್ನು ಕೈಗೊಂಡ ಪ್ರಕರಣಗಳು ಕರ್ನಾಟಕದ ಮಹಿಳಾ ಚಳುವಳಿ ಮತ್ತು ಸಂಘಟನೆಗಳ ಶಕ್ತಿ ಹಾಗೂ ವಿಸ್ತಾರತೆಯನ್ನು ನಿರೂಪಿಸುತ್ತವೆ. ಈ ಬಗೆಯ ಮಹಿಳಾ ಚಳುವಳಿಗಳು ಹಾಗೂ ಮಹಿಳಾ ದಶಕದ ಚಿಂತನೆಗಳು ಸಾಹಿತ್ಯ ಮಾಧ್ಯಮದ ಮೂಲಕ ಮತ್ತಷ್ಟು ಪ್ರಬಲಗೊಂಡವು. ಈಗಾಗಲೇ ಹೇಳಿದಂತೆ ಹನ್ನೆರಡನೇ ಶತಮಾನದ ಶಿವಶರಣೆಯರಿಂದ ಆರಂಭವಾಗಿ ಆಧುನಿಕ ಕಾಲಮಾನದ ಹಲವಾರು ಲೇಖಕಿಯರು ಸಾಹಿತ್ಯ ಹಾಗೂ ಸಂಘಟನೆಗಳ ಮೂಲಕ ಹೆಣ್ಣಿನ ಸಂವೇದನೆ, ಸಮಸ್ಯೆ, ಸಮಾನತೆಯ ಬೇಡಿಕೆಗೆ ಸ್ಪಂದಿಸಿದರು. ಹೀಗಾಗಿ ಲೇಖಕಿಯರು ಯಾವ ಮಹಿಳಾ ವಿಷಯಗಳನ್ನು ತಮ್ಮ ಸಾಹಿತ್ಯದಲ್ಲಿ ಪ್ರಧಾನವಾಗಿ ತೆಗೆದುಕೊಂಡರು? ಅಂದು ಅವರ ಸುತ್ತಲಿನ ಸ್ಥಿತಿಗತಿಗಳು ಏನಿದ್ದವು? ಎಂಬುದನ್ನು ತಿಳಿಯಬೇಕಾಗುತ್ತದೆ. ಹಾಗೆಯೇ ಆರಂಭಿಕ ದಿನಮಾನಗಳಿಂದ ಮಹಿಳಾ ದಶಕದವರೆಗೆ ಲೇಖಕಿಯರ ಬರವಣಿಗೆಯಲ್ಲಿ ಸ್ತ್ರೀ ಪರ ಚಿಂತನೆಗಳು ಸಾಗಿ ಬಂದ ಪರಂಪರೆಯ ಜ್ಞಾನ ಮುಂದಿನ ಅಧ್ಯಯನಕ್ಕೆ ಅಗತ್ಯ. ಕಾರಣ ಈ ಮೂಲಕ ಮಹಿಳಾ ದಶಕಕ್ಕೂ ಹಿಂದಿನ ಮತ್ತು ನಂತರದ ಲೇಖಕಿಯರ ಬರವಣಿಗೆಯಲ್ಲಿನ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣದ ನಡುವಿನ ವ್ಯತ್ಯಾಸ-ಸಾಮ್ಯತೆಗಳನ್ನು ಅರಿಯಲು ಸಾಧ್ಯವಾಗುತ್ತದೆ. ಹಾಗಾಗಿ ಮಹಿಳಾ ದಶಕಕ್ಕೂ ಹಿಂದಿನ ಕಾಲಮಾನದ ಆರಂಭಿಕ ಲೇಖಕಿಯರ ಕಥನಪರಂಪರೆ, ಸಾಹಿತ್ಯ ಚಿಂತನೆ ಹಾಗೂ ಅಭಿವ್ಯಕ್ತಿ ಕ್ರಮಗಳ ಸ್ಥೂಲ ನೋಟವನ್ನು ಮುಂದಿನ ಹಂತದಲ್ಲಿ ಹೇಳಲಾಗಿದೆ.

### ೨.೪. ಲೇಖಕಿಯರ ಕಥನಪರಂಪರೆ

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ಬರಹ, ಚಿಂತನೆ, ಅಭಿವ್ಯಕ್ತಿಯಂತಹ ಬೌದ್ಧಿಕ ಪರಿಸರದಿಂದ ಮಹಿಳೆಯನ್ನು ದೂರ ಉಳಿಸುವ ಪ್ರಯತ್ನ ಯಾವತ್ತಿಗೂ ಇದೆ.

ಒಂದು ವೇಳೆ ಇದನ್ನು ಮೀರಿ ಅಂತಹ ಪ್ರಯತ್ನಗಳಾಗಿದ್ದರೂ ಅವಗಣನೆಗೆ ಒಳಗಾದ ಸಂದರ್ಭಗಳು ಹೆಚ್ಚಾಗಿ ಕಾಣಿಸುತ್ತವೆ. ಈ ನಡುವೆಯೂ 'ಮಹಿಳಾ ಅನನ್ಯತೆ'ಯ ಗಟ್ಟಿ ದನಿಯೊಂದು ಗುರುತಿಸಲು ಸಾಧ್ಯವಾಗಿರುವುದು ೧೨ನೇ ಶತಮಾನದ ವಚನ ಚಳುವಳಿಯ ಸಂದರ್ಭದಲ್ಲಿ. "ಸ್ತ್ರೀ ವ್ಯಕ್ತಿತ್ವ ಮತ್ತು ಅಸ್ತಿತ್ವವನ್ನು ಪ್ರಾಪಂಚಿಕ ನೆಲೆಯಲ್ಲಿ ಕನಿಷ್ಠವಾಗಿಸಿ, ಆಧ್ಯಾತ್ಮಿಕವಾಗಿ 'ಮಾಯೆ', 'ರಾಕ್ಷಸಿ' ಎಂದು ಪರಿಗಣಿಸುತ್ತಿದ್ದ ಮಧ್ಯಯುಗದ ಪುರುಷ ಪ್ರಧಾನ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕದ ಶರಣರು ವ್ಯಕ್ತಪಡಿಸಿದ ಲಿಂಗಸಮಾನತೆಯ ಮಾನವೀಯ ಕಾಳಜಿ ವಿಸ್ಮಯಕಾರಿಯಾದ ಬೆಳವಣಿಗೆಯಾಗಿದೆ"[೯] ಎಂದು ಹೇಳುವ ಎಚ್.ಎಸ್. ಶ್ರೀಮತಿ ಅವರ ಮಾತು ಇದಕ್ಕೆ ಸೂಕ್ತ ಸಮರ್ಥನೆಯನ್ನು ಒದಗಿಸುತ್ತದೆ. 'ಮೊಲೆ ಮುಡಿ ಬಂದಡೆ ಹೆಣ್ಣೆಂಬರು, ಮೀಸೆ ಕಾಸೆ ಬಂದಡೆ ಗಂಡೆಂಬರು ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ' ಎಂದು ಲಿಂಗಭೇದವನ್ನು ಖಂಡಿಸಿದ ಜೇಡರ ದಾಸಿಮಯ್ಯ 'ಮಣ್ಣು, ಹೊನ್ನು, ಕಾಮನೆಗಳು ಮಾಯೆಯೇ ಹೊರತು ಹೆಣ್ಣು ಮಾಯೆಯಲ್ಲ' ಎಂದು ಹೇಳಿದ ಅಲ್ಲಮ ಪ್ರಭು, 'ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ' ಎಂದು ಆಕೆಗೆ ಉನ್ನತ ಸ್ಥಾನ ಕಲ್ಪಿಸಿದ ಸಿದ್ಧರಾಮ ಇನ್ನೂ ಅನೇಕ ಶಿವಶರಣರು ಸ್ತ್ರೀಪರ ಕಾಳಜಿ, ಲಿಂಗಸಮಾನತೆಯನ್ನು ವಚನ ಚಳುವಳಿಯ ಆರಂಭದಲ್ಲೇ ವ್ಯಕ್ತಪಡಿಸಿದರು. ಈ ಪ್ರೇರಣೆಯಿಂದಲೇ "ದೈಹಿಕ, ಭೌತಿಕ ಸ್ತರದಲ್ಲೆಂತೋ ಅಂತೆ ಬೌದ್ಧಿಕ ಆಧ್ಯಾತ್ಮಿಕವಾದ ಆಪೇಕ್ಷೆ, ನಂಬಿಕೆ ಇದ್ದರೆ ಅನುಭಾವಿಕವಾದ ಸ್ತರದಲ್ಲಿನ ಸ್ವಾತಂತ್ರವೂ ಮಹಿಳೆಯ ನೈಸರ್ಗಿಕ ಹಕ್ಕು. ಇಂಥ ಒಂದು ವಲಯದ ಸ್ವಾತಂತ್ರ್ಯವನ್ನು ಮಹಿಳೆಯರು ಪಡೆಯುವ ಹಾಗೆ, ಪಡೆದದ್ದು ಸಾಮೂಹಿಕವಾಗಿ ಸ್ವೀಕೃತವಾಗುವ ಹಾಗೆ ಒಂದು ಸಂದರ್ಭವನ್ನು ಈ ಚಳುವಳಿಯ ಸಮಯದಲ್ಲಿ ಅಕ್ಕ ಮತ್ತು ಅಕೆಯ ಸಮಕಾಲೀನರು ಸೃಷ್ಟಿಸಿದರು."[೧೦] ಹಾಗಾಗಿ ಕಾಳವ್ವೆ, ಆಯ್ದಕ್ಕಿ ಲಕ್ಕಮ್ಮ, ಅಮುಗೆರಾಯಮ್ಮ, ಗಂಗಾಂಬಿಕೆ, ಮುಕ್ತಾಯಕ್ಕ, ಸತ್ಯಕ್ಕ ಮುಂತಾದ ೩೫ ಜನ ವಚನಕಾರ್ತಿಯರು ಕನ್ನಡ ಮಹಿಳಾ ಸಾಹಿತ್ಯದ ಮೊದಲಿಗರಾಗಿ ಬರುವಂತಾಯಿತು. ಎಂ.ಆರ್.ಶ್ರೀರವರು ಹೇಳುವಂತೆ ಇವರುಗಳಲ್ಲಿ "ಹೆಣ್ಣಿನ ಗೌರವ ಸಾಧನೆಯ, ಹೆಣ್ಣಿನ ಸ್ವಾತಂತ್ರ್ಯ ಸಾಧನೆಯ, ಹೆಣ್ಣಿನ ಪಾರಮಾರ್ಥ ಸಾಧನೆಯ ಒಂದು ಮಹಾ ಪ್ರಕರಣ"[೧೧]ವಾಗಿ ಕಾಣಿಸಿಕೊಂಡವಳು ಅಕ್ಕಮಹಾದೇವಿ. 'ನಾಮದಲ್ಲಿ ಹೆಂಗೂಸೆಂಬ ಹೆಸರಾದಡೇನು, ಭಾವಿಸಲು ಗಂಡುರೂಪ' ಎಂಬ ದಿಟ್ಟ ವ್ಯಕ್ತಿತ್ವ ಈಕೆಯದು. ಅದರೇನಂತೆ ಚೆನ್ನಮಲ್ಲಿಕಾರ್ಜುನನನ್ನೇ ತನ್ನ ಗಂಡನೆಂದು ನಂಬಿ, ಅಲೌಕಿಕ ಸಮಾಜವನ್ನು ತೊರೆದ ಅಕ್ಕನೂ ಸಹ ವ್ಯವಸ್ಥೆಯ ಟೀಕೆ-ಅಪಮಾನಗಳಿಗೆ ಗುರಿಯಾಗಬೇಕಾಯಿತು. ಇವುಗಳನ್ನು ಧೈರ್ಯವಾಗಿ ಎದುರಿಸಿದ ಅಕ್ಕ ಪುರುಷ ನಿಷ್ಠ ಸಮಾಜ ಹೆಣ್ಣನ್ನು ಕುರಿತಾಗಿ ರೂಪಿಸಿದ

ಪ್ರತಿಮೆಗಳನ್ನು ಮುರಿದಳು. 'ಕಾಮನ ತಲೆಯ ಹೊರೆದು, ಕಾಲನ ಕಣ್ಣ ಕಳೆದು ಸೋಮ ಸೂರ್ಯರ ಪುಡಿಮಾಡಿ ತಿಂಬವಳಿಂಗೆ ನಾಮವನಿಡಬಲ್ಲವರಾರು ಹೇಳಿರೇ?' ಎಂದು ಹೆಣ್ಣನ್ನು ದೇಹ ಕೇಂದ್ರಿತ ನೆಲೆಯಲ್ಲಿ ಭೋಗದ ವಸ್ತುವಾಗಿ ಪರಿಭಾವಿಸುವ ಸಮಾಜಕ್ಕೆ ದಿಟ್ಟ ಉತ್ತರ ನೀಡಿದಳು. ಗಂಡಿನ ಆಸೆ, ಪುರುಷ ರೂಪಿತ ಮೌಲ್ಯಗಳ ನಡುವೆಯೇ ಅಸ್ತಿತ್ವವನ್ನು ಕಂಡುಕೊಳ್ಳಬೇಕಾದ ಕಾಲದಲ್ಲಿ ವ್ಯವಸ್ಥೆಯನ್ನೇ ದಿಕ್ಕರಿಸಿದ ಅಕ್ಕನ ನಡೆಯಲ್ಲಿ ಪ್ರತಿಭಟನೆಯಿದೆ. ಆಕೆಯ ವಚನಗಳಲ್ಲಿ ಮಹಿಳಾ ಪರವಾದ ವಿಚಾರ ಸರಣಿ ಹಾಗೂ ಹೋರಾಟದ ಮನೋ ಭಾವಗಳಿವೆ. ಆದ್ದರಿಂದ ಅಕ್ಕ "ಪತಿಯನ್ನು ನಿರಾಕರಿಸಿ ಅಲೌಕಿಕ ಬದುಕಿಗೆ ಅರ್ಪಿಸಿಕೊಳ್ಳದೇ ಸ್ತ್ರೀಯರ ಸಮಸ್ಯೆಗಳಿಗೆ ಸ್ಪಂದಿಸಿದ್ದ ಪಕ್ಷದಲ್ಲಿ ಕನ್ನಡ ನಾಡಿಗಿರಲಿ ಜಗತ್ತಿಗೇ ಮೊದಲ ಸ್ತ್ರೀವಾದಿ ಯಾಗಿರುತ್ತಿದ್ದಳು"[೧೨] ಎಂಬ ಮಾತು ಒಪ್ಪಿತವಾದುದು.

೧೨ನೇ ಶತಮಾನದ ಸ್ತ್ರೀವಾದಿ ಚಿಂತನೆಗಳು ಮತ್ತೆ ಮುಂದುವರೆದದ್ದು ೧೫ನೇ ಶತಮಾನದ ನಂತರದಲ್ಲಿ. ಕಾರಣ, ಸುಮಾರು ಒಂದೂವರೆ ಶತಮಾನಗಳ ಕಾಲ ಕವಯಿತ್ರಿಯರ ಪರಂಪರೆ ತೆರೆಮರೆಗೆ ಸರಿದಿತ್ತು. ಅಕ್ಕಮಹಾದೇವಿಯ ನಂತರ ಆಕೆಯಷ್ಟು ಕ್ರಾಂತಿಕಾರಕ ವಿಚಾರಗಳಿಂದಲ್ಲದಿದ್ದರೂ ಸಂಪ್ರದಾಯಿಕ ಚಿಂತನೆಗಳ ನಡುವೆಯೇ ಲಿಂಗ ಸಮಾನತೆಯ ಪರ ದನಿಯಾದವರು ೧೭ನೇ ಶತಮಾನದ ಸಂಚಿ ಹೊನ್ನಮ್ಮ. ತನ್ನ 'ಹದಿಬದೆಯ ಧರ್ಮ' ಕೃತಿಯಲ್ಲಿ "ಪತಿಯೇ ಪರಮಗುರು, ಪತಿಯೇ ದೇವತೆ" ಎಂದು ಮಹಿಳೆಯ ಬದುಕನ್ನು ಪುರುಷ ನೆಲೆಯಿಂದ ವಿವರಿಸುತ್ತಾಳೆ. ಆದರೂ "ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ಹೆಣ್ಣಿನ ಕುರಿತಾದ ತಿರಸ್ಕಾರ ಮನೋಭಾವವನ್ನು ವಿರೋಧಿಸುತ್ತಾಳೆ. ಇನ್ನುಳಿದಂತೆ ಶೃಂಗಾರಮ್ಮ, ಚೆಲುವಾಂಬೆ, ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಹೀಗೆ ೪೦ಕ್ಕೂ ಹೆಚ್ಚು ಮಹಿಳಾ ಕವಯಿತ್ರಿಯರನ್ನು ೧೫ ರಿಂದ ೧೮ನೇ ಶತಮಾನದ ಅವಧಿಯವರೆಗೆ ಹೆಸರಿಸಬಹುದಾಗಿದೆ. ಇದಾದ ನಂತರ ಆಧುನಿಕ ಸಂದರ್ಭಕ್ಕೆ ಮಹಿಳಾ ಸಾಹಿತ್ಯ ಪರಂಪರೆಯನ್ನು ಗುರುತಿಸುವುದು ತಿರುಮಲಾಂಬರವರಿಂದ. ಆದ್ದರಿಂದಲೇ ಪ್ರಸ್ತುತ ಮಹಾಪ್ರಬಂಧದಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಪ್ರಾರಂಭದಲ್ಲಿದ್ದ ಲೇಖಕಿಯರ ಕಥಾ ಪರಂಪರೆಯ ವಿಭಾಗೀಕರಣ, ವಿಶ್ಲೇಷಣೆಯನ್ನು ತಿರುಮಲಾಂಬರವರಿಂದಲೇ ಆರಂಭಿಸಲಾಗಿದೆ.

ಆಧುನಿಕ ಸಾಹಿತ್ಯವೂ ೧೨ರಿಂದ ೧೮ನೇ ಶತಮಾನದ ಸನ್ನಿವೇಶಗಳಿಂದ ಹೊರತಾಗಿರಲಿಲ್ಲ. ಇಲ್ಲಿಯೂ ಮಹಿಳೆ ಮತ್ತು ಆಕೆಯ ಬರಹ, ಅಭಿವ್ಯಕ್ತಿಯಂತಹ ಚಟುವಟಿಕೆಗಳು ಹಗುರವೆಂಬಂತೆ ಪರಿಗಣನೆಯಾಗಿದ್ದವು. 'ಅಡುಗೆ ಮನೆ ಸಾಹಿತ್ಯ'ವೆಂದು ಅಲ್ಲಗಳೆಯಲಾಗಿತ್ತು. ಹೀಗಿರುವಾಗಲೂ ಆಧುನಿಕ ಕನ್ನಡ ಸಾಹಿತ್ಯದ ಆರಂಭದಲ್ಲಿ ಹಲವಾರು ಜನ ಲೇಖಕಿಯರು ಸ್ತ್ರೀಪರ ಚಿಂತನೆಗಳನ್ನು ತಮ್ಮ ಬರಹಗಳಲ್ಲಿ ಪ್ರಚುರಪಡಿಸಿದರು.

ಪ್ರಸ್ತುತ ಮಹಾಪ್ರಬಂಧದ ವ್ಯಾಪ್ತಿ ಮಹಿಳಾ ದಶಕದ(೧೯೭೫-೮೫) ಲೇಖಕಿಯರ ಕಥಾ ಸಾಹಿತ್ಯಕ್ಕೆ ಸೀಮಿತವಾದರೂ ನಡುಗನ್ನಡ ಕಾಲದ ಸಂಕ್ಷಿಪ್ತ ಹಿನ್ನೆಲೆ ಹಾಗೂ ಆಧುನಿಕ ಕನ್ನಡ ಸಾಹಿತ್ಯದ ಲೇಖಕಿಯರ ಪರಂಪರೆಯನ್ನು ವಿವರಿಸಿಕೊಳ್ಳಲಾಗಿದೆ. ಕಾರಣ, ಬದಲಾದ ಕಾಲಘಟ್ಟಗಳಲ್ಲಿ ಲೇಖಕಿಯರ ಬರವಣಿಗೆ, ವಸ್ತು, ವಿಷಯಗಳ ಹಿನ್ನೋಟ ಗಮನಿಸುವುದಾಗಿದೆ. ಅಲ್ಲದೆ ಆಯಾ ಕಾಲಮಾನದಲ್ಲಿ ಜರುಗಿದ ವಿದ್ಯಮಾನಗಳು, ಸನ್ನಿವೇಶಗಳು ತನ್ನ ಸುತ್ತಲಿನ ಕ್ಷೇತ್ರಗಳನ್ನು ಪ್ರಭಾವಿಸುವುದು ಸಹಜ ವಿಚಾರ. ಸಾಹಿತ್ಯ ವಲಯವೂ ಸಹ ಕಾಲಕಾಲಕ್ಕೆ ಅರಿತೋ ಅರಿಯದೆಯೋ ತನ್ನೊಳಗೆ ಇಂತಹ ಪ್ರಭಾವಗಳನ್ನು ಅಳವಡಿಸಿಕೊಳ್ಳುತ್ತಾ ಬೆಳೆಯುತ್ತಿರುತ್ತದೆ. ಹಾಗಾಗಿ ಆಧುನಿಕ ಕನ್ನಡದ ಲೇಖಕಿಯರಿಂದ ಆರಂಭಿಸಿ, ಮಹಿಳಾ ದಶಕದವರೆಗಿನ ಲೇಖಕಿಯರ ಬರಹದ ಸ್ವರೂಪ, ಧೋರಣೆ, ಮನಸ್ಥಿತಿ, ಪ್ರೇರಣೆ, ಪ್ರಭಾವಗಳ ಅಂತರ್‌ಸಂಬಂಧವನ್ನು ಗುರುತಿಸುವುದಾಗಿದೆ. ಇದರೊಂದಿಗೆ ಮಹಿಳಾ ಚಿಂತನೆಗಳು ವಿವಿಧ ಕಾಲಮಾನದ ಲೇಖಕಿಯರ ಬರವಣಿಗೆಗಳಲ್ಲಿ ಬೆಳೆದುಬಂದ ಬಗೆಯನ್ನು ವಿಶ್ಲೇಷಿಸಲಾಗುತ್ತದೆ. ಈ ಹಿನ್ನೆಲೆಯಾಗಿ ಆಧುನಿಕ ಲೇಖಕಿಯರ ಕಥಾಪರಂಪರೆಯನ್ನು ಮೂರು ಕ್ರಮಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ.

೧. ಮಹಿಳಾ ಹಕ್ಕುಗಳ ಅಹವಾಲು ಕ್ರಮ

೨. ಮಹಿಳಾ ಚಿಂತನೆಗಳ ಪ್ರತಿಭಟನೆಯ ಕ್ರಮ

೩. ಮಹಿಳಾ ಚಿಂತನೆಗಳ ಪರ್ಯಾಯ ಕ್ರಮ

ಮೇಲಿನ ಮೂರು ಹಂತಗಳ ವಿಶ್ಲೇಷಣೆಯಲ್ಲಿ ಕಥಾ ಸಾಹಿತ್ಯವನ್ನೇ ಪರಿಗಣಿಸಲಾಗಿದೆ. ಕಾರಣ, ಮಾಧ್ಯಮ ಮತ್ತು ಅಭಿವ್ಯಕ್ತಿ ಸೌಲಭ್ಯದಿಂದಾಗಿ ಆರಂಭದಿಂದಲೂ ಲೇಖಕಿಯರ ಆಸಕ್ತಿ ಕಥಾಸಾಹಿತ್ಯದಲ್ಲಿಯೇ ಹೆಚ್ಚು ಕೇಂದ್ರೀಕೃತವಾಗಿರುವುದು ಕಂಡುಬರುತ್ತದೆ. ಈ ಕುರಿತಾಗಿ "ಬಹಳ ಹಿಂದೆಯೇ ಸಿಮೋನ್‌ದ ಬೋವಾ ಮಹಿಳೆಯ ಸೃಜನಶೀಲತೆಯ ಅಭಿವ್ಯಕ್ತಿ ನಿರ್ಬಂಧಿತ ಸಾಂಸ್ಕೃತಿಕ ಪರಿಸರದಲ್ಲಿ ತನ್ನ ಬಿಂಬವನ್ನೇ ಮೋಹಿಸಿಕೊಳ್ಳುವ, ಆ ಮೂಲಕ ಕಾಲ್ಪನಿಕ ಜಗತ್ತನ್ನು ಸೃಷ್ಟಿಸುವ ಕಡೆ ಓಲುತ್ತದೆ ಎಂಬುದನ್ನು ಚರ್ಚಿಸುತ್ತಾರೆ. ತಮ್ಮ ಕನಸುಗಳನ್ನು ತಾವು ಸೃಷ್ಟಿಸಿದ ಪಾತ್ರಗಳಲ್ಲಿ ತುಂಬುತ್ತ ಆ ಬಿಂಬಗಳನ್ನು ಮೋಹಿಸಿ, ಅವುಗಳೊಂದಿಗೆ ಭಾವನಾತ್ಮಕ ತಲ್ಲೀನತೆ, ತೀವ್ರತೆ ಸಾಧಿಸುವುದಕ್ಕೆ ಮಹಿಳೆಯರಿಗೆ ಕಥಾ ಸಾಹಿತ್ಯ ಹೆಚ್ಚು ಸುಲಭವಾಗಿ ಒಗ್ಗುವ ಮಾಧ್ಯಮ ಎಂದು ಸೂಚಿಸುತ್ತಾರೆ."[೧೩] ಈ ಮಾತು ಅಂದಿನ ಲೇಖಕಿಯರು ಕಥೆಗಳನ್ನೇ ಮುಖ್ಯ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಸ್ವೀಕರಿಸಿದ್ದೇಕೆ ಎಂಬ ಪ್ರಶ್ನೆಗೆ ಸಮರ್ಥ ಕಾರಣವನ್ನು ಒದಗಿಸುತ್ತದೆ.

## ೨.೪.೧. ಮಹಿಳಾ ಹಕ್ಕುಗಳ ಅಹವಾಲು ಕ್ರಮ

ಮಹಿಳಾ ಹಕ್ಕುಗಳ ಅಹವಾಲು ಕ್ರಮದ ಕಾಲವನ್ನು ೧೯೧೦ರಲ್ಲಿ ಬರವಣಿಗೆಯನ್ನು ಆರಂಭಿಸಿದ ತಿರುಮಲಾಂಬರವರಿಂದ ೧೯೫೦ರ ವರೆಗಿನ ಲೇಖಕಿಯರವರೆಗೆ ಗುರುತಿಸಿ ಕೊಳ್ಳಲಾಗಿದೆ. ಕಾರಣ ಸಾಹಿತ್ಯದ ವಿಭಿನ್ನ ವಸ್ತು, ಸಂವೇದನೆ, ಶೈಲಿಗಳ ಮೂಲಕ ತನ್ನದೇ ಆದ ಚಹರೆಯನ್ನು ಕಟ್ಟಿಕೊಟ್ಟವರು ತಿರುಮಲಾಂಬರವರು. ಅಲ್ಲದೆ ಆಧುನಿಕ ಕನ್ನಡ ಮಹಿಳಾ ಸಾಹಿತ್ಯವು ರೂಪುಗೊಳ್ಳುತ್ತಿದ್ದ ಹಂತ ಇದಾಗಿತ್ತು. ಸ್ತ್ರೀಪರ ಕಾಳಜಿ, ಸ್ವ ಅಭಿವ್ಯಕ್ತಿ, ಸ್ತ್ರೀತನದ ಅನ್ವೇಷಣೆಯಂತಹ ವಿಚಾರಗಳು ಇವರ ಬರವಣಿಗೆಯಲ್ಲಿ ಕಂಡುಬಂದವು. ಮುಂದುವರಿದಂತೆ, ಪಿತೃಪ್ರಧಾನತೆಯನ್ನು ಪ್ರಶ್ನಿಸುವಲ್ಲಿ, ಸ್ತ್ರೀ ವಿರೋಧಿ ಮೌಲ್ಯ ವ್ಯವಸ್ಥೆಯನ್ನು ನಿರಾಕರಿಸುವಲ್ಲಿ ವಿಕಾಸ ಪಡೆದುಕೊಂಡವು. ಈ ಕಾರಣದಿಂದಲೇ ಪ್ರಸ್ತುತ ಅವಧಿಯನ್ನು ಮಹಿಳಾ ಚಿಂತನೆಗಳ ಅರುಣೋದಯ ಕಾಲ ಎಂದು ಸಹ ಹೇಳಲಾಗಿದೆ. ಆರಂಭದಲ್ಲಿ ಸ್ತ್ರೀ ಅನನ್ಯತೆಯ ಪರಿಪೂರ್ಣ ಮಾದರಿಯನ್ನು ನಿರೀಕ್ಷಿಸಲಾಗದಿದ್ದರೂ ಹೆಣ್ಣಿನ ಪರವಾದ ಪ್ರಗತಿಪರ ದನಿಯನ್ನು ಕಾಣಬಹುದಾಗಿದೆ. ವಿಶೇಷವೆಂದರೆ, ಆರಂಭದಲ್ಲಿ ಬಂದ ಲೇಖಕಿಯರು ತಮ್ಮ ಬರವಣಿಗೆ ಮತ್ತು ಅಭಿವ್ಯಕ್ತಿಗಾಗಿ ಹಲವಾರು ತೊಡಕುಗಳನ್ನು ಎದುರಿಸಬೇಕಾಯಿತು. ಮಹಿಳೆಯರಿಗೆ ವಿದ್ಯಾಭ್ಯಾಸವೂ ಕಷ್ಟ ಸಾಧ್ಯವಾದ ಕಾಲ ಅದಾಗಿತ್ತು. ಹೆಣ್ಣೆಂದರೆ ಮನೆ, ಮದುವೆ, ಸಂಸಾರ ಎಂದು ಆಲೋಚಿಸುವ ಕಾಲದಲ್ಲಿ ಹಲವಾರು ಲೇಖಕಿಯರ ಬರವಣಿಗೆ ಸವಾಲಿನದಾಗಿತ್ತು. ಉದಾಹರಣೆಗೆ ವಾಸಂತೀಬಾಯಿ ಪಡುಕೋಣೆ, ಲಲಿತಾ ರೈ, ಸರಸ್ವತಿ ಬಾಯಿ ರಾಜವಾಡೆ, ಬೆಳಗೆರೆ ಜಾನಕಮ್ಮ ಮುಂತಾದ ಕೆಲವು ಲೇಖಕಿಯರು ಸಾಂಸಾರಿಕ ತಾಪತ್ರಯ, ಕುಟುಂಬದ ಅಸಹಕಾರ, ಕಷ್ಟದ ಜೀವನ ನಿರ್ವಹಣೆ, ಸಂಪ್ರದಾಯಿಕ ಕಟ್ಟುಪಾಡುಗಳಂತಹ ಪ್ರತಿಕೂಲದ ನಡುವೆಯೇ ಬರೆದದ್ದು ನಿಜಕ್ಕೂ ಒಂದು ಸಾಧನೆಯೇ ಸರಿ.

ಇದಕ್ಕೆ ಅಪವಾದವಾಗಿ ತಿರುಮಲಾಂಬ, ಚಂದ್ರಭಾಗಿ ಕೆ. ರೈ, ಕಲ್ಯಾಣಮ್ಮ, ಶಾಂತಾಬಾಯಿ ನೀಲಗಾರ, ತಿರುಮಲೆ ರಾಜಮ್ಮ, ಕೊಡಗಿನ ಗೌರಮ್ಮ ಮುಂತಾದವರು ಮನೆಯವರ ಸಹಕಾರ, ರಾಷ್ಟ್ರೀಯ ಆಂದೋಲನಗಳ ಹಿನ್ನೆಲೆ, ಉತ್ತಮ ವಿದ್ಯಾಭ್ಯಾಸದ ಅವಕಾಶದಂತಹ ಸನ್ನಿವೇಶದಲ್ಲಿ ಬರೆದದ್ದೂ ಇದೆ. ಈ ಕಾಲಮಾನದ ಲೇಖಕಿಯರಲ್ಲಿ ಅಲ್ಪಸ್ವಲ್ಪ ವಿದ್ಯೆ ಕಲಿತು ವೈಧವ್ಯದ ಖಾಲಿತನವನ್ನು ಮರೆಯಲು ಬರವಣಿಗೆಯಲ್ಲಿ ತೊಡಗಿಸಿಕೊಂಡವರೇ ಹೆಚ್ಚು. ಒಂದೆಡೆ ಧಾರ್ಮಿಕ ಕಟ್ಟುಪಾಡುಗಳು, ಮತ್ತೊಂದೆಡೆ ರಾಷ್ಟ್ರೀಯ ಚಳುವಳಿಗೆ ನಿಷ್ಠವಾಗಿದ್ದ ಕಾಲ ಅದಾಗಿತ್ತು.

ಧಾರ್ಮಿಕ ಭಕ್ತಿಕಾವ್ಯಗಳೊಂದಿಗೆ ಸ್ತ್ರೀ ಶಿಕ್ಷಣ, ಸ್ತ್ರೀಯರ ಉನ್ನತಿ ಬಗೆಗಿನ ವಸ್ತು, ವಿಷಯಗಳನ್ನು ಲೇಖಕಿಯರು ತಮ್ಮ ಕಥೆಗಳಲ್ಲಿ ಅಭಿವ್ಯಕ್ತಿಗೊಳಿಸಿದರು. "ಮನೆಯಲ್ಲಿನ ಧಾರ್ಮಿಕ ವಾತಾವರಣವನ್ನು ತಮ್ಮ ಸ್ಫೂರ್ತಿ ಸೆಲೆಯಾಗಿ ಸ್ವೀಕರಿಸಿದ್ದಾಗ ಭಗವಂತನ ನಾಮ ಸಂಕೀರ್ತನೆ ಮಾಡುವ ಭಕ್ತಿ ಕಾವ್ಯವನ್ನು ಬರೆದರು. ಹೊರ ಸಮಾಜದಲ್ಲಿ ನಡೆಯುತ್ತಿದ್ದ ಸುಧಾರಣಾವಾದಿ ಚಳುವಳಿ(ರಾಷ್ಟ್ರೀಯ ಚಳುವಳಿಯ ಭಾಗವಾಗಿ)ಯಿಂದ ಸ್ಫೂರ್ತಿ ಪಡೆದಾಗ ಸ್ತ್ರೀ ಶಿಕ್ಷಣ, ಸ್ತ್ರೀ ಕಲ್ಯಾಣವನ್ನು ತಮ್ಮ ವಸ್ತುವಾಗಿ ಸ್ವೀಕರಿಸಿದರು. ಕೆಲವೊಮ್ಮೆ ಇವೆರಡನ್ನುಳಿದ ಬದುಕಿನ ದುಃಖ ದುಮ್ಮಾನಗಳನ್ನು ಹೊರ ಚೆಲ್ಲುವ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಸಾಹಿತ್ಯವನ್ನು ಕಂಡಾಗ ಆತ್ಮಕಥೆಯನ್ನು ಬರೆದರು"[೧೪] ಎಂದು ಎಲ್.ಜಿ.ಮೀರಾರವರು ಈ ಕಾಲದ ಲೇಖಕಿಯರು ಬರೆಯಲು ಕಾರಣವಾದ ಸನ್ನಿವೇಶ, ವಸ್ತು, ವಿಷಯಗಳ ಕುರಿತಾಗಿ ಅಭಿಪ್ರಾಯಪಡುತ್ತಾರೆ. ಹಾಗೆಯೇ ಮತ್ತೋರ್ವ ವಿಮರ್ಶಕರಾದ ಕೇಶವಶರ್ಮರವರು ಇದೇ ವಿಚಾರವಾಗಿ ಈ ಕಾಲದ "ಬರಹಗಾರ್ತಿಯರಲ್ಲಿ ಅನನ್ಯತೆಯು ಸಾಂಸ್ಕೃತಿಕ ಸಂದರ್ಭಗಳಿಂದ ಪ್ರೇರಿತವಾಗಿದೆ. ಹೊಸಗನ್ನಡ ಸಾಹಿತ್ಯದ ಸಂದರ್ಭವು ತಳೆದ ನೈತಿಕ ನಿಲುವು, ಸಂಕೀರ್ಣತೆಯನ್ನು ಗೆಲ್ಲುವ ಹಠ ಈ ಬರಹಗಾರ್ತಿಯರನ್ನು ಒಳಗೊಂಡಿದೆ. ಆದರೆ ಈ ಅಂಶಗಳಿಂದಷ್ಟೇ ಮೊದಲ ಹೊತ್ತಿನ ಬರಹಗಾರ್ತಿಯರನ್ನು ನಿರ್ಣಯಿಸುವಂತಿಲ್ಲ. ಒಂದು ದೃಷ್ಟಿಯಿಂದ, ಈ ಬರಹಗಾರ್ತಿಯರು ಎದುರಿಸಿದ ಮಾನಸಿಕ ಲೋಕದ ಸಿದ್ಧತೆಯು ಬೇರೆ ಬಗೆಯದು. ಸ್ತ್ರೀತ್ವದ ಅನನ್ಯತೆಯು ಸಾಂಸ್ಕೃತಿಕ ಲೋಕದ ಬದ್ಧತೆಯಲ್ಲಿ ರೂಪುಗೊಂಡಿರುವ ರಿಕ್ತವಾದ ಸ್ಥಿತಿಯದು"[೧೫] ಎಂದು ಹೇಳುವ ಮಾತು ಸಹ ಒಪ್ಪಿತವಾದುದು.

ಮೇಲಿನ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಸಂದರ್ಭದ ಲೇಖಕಿಯರ ಕಥೆ–ಕಾದಂಬರಿಗಳಲ್ಲಿ ಮುನ್ನೆಲೆಗೆ ಬಂದ, ಪ್ರಮುಖ ಮಹಿಳಾ ಸಮಸ್ಯೆ, ಕಾಳಜಿ, ಚಿಂತನೆ, ವಿಶೇಷ ಸಾಧನೆಗಳನ್ನು ಕೆಲವು ಪ್ರಮುಖ ಅಂಶಗಳಲ್ಲಿ ವರ್ಗೀಕರಿಸಿ ಮೊದಲ ಹಂತದ ಕಥಾ ಪರಂಪರೆಯನ್ನು ವಿಶ್ಲೇಷಿಸಲಾಗಿದೆ.

**೧. ಬಾಲ್ಯವಿವಾಹ ಮತ್ತು ವೈಧವ್ಯ:** ಬರವಣಿಗೆಯನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಈ ಕಾಲದ ಲೇಖಕಿಯರು ಬಳಸಿಕೊಂಡರು. ಬಾಲ್ಯವಿವಾಹ ಮತ್ತು ವೈಧವ್ಯದಂತಹ ಪ್ರಮುಖ ವಿಚಾರಗಳನ್ನು ಮುಂಚೂಣಿಗೆ ತಂದರು. ತಿರುಮಲಾಂಬ, ಬೆಳಗೆರೆ ಜಾನಕಮ್ಮ, ವಾಸಂತಿಬಾಯಿ ಪಡುಕೋಣೆ, ಲೀಲಾಬಾಯಿ ಕಾಮತ್, ಸರಸ್ವತಿಬಾಯಿ ರಾಜವಾಡೆಯಂತಹ ಲೇಖಕಿಯರು ಸ್ವತಃ ಈ ಕಷ್ಟಗಳನ್ನು ಅನುಭವಿಸಿದವರಾಗಿದ್ದರೆಂಬುದು ಗಮನಿಸುವ ವಿಚಾರವಾಗಿದೆ.

ತಿರುಮಲಾಂಬರವರ 'ನಭಾ', 'ವಿರಾಗಿಣಿ', 'ವೇಣಿಸಂಹಾರ' ಕಾದಂಬರಿಗಳು, ಕೊಡಗಿನ ಗೌರಮ್ಮನವರ 'ವಾಣಿಯ ಸಮಸ್ಯೆ', 'ಪುನರ್ವಿವಾಹ', 'ಅಪರಾಧಿ ಯಾರು?', 'ಒಂದು ಪುಟ್ಟ ಚಿತ್ರ', ಎಚ್.ವಿ.ಸಾವಿತ್ರಮ್ಮನವವರ 'ಮಾಯದ ನೆನಪು', ಚಂದ್ರಭಾಗಿ ರೈ ಅವರ 'ಮಂಗಳ ಅಮಂಗಳ' ಮುಂತಾದ ಕಥೆ-ಕಾದಂಬರಿಗಳು ವಿಧವೆಯರ ಮಾನಸಿಕ ತಲ್ಲಣ, ಒಂಟಿತನ, ಮನುಷ್ಯ ಸಹಜ ಪ್ರೀತಿಯ ಸೆಳೆತವನ್ನು ನಿರೂಪಿಸುತ್ತವೆ. ವೈಧವ್ಯದ ಭಾಗವಾಗಿ ಸ್ತ್ರೀಯರು ಅನುಭವಿಸುತ್ತಿದ್ದ ಕೇಶಮುಂಡನದಂತಹ ದುಸ್ಥಿತಿಗಳೂ ಇಲ್ಲಿ ಚಿತ್ರಣಗೊಂಡಿವೆ. ವೈಧವ್ಯಕ್ಕೆ ಸಂಬಂಧಿಸಿದಂತೆ ಕೆಲವು ಲೇಖಕಿಯರು ವಿಧವಾ ವಿವಾಹವನ್ನು ಪ್ರೋತ್ಸಾಹಿಸುವ ಮೂಲಕ ಹೊಸ ವ್ಯವಸ್ಥೆಯ ನಿರ್ಮಾಣವಾಗಬೇಕೆಂಬುದನ್ನು ಬಯಸುತ್ತಾರೆ. ಆದರೆ ಹಲವಾರು ಕಡೆ ಅದೇ ಸಂಪ್ರದಾಯಿಕ ಮೌಲ್ಯಗಳೊಂದಿಗೆ ಪಾತ್ರಗಳು ರಾಜಿಯಾಗುವ, ದುರಂತ ಕಾಣುವ ಸನ್ನಿವೇಶಗಳು ಸಹ ಕಾಣಸಿಗುತ್ತವೆ. ಇದರ ಹೊರತಾಗಿಯೂ ವಿಧವಾ ವಿವಾಹವನ್ನು ಪುರಸ್ಕರಿಸಿದವರಲ್ಲಿ ಪ್ರಮುಖರಾದ ಕಲ್ಯಾಣಮ್ಮನವರು ತಮ್ಮ 'ಪುನರ್ವಿವಾಹ' ಕೃತಿಯ ಮೂಲಕ ಭಿನ್ನವಾಗಿ ನಿಲ್ಲುತ್ತಾರೆ. ಈ ಕಾರಣದಿಂದ "ಹೆಣ್ಣಿನ ಕಣ್ಣುಗಳಿಂದ ಬದುಕನ್ನು ಕಾಣುವ, ಅರ್ಥೈಸುವ ಗೌರಮ್ಮನವರು ಸ್ತ್ರೀಪರ ಚಿಂತನೆಯನ್ನು ಪುರುಷ ದ್ವೇಷದ ನೆಲೆಯಾಗಿಸದೆ ಸಮಾಜ-ಸಂಸ್ಕೃತಿ, ವಿಮರ್ಶೆ-ಪರಾಮರ್ಶೆಯ ಗಂಭೀರ ರಚನಾತ್ಮಕ ವಿಧಾನವಾಗಿರಿಸಿಕೊಂಡಿರುವ ಕಥೆಗಾರ್ತಿಯಾಗಿ ನೆನಪಿನಲ್ಲುಳಿಯುತ್ತಾರೆ."[೧೬] ಎಂದು ಗೌರಮ್ಮನವರ ಕುರಿತಾದ ಶಾಂತಾ ಇಮ್ರಾಪುರ ಅವರ ಈ ಅಭಿಪ್ರಾಯವು ವಸ್ತುನಿಷ್ಠವಾಗಿದ್ದು, ಯಾವುದೇ ಉತ್ಪ್ರೇಕ್ಷೆ ಕಾಣುವುದಿಲ್ಲ. ಇದು ಗೌರಮ್ಮನವರ ಸಾಧನೆಗೆ ಸಂದ ಗೌರವಾಗಿದೆ. ಕಾರಣ, ಹಲವಾರು ಲೇಖಕಿಯರು ಸಂಪ್ರದಾಯಿಕ ಮೌಲ್ಯಗಳನ್ನು ವಿರೋಧಿಸುವ, 'ವಿಧವಾ ವಿವಾಹ'ವನ್ನು ಬೆಂಬಲಿಸುವ ಅಂಶಗಳನ್ನು ಸಕಾರಾತ್ಮಕ ಚಿಂತನೆಗಳಾಗಿ ಮಾತ್ರ ಪಾತ್ರಗಳ ಮೂಲಕ ಬಿಂಬಿಸುತ್ತಾರೆ. ಆದರೆ ಈ ಬಗ್ಗೆ ಬದಲಾವಣೆಗಾಗಿ ಯಾವುದೇ ಪ್ರಬಲ ಒತ್ತಾಯವನ್ನು ವ್ಯವಸ್ಥೆಗೆ ವಿರೋಧವಾಗಿ ಹೇರುವುದಿಲ್ಲ. ಇದಕ್ಕೆ ಕಾರಣವೇನೆಂಬುದನ್ನು ಬಿ.ಎನ್.ಸುಮಿತ್ರಾಬಾಯಿಯವರು ಹೀಗೆ ಹೇಳುತ್ತಾರೆ. ಲೇಖಕಿಯರಿಗೆ "ಸಾಮಾಜಿಕ ಅನುಮೋದನೆಯ ಕೊರತೆ ಒಂದೆಡೆಯಾದರೆ, ಅದನ್ನು ನಿರ್ಲಕ್ಷಿಸಿಯೂ ಬರೆಯಬಲ್ಲ ಧೈರ್ಯದ ಅಭಾವ ಇನ್ನೊಂದು ಕಡೆ ಅವರ ಬರಹಗಳ ವಸ್ತುಗಳ ಆಯ್ಕೆಯನ್ನು ನಿಯಂತ್ರಿಸುತ್ತಿರುತ್ತದೆ."[೧೭] ಹಾಗಾಗಿ ಅಂದಿನ ಸಾಮಾಜಿಕ ಕಟ್ಟುಪಾಡುಗಳ ನಡುವೆ ವ್ಯವಸ್ಥೆಯನ್ನು ವಿರೋಧಿಸಿ ಬರೆಯುವ ಕೆಲಸ ಲೇಖಕಿಯರಿಗೆ ಸವಾಲಿನ ಸಂಗತಿಯಾಗಿತ್ತು ಎಂಬುದನ್ನು ಈ ಮಾತುಗಳು ಅರ್ಥೈಸುತ್ತವೆ.

**೨. ಸ್ತ್ರೀಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆ:** ರಾಷ್ಟ್ರೀಯ ಚಳುವಳಿಗಳು ಮತ್ತು ಸುಧಾರಣಾ ಚಳುವಳಿಗಳ ಭಾಗವಾಗಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಲಾಗಿತ್ತು. ಆದರೂ ಸಹ

ಸಂಪ್ರದಾಯಿಕ ಮನಸ್ಸುಗಳು ಪೂರ್ಣ ಪ್ರಮಾಣದಲ್ಲಿ ಬೆಂಬಲ ನೀಡಲು ಒಪ್ಪದಿದ್ದ ಕಾಲ ಅದಾಗಿತ್ತು. ಬರವಣಿಗೆಯಲ್ಲಿ ತೊಡಗಿಸಿಕೊಂಡ ಅನೇಕ ಲೇಖಕಿಯರೇ ಇಂತಹದೊಂದು ಸಮಸ್ಯೆಯನ್ನು ಆ ಕಾಲಕ್ಕೆ ಎದುರಿಸಿದ್ದೂ ಇದೆ. ಹಾಗಾಗಿ ಶಾಂತಾಬಾಯಿ ನೀಲಗಾರರ 'ಸದ್ಗುಣಿ ಕೃಷ್ಣಾಬಾಯಿ', ತಿರುಮಲಾಂಬರವರ 'ಸುಶೀಲೆ', ಕಲ್ಯಾಣಮ್ಮನವರ 'ಸತೀ ಪದ್ಮಿನಿ', 'ಮಾಧವಿ', 'ನಿರ್ಮಲಾ'ದಂತಹ ಕಾದಂಬರಿಗಳಲ್ಲಿ ಮಹಿಳೆಯರ ವಿದ್ಯಾಭ್ಯಾಸ ಹಾಗೂ ಆರ್ಥಿಕ ಸ್ವಾವಲಂಬನೆಯ ಒತ್ತಾಸೆಯನ್ನು ಕುರಿತು ಹೇಳಲಾಗಿದೆ. ಕಾರಣ ಮಹಿಳೆಯರು ಆರ್ಥಿಕವಾಗಿ ಸ್ವತಂತ್ರರಾದರೆ ಅವರ ಸಮಸ್ಯೆ ಅಲ್ಪವಾದರೂ ಬಗೆಹರಿಯಬಹುದು ಎಂಬ ವಿಚಾರ ಲೇಖಕಿಯರದಾಗಿತ್ತು. ಆದರೆ, ಸ್ತ್ರೀಯರು ವಿದ್ಯಾವಂತರಾದರೆ ಸಾಂಪ್ರದಾಯಿಕ ಆಚರಣೆಗಳ ವಿರೋಧಿಯಾಗಲಾರರು ಎಂಬ ಸಮರ್ಥನೆಯಲ್ಲಿಯೇ ಬರೆಯಬೇಕಾದ ಅನಿವಾರ್ಯತೆ ಕೂಡ ಕೆಲವು ಲೇಖಕಿಯರಿಗೆ ಎದುರಾಯಿತು ಎಂಬುದನ್ನು ನಿರಾಕರಿಸುವಂತಿಲ್ಲ. ಇಂತಹ ಪ್ರತಿಕೂಲ ಸಾಮಾಜಿಕ ಸನ್ನಿವೇಶದ ನಡುವೆಯೂ ಸ್ತ್ರೀಯರ ವಿದ್ಯಾಭ್ಯಾಸದಂತಹ ಪ್ರಗತಿಪರ ವಿಚಾರಗಳನ್ನು ಪ್ರಚುರಪಡಿಸಿದ ಈ ಲೇಖಕಿಯರ ಪ್ರಯತ್ನ ಮೆಚ್ಚುವಂತಹದು.

**೩. ವರದಕ್ಷಿಣೆ ಮತ್ತು ಪ್ರೇಮವಿವಾಹ:** ಪ್ರಸ್ತುತ ಕಾಲದಲ್ಲಿ ವರದಕ್ಷಿಣೆ ಸಾಮಾಜಿಕವಾಗಿ ಒಪ್ಪಿತ ಪದ್ಧತಿಯಾಗಿ ಆಚರಣೆಯಲ್ಲಿದ್ದರೆ, ಪ್ರೇಮವಿವಾಹ ಸಮಾಜ ಹಾಗೂ ಸಂಪ್ರದಾಯ ವಿರೋಧಿ ವಿಚಾರವಾಗಿತ್ತು. ತಿರುಮಲಾಂಬರವರ 'ಮಾತೃನಂದಿನಿ', ಗೌರಮ್ಮನವರ 'ಆಹುತಿ', ಸರಸ್ವತಿಬಾಯಿ ರಾಜವಾಡೆರವರ 'ಪ್ರತೀಕಾರ' ಮುಂತಾದ ಕೃತಿಗಳಲ್ಲಿ ವರದಕ್ಷಿಣೆಯ ಅಮಾನವೀಯತೆ ಹಾಗೂ ದುರಂತದ ಚಿತ್ರಣವಿದೆ. ಸಮಾಜದ ವಿರೋಧದ ನಡುವೆಯೂ ಪ್ರೇಮ ವಿವಾಹವನ್ನು ಸಮರ್ಥಿಸಿಕೊಳ್ಳುವ ವಿಚಾರಗಳು ಗೌರಮ್ಮನವರ 'ಒಂದು ಚಿತ್ರ', 'ಪ್ರಾಯಶ್ಚಿತ್ತ', 'ಸನ್ಯಾಸಿರತ್ನ' ಕೃತಿಗಳಲ್ಲಿವೆ. ಹಾಗೆಯೇ ಶ್ಯಾಮಲಾದೇವಿ ಬೆಳಗಾಂವಕರವರ ಬರವಣಿಗೆಗಳಲ್ಲಿ ವಿಷಮ ವಿವಾಹ, ಪ್ರೇಮ ವಿವಾಹದ ಸಮಸ್ಯೆಗಳನ್ನು ಮಹಿಳಾಪರ ದನಿಯಾಗಿ ವ್ಯಾಖ್ಯಾನಿಸಲಾಗಿದೆ.

**೪. ಅಭಿವ್ಯಕ್ತಿ ಮಾಧ್ಯಮವಾಗಿ ಪತ್ರಿಕಾರಂಗ:** ಮಹಿಳೆಯರ ಬರವಣಿಗೆಯೇ ಕಷ್ಟ ಸಾಧ್ಯವಾಗಿದ್ದ ಅವಧಿಯಲ್ಲಿ ಲೇಖಕಿಯರೇ ಸ್ವತಃ ಪತ್ರಿಕೆಗಳನ್ನು ನಡೆಸಿದ್ದು ವಿಶೇಷ. ಕಾರಣ ಪತ್ರಿಕೆಯ ಚಂದಾದಾರರನ್ನು ಹುಡುಕುವುದು, ಆರ್ಥಿಕ ಹೊರೆ, ಕೌಟುಂಬಿಕ ಜವಾಬ್ದಾರಿ, ಕೆಲವು ಸಲ ಸಾಹಿತ್ಯ ವಲಯ ಮತ್ತು ಸಮಾಜದ ವಿರೋಧದ ಅನಿವಾರ್ಯತೆಗಳು ಲೇಖಕಿಯರಿಗೆ ಎದುರಾದದ್ದಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪತ್ರಿಕಾರಂಗ ಪ್ರವೇಶಿಸಿದ ಲೇಖಕಿಯರಲ್ಲಿ ಮೊದಲಿಗರು ತಿರುಮಲಾಂಬರವರು. 'ಕರ್ನಾಟಕ ನಂದಿನಿ' ಮತ್ತು 'ಸನ್ಮಾರ್ಗದರ್ಶಿನಿ' ಎಂಬ ಪತ್ರಿಕೆಗಳನ್ನು ನಡೆಸಿದ್ದಲ್ಲದೆ 'ಸತಿ ಹಿತೈಷಿಣಿ' ಎಂಬ ಗ್ರಂಥಮಾಲೆಯನ್ನು ಆರಂಭಿಸಿದರು. ಈ

ಮೂಲಕ ಹೊಸ ಬರಹಗಾರ್ತಿಯರನ್ನು ಸಾಹಿತ್ಯಲೋಕಕ್ಕೆ ಪರಿಚಯಿಸಿದರು. ಇವರದೇ ಪ್ರಭಾವದಿಂದ ಕಲ್ಯಾಣಮ್ಮನವರು 'ಸರಸ್ವತಿ' ಎಂಬ ಪತ್ರಿಕೆಯನ್ನು ಆರಂಭಿಸಿದರು. ಸರಸ್ವತಿಬಾಯಿ ರಾಜವಾಡೆಯವರು ಮಹಿಳೆಯರಿಗಾಗಿಯೇ ಮೀಸಲಾದ 'ಸುಪ್ರಭಾತ' ಎಂಬ ಪತ್ರಿಕೆಯ ಮಹಿಳಾ ವಿಭಾಗದ ಸಂಪಾದಕಿಯಾಗಿಯೂ ಕಾರ್ಯನಿರ್ವಹಿಸಿದರು. ರಾಜಕೀಯ ಸೇರಿದಂತೆ ವಿವಿಧ ಕ್ಷೇತ್ರದ ವಿಚಾರಗಳನ್ನು ಮಹಿಳೆಯರಿಗೆ ತಿಳಿಸುವ ಉದ್ದೇಶದಿಂದ ಎಂ.ಆರ್.ಲಕ್ಷ್ಮಮ್ಮನವರು 'ಸೋದರಿ' ಪತ್ರಿಕೆ ಆರಂಭಿಸಿದರು. ರಾಷ್ಟ್ರೀಯವಾದಿ ಚಳುವಳಿಯ ಪ್ರಭಾವದಿಂದಾಗಿ ಲಲಿತಾ ರೈ ರಂತಹ ಲೇಖಕಿಯರು 'ರಾಷ್ಟ್ರಬಂಧು' ಪತ್ರಿಕೆಯ ಮೂಲಕ ಬರಹದ ಬದುಕನ್ನು ಆರಂಭಿಸಿದರು. ಉಳಿದಂತೆ ಚಂದ್ರಭಾಗಿ ರೈ, ಬೆಳಗರೆ ಜಾನಕಮ್ಮ, ನೆಲ್ಲಿಕಾರು ಜೈನಮಹಿಳೆ ರಾಧಾಮತಿ, ಆರ್.ಕಲ್ಯಾಣಮ್ಮ ಮುಂತಾದವರ ಬರವಣಿಗೆಗೆ 'ನವಭಾರತ', 'ನವಯುಗ', 'ಜೀವನ', 'ಪ್ರಬುದ್ಧ ಕರ್ನಾಟಕ', 'ಜಯಕರ್ನಾಟಕ', 'ಕರ್ನಾಟಕ ಕೇಸರಿ', 'ಕನ್ನಡ ಸಹಕಾರಿ', 'ಸಾಧ್ವಿ', 'ವಿದ್ಯಾದಾಯಿನಿ', 'ನುಡಿಗನ್ನಡಿ' ಮುಂತಾದ ಪತ್ರಿಕೆಗಳು ಪ್ರೋತ್ಸಾಹವನ್ನು ನೀಡಿದವು. ಉಷಾ ನವರತ್ನರಾಂರವರ 'ಗೆಳತಿ', ಧಾರವಾಡದ ವನಿತಾ ಸೇವಾ ಸಮಾಜದ 'ವೀರಮಾತೆ', ಮಹಿಳಾ ಮಾಸಪತ್ರಿಕೆ ಮುಂತಾದವುಗಳು ಇದೇ ಅವಧಿಯಲ್ಲಿ ಬೆಳಕು ಕಂಡವು. ಆದರೂ ಕೆಲವು ಪತ್ರಿಕೆಗಳು ಬೇರೆ ಬೇರೆ ಕಾರಣಗಳಿಂದಾಗಿ ಅಲ್ಪಾವಧಿಯಲ್ಲೇ ನಿಂತು ಹೋದರೆ, ಇನ್ನೂ ಹಲವು ಯಶಸ್ವಿಯಾಗಿ ಮುನ್ನಡೆದವು.

**೫. ಲೇಖಕಿಯರ ಆತ್ಮಕಥೆಗಳು ಮತ್ತು ಅನುವಾದಗಳು:** ಯಾವುದೇ ಲೇಖಕಿಯನ್ನು ಅವರ ಬರವಣಿಗೆಯಲ್ಲಿ ಅಭಿವ್ಯಕ್ತಗೊಳಿಸುವ ವಿಚಾರಗಳಿಂದ ಹೊರಗಿಟ್ಟು ನೋಡಿದಾಗ ಆಕೆಯೂ ಒಬ್ಬ ಮಹಿಳೆ. ಹಾಗೆಯೇ ಸಾಹಿತ್ಯ ಆಥವಾ ಇತರೆ ಕ್ಷೇತ್ರಗಳಲ್ಲಿ ತೊಡಗಿಸಿಕೊಳ್ಳುವಾಗ ಎದುರಾಗುವ ಸಂಕಷ್ಟ-ಸವಾಲುಗಳು ಸಾಕಷ್ಟಿರುತ್ತವೆ. ಇಂತಹ ವಿಚಾರಗಳನ್ನು ತಮ್ಮ ಆತ್ಮಕಥೆಗಳ ಮೂಲಕ ದಾಖಲು ಮಾಡಿ ಗಮನ ಸೆಳೆದವರಲ್ಲಿ ವಾಸಂತಿಬಾಯಿ ಪಡುಕೋಣೆಯವರು ಪ್ರಮುಖರು. "ನನ್ನ ಜೀವನದ ಹೋರಾಟ' ಮತ್ತು 'ನನ್ನ ಮಗ ಗುರುದತ್ತ' ಎಂಬ ಆತ್ಮಕಥೆಗಳನ್ನು ಬರೆದರು. ಬೇರೆ ಬೇರೆ ಭಾಷೆಗಳಲ್ಲಿ ಪ್ರಾವಿಣ್ಯತೆ ಪಡೆದಿದ್ದ ಇವರು ಅನುವಾದದ ಕಥೆಗಳನ್ನು ಸಹ ಬರೆದರು. ಇವರ ನಂತರ ಅನುವಾದ ಕ್ಷೇತ್ರದಲ್ಲಿ ಆನಂದಿ ಸದಾಶಿವರಾಯ್, ಲಲಿತಾ ರೈ ರವರನ್ನು ಹೆಸರಿಸಬಹುದಾಗಿದೆ. ಚಂದ್ರಭಾಗಿ ಕೆ. ರೈ ರವರು ೧೯೧೬ರ ಸುಮಾರಿಗೆ ವೈಚಾರಿಕ ಲೇಖನಗಳನ್ನು ಬರೆದಿದ್ದರು ಎಂಬುದು ಗಮನಾರ್ಹ ಸಂಗತಿ. ಇದರಿಂದಾಗಿ ಸ್ತ್ರೀವಾದದ ಅರುಣೋದಯ ಕಾಲವಾದ ಈ ಹಂತದಲ್ಲಿ ಕೇವಲ ಕಥೆ-ಕಾದಂಬರಿ, ದೈವಸ್ತುತಿಗಳನ್ನಲ್ಲದೆ ಅನುವಾದ, ಆತ್ಮಕಥೆ, ವೈಚಾರಿಕ ಲೇಖನಗಳಲ್ಲಿ ಮಹಿಳೆಯರು ತೊಡಗಿಸಿ

ಕೊಂಡಿರುವುದು ಅಂದಿನ ಲೇಖಕಿಯರ ಬರವಣಿಗೆಯ ಇಂಗಿತವನ್ನು, ಸೃಜನಶೀಲತೆಯನ್ನು ವ್ಯಕ್ತಪಡಿಸುತ್ತದೆ.

**೬. ಲೈಂಗಿಕ ಶೋಷಣೆ ಮತ್ತು ವೈವಾಹಿಕ ಸಮಸ್ಯೆಗಳು:** ಸಂಪ್ರದಾಯ ಮತ್ತು ಆಧುನಿಕತೆಯ ಸಮನ್ವಯತೆ ಸಾಧಿಸುವ ವಿಚಾರಗಳಿಗಿಂತಲೂ ತುಂಬಾ ನಿಷ್ಠುರವಾಗಿ, ವಾಸ್ತವವಾಗಿ ಹೆಣ್ಣಿನ ಲೈಂಗಿಕ ಶೋಷಣೆ ಮತ್ತು ವೈವಾಹಿಕ ಸಮಸ್ಯೆಗಳನ್ನು ಈ ಕಾಲಮಾನದ ಕೆಲವು ಲೇಖಕಿಯರು ಕಥೆಯಾಗಿಸಿದರು. ಇವರಲ್ಲಿ ಗೌರಮ್ಮ ಮತ್ತು ಶ್ಯಾಮಲದೇವಿ ಬೆಳಗಾಂವಕರ ಪ್ರಮುಖರಾದವರು. ಆದ್ದರಿಂದ ಈ ಹಂತವನ್ನು ಕನ್ನಡ ಸಾಹಿತ್ಯದ ಸ್ತ್ರೀವಾದಿ ಚಿಂತನೆಗಳ ಆರಂಭಿಕ ಹೆಜ್ಜೆಯಾಗಿ ಪರಿಗಣಿಸಬಹುದು. ಈ ಸಂದರ್ಭದಲ್ಲಿ ಕೊಡಗಿನ ಗೌರಮ್ಮನವರ 'ಮನುವಿನ ರಾಣಿ', 'ಒಂದು ಪುಟ್ಟ ಚಿತ್ರ', 'ಅಪರಾಧಿ ಯಾರು', 'ಅವಳ ಭಾಗ್ಯ', 'ಅದೃಷ್ಟದ ಆಟ' ಮುಂತಾದ ಕಥೆಗಳನ್ನು ಮಾದರಿಯಾಗಿ ಹೇಳಬಹುದಾಗಿದೆ. ಇವರ ನಂತರದಲ್ಲಿ ಬಂದ ಶ್ಯಾಮಲಾದೇವಿ ಬೆಳಗಾಂವಕರವರು ತಮ್ಮ 'ಹೊಂಬಿಸಿಲು-ಹೊಂಬಿಸಿಲು', 'ನಡೆದು ಬಂದ ಲಕ್ಷ್ಮಿ', 'ಕಂತಿಯ ದೇಶಾಂತರ', 'ಕರುಳ ಕತ್ತರಿ', 'ವಸಂತರಾಯನ ಮದುವೆ', 'ತಾಯಿ ಮಾತಾಯಿ' ಕಥೆಗಳಲ್ಲಿ ಕೆಳವರ್ಗದ ಹೆಣ್ಣುಮಕ್ಕಳ ಮೇಲಿನ ಲೈಂಗಿಕ ಶೋಷಣೆ, ಗಂಡನಿಂದ ಪರಿತ್ಯಕ್ತರಾದ ಮತ್ತು ದೌರ್ಜನ್ಯಕ್ಕೆ ಒಳಗಾದ ಹೆಣ್ಣುಮಕ್ಕಳು ಸ್ವತಂತ್ರ ಬದುಕನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭಗಳು, ತೃತೀಯ ಲಿಂಗಿಗಳ ಬದುಕು, ಲಿಂಗಸಮಾನತೆಯಂತಹ ಹೆಣ್ಣಿನ ಬದುಕಿನ ವಿವಿಧ ಮಗ್ಗಲುಗಳನ್ನು, ವಾಸ್ತವಗಳನ್ನು ಕಟ್ಟಿಕೊಡುತ್ತಾರೆ.

ಒಟ್ಟಾರೆಯಾಗಿ ಲೇಖಕಿಯರಿಗೆ ಶಿಕ್ಷಣದ ಮುಕ್ತ ಅವಕಾಶ, ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರೋತ್ಸಾಹ, ಪ್ರಕಟಣೆಗಳು ಕಷ್ಟಸಾಧ್ಯವಾದಂತಹ ಸಂದರ್ಭವಾಗಿ ಮಹಿಳಾ ಹಕ್ಕುಗಳ ಅಹವಾಲು ಕ್ರಮದ ಕಾಲವನ್ನು ಗುರುತಿಸಲಾಗಿದೆ. ಇದೇ ಅವಧಿಯನ್ನು ಕನ್ನಡ ಮಹಿಳಾ ಸಾಹಿತ್ಯದ ಮೊದಲ ಘಟ್ಟವೆಂದು ಹೇಳಿದ ಜಿ.ಎಸ್.ಅಮೂರರವರ ಮಾತನ್ನು ವೀಣಾಶಾಂತೇಶ್ವರವರು "ಆಗಿನ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಗೆ ಸ್ವಂತ ಅಸ್ತಿತ್ವದ ಬಗ್ಗೆ ಯೋಚಿಸಬೇಕೆನ್ನುವ ಕಲ್ಪನೆಯೇ ಇರಲಿಲ್ಲ. ಮಹಿಳೆ ಹೆಂಡತಿಯಾಗಿ, ವಿಧವೆಯಾಗಿ ಅಥವಾ ವೇಶ್ಯೆಯಾಗಿ ಹೀಗೆ ಪುರುಷನ ಸಂಬಂಧದಲ್ಲಿಯೇ ಗುರುತಿಸಲ್ಪಡುತ್ತಿದ್ದು ಈ ಮೊದಲ ಪೀಳಿಗೆಯ ಲೇಖಕಿಯರ ಸಾಹಿತ್ಯದಲ್ಲಿ ಮಹಿಳಾ ಪಾತ್ರಗಳ ಆಯಾಮಗಳು ಸೀಮಿತವಾಗಿದ್ದವು. ಆಗಿನ ಕಾಲದಲ್ಲೇ ಈ ಲೇಖಕಿಯರು ಸಮಾಜದಲ್ಲಿ ತಾವು ಕಂಡ ಅನಿಷ್ಟಗಳ ಬಗ್ಗೆ ಕತೆ, ಕಾದಂಬರಿ, ಲೇಖನ ಇತ್ಯಾದಿಗಳನ್ನು ಬರೆದದ್ದೇ ಒಂದು ರೀತಿಯ ಪ್ರತಿಭಟನೆಯ ಸಂಕೇತವಾಗಿತ್ತು. ಅವರ ಕೃತಿಗಳಿಗೆ ಸಾಹಿತ್ಯಿಕ ಮೌಲ್ಯ ಅಷ್ಟಾಗಿ ಇಲ್ಲದೆ ಹೋದರೂ ಸಾಂಸ್ಕೃತಿಕ ಮಹತ್ವವಿದೆ"[೧೮]ಎಂಬ ಮಾತುಗಳಲ್ಲಿ

ಸಮರ್ಥಿಸುತ್ತಾರೆ. ಹಾಗಾಗಿ ಇಂತಹ ಸನ್ನಿವೇಶದ ನಡುವೆಯೂ ಒದಗಿಬಂದಿರುವ ಹೊಸ ಅವಕಾಶಗಳಲ್ಲಿಯೇ ಬರವಣಿಗೆಯಲ್ಲಿ ತೊಡಗಿಸಿಕೊಂಡ ಲೇಖಕಿಯರನ್ನು ಆಧುನಿಕ ಸಾಹಿತ್ಯ ಕ್ಷೇತ್ರದ ಮೊದಲ ಹಂತದ ಮಹಿಳಾ ಚಿಂತಕಿಯರಾಗಿ ದಾಖಲಿಸಲಾಗಿದೆ. ಇಲ್ಲಿನ ಲೇಖಕಿಯರು ಮಹಿಳೆಯ ಬಾಧ್ಯತೆಗಳ ಜೊತೆಗೆ ಆಕೆಗೆ ಒದಗಬೇಕಾದ ಹಕ್ಕುಗಳ ಅಹವಾಲುಗಳನ್ನು ಮಂಡಿಸುವ ಪ್ರಯತ್ನವನ್ನು ತಮ್ಮ ಬರವಣಿಗೆಯ ಮೂಲಕ ಮಾಡಿದರು. ಇದಕ್ಕೆ ಪೂರಕವಾಗಿ ಕೇಶವಶರ್ಮರವರು ಹೇಳುವಂತೆ "ಕನ್ನಡದ ಮೊದಲ ಕತೆಗಾರ್ತಿಯರು ಸ್ತ್ರೀಯರ ಸಮಸ್ಯೆಗಳ ಬಗೆಗೆ ಎತ್ತಿದ ಪ್ರಶ್ನೆಗಳು ಮಹಿಳಾ ಸಮಸ್ಯೆಗಳ ಅನನ್ಯತೆಯಿಂದ ಹುಟ್ಟಿಕೊಂಡವುಗಳಾಗಿವೆ. ಇವರ ಕಥೆಗಳಲ್ಲಿ ಸ್ವರಕ್ಷಣೆಯ ಮನೋಭಾವ ಪ್ರಬಲ ಭೂಮಿಕೆಯಾಗಿ ಕೆಲಸ ಮಾಡಿದೆ"[೧೯] ಎನ್ನುವಂತಹ ಮಾತು ಅಂದಿನ ಲೇಖಕಿಯರಿಗೆ ಮಹಿಳಾ ಸಮಸ್ಯೆಗಳೇ ಬರವಣಿಗೆಯ ಪ್ರಧಾನ ಆಯ್ಕೆಯಾಗಿದ್ದವು ಎಂಬುದನ್ನು ನಿರೂಪಿಸುತ್ತವೆ. ಅಲ್ಲದೆ, ಈ ವಿಭಿನ್ನ ಚಿಂತನಾ ಕ್ರಮ ಮುಂದಿನ ದಿನಮಾನಗಳಲ್ಲಿ ವಿಸ್ತಾರ ಸಂಖ್ಯೆಯ ಲೇಖಕಿಯರಿಗೆ ಪ್ರೇರಣೆಯಾಯಿತು. ವಿಶೇಷವೆಂದರೆ, ಇದೇ ಸಂದರ್ಭದಲ್ಲಿ ಬರವಣಿಗೆಯನ್ನು ಆರಂಭಿಸಿದ ತಿರುಮಲಾಂಬ, ಎಚ್.ವಿ.ಸಾವಿತ್ರಮ್ಮ, ವಾಣಿ, ಶಾಂತದೇವಿ ಮಾಳವಾಡ, ಸರಸ್ವತಿಬಾಯಿ ರಾಜವಾಡೆಯಂತಹ ಲೇಖಕಿಯರು ತೊಂಬತ್ತರ ದಶಕದವರೆಗೂ ಆಯಾ ಕಾಲದಲ್ಲಿ ಕಾಣಿಸಿಕೊಂಡ ಮಹಿಳಾ ಚಳುವಳಿಗಳು, ಚಿಂತನೆಗಳಿಗೆ ಸ್ಪಂದಿಸುತ್ತಲೇ ಬರವಣಿಗೆಯನ್ನು ಮುಂದುವರೆಸಿದ್ದೂ ಇದೆ.

### ೨.೪.೨. ಮಹಿಳಾ ಚಿಂತನೆಗಳ ಪ್ರತಿಭಟನೆಯ ಕ್ರಮ

ಲೇಖಕಿಯರ ಕಥಾ ಪರಂಪರೆಯನ್ನು ಆಧರಿಸಿ ಮಹಿಳಾ ಚಿಂತನೆಗಳ ಪ್ರತಿಭಟನೆಯ ಕ್ರಮದ ಕಾಲವನ್ನು ೧೯೫೦ರಿಂದ ೧೯೭೫ರ ಮಹಿಳಾ ದಶಕದ ಆರಂಭದವರೆಗೆ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಕಾರಣ ಮಹಿಳೆಯ ಕುರಿತಾಗಿ ಆರಂಭದ ಲೇಖಕಿಯರ ವಿಚಾರ ಸರಣಿಗಳು ಸುಧಾರಿತ ರೂಪದಲ್ಲಿ ಮುಂದುವರೆದವು. ಈ ವೇಳೆಗೆ ಕಥೆ–ಕಾದಂಬರಿಗಳನ್ನು ಓದುವ ವಿಸ್ತಾರ ಸಂಖ್ಯೆಯ ಮಹಿಳಾ ವರ್ಗವೂ ಸೃಷ್ಟಿಯಾಗಿತ್ತು. ಹೆಣ್ಣಿನ ಜಗತ್ತನ್ನು ತಮ್ಮ ಕಥಾ ಸಾಹಿತ್ಯದಲ್ಲಿ ವಿಭಿನ್ನವಾಗಿ ಕಟ್ಟಿಕೊಡುವತ್ತ ಬರಹಗಾರ್ತಿಯರು ಪ್ರಯತ್ನಿಸಿದರು. ಇವರಲ್ಲಿ ಎಚ್.ವಿ.ಸಾವಿತ್ರಮ್ಮ, ಎಂ.ಕೆ.ಇಂದಿರಾ, ತ್ರಿವೇಣಿ, ಅನುಪಮಾ ನಿರಂಜನ, ಸರಸ್ವತೀ ಬಾಯಿ ರಾಜವಾಡೆ, ವಾಣಿ, ಸುಶೀಲಾ ಕೊಪ್ಪರ, ಗೀತಾ ಕುಲಕರ್ಣಿ, ವೀಣಾ ಶಾಂತೇಶ್ವರ, ಸಾರಾ ಅಬೂಬಕ್ಕರ್, ಉಷಾನವರತ್ನರಾಮ್, ವೈದೇಹಿ, ಬಿ.ಟಿ.ಲಲಿತಾನಾಯಕ್, ಗೀತಾ ನಾಗಭೂಷಣ ಮುಂತಾದವರು ಪ್ರಮುಖ ಲೇಖಕಿಯರಾಗಿ ಗುರುತಿಸಿಕೊಂಡರು. ಇವರನ್ನು ಪ್ರವರ್ಧಮಾನ ಕಾಲದ ಲೇಖಕಿಯರೆಂತಲೂ ಕರೆದುಕೊಳ್ಳಬಹುದಾಗಿದೆ.

ಈ ಕಾಲಮಾನದ ಲೇಖಕಿಯರ ಕಥಾಪರಂಪರೆಯನ್ನು ಸಹ ಅವರ ಕಥಾ ಸಾಹಿತ್ಯ ಒಳಗೊಂಡ ವಸ್ತು ವಿಷಯ, ಮಹಿಳಾ ಚಿಂತನೆಗಳನ್ನಾಧರಿಸಿ ಪ್ರಮುಖ ಅಂಶಗಳಲ್ಲಿ ವಿಶ್ಲೇಷಿಸಿ ಕೊಳ್ಳಲಾಗಿದೆ.

**೧. ವಿಧವಾ ಸಮಸ್ಯೆ:** ಮೊದಲ ಹಂತದ ಹಲವಾರು ಕಥೆ-ಕಾದಂಬರಿಗಳಲ್ಲಿ ವೈಧವ್ಯ ಪ್ರಮುಖ ವಸ್ತು-ವಿಚಾರವಾಗಿ ಚರ್ಚೆಯಾಯಿತು. ಅಲ್ಲಿನ ಲೇಖಕಿಯರು ವೈಧವ್ಯದ ಸಮಸ್ಯೆಗಳನ್ನು ದಾಖಲಿಸುತ್ತಲೇ 'ಪುನರ್ವಿವಾಹ'ದಂತಹ ಪ್ರಗತಿಪರ ಚಿಂತನೆಗಳನ್ನು ಪ್ರೋತ್ಸಾಹಿಸಲು ಪ್ರಯತ್ನಿಸಿದ್ದೇ ದೊಡ್ಡ ಸಾಧನೆಯಾಗಿತ್ತು. ಆದರೆ ಕಲ್ಯಾಣಮ್ಮನವರಂತಹ ಬೆರಳೆಣಿಕೆಯ ಲೇಖಕಿಯರ ಕೃತಿಗಳನ್ನು ಹೊರತುಪಡಿಸಿ ಇಂತಹ ಆಲೋಚನೆಗಳು ಚಿಂತನೆಗಳಾಗಿಯೇ ಉಳಿದವು. ಆದರೆ ಈ ಚಿಂತನೆಗಳನ್ನು ಕಾರ್ಯರೂಪಕ್ಕೆ ತರಲು ಎರಡನೆಯ ಹಂತದಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದ್ದ ಕಾಲದ ಲೇಖಕಿಯರು ಪ್ರಯತ್ನಿಸಿದರು. ಎಚ್.ವಿ.ಸಾವಿತ್ರಮ್ಮನವರ 'ಪಾತುಕರೆ', ಎಚ್.ನಾಗವೇಣಿಯವರ 'ಗಾಂಧಿಬಂದ', ವಾಣಿಯವರ 'ಮನೆಮಗಳು' ಮುಂತಾದ ಕೃತಿಗಳಲ್ಲಿ 'ಮರು ವಿವಾಹ'ದ ಚಿತ್ರಣವಿದೆ. ಅದರಲ್ಲೂ ತಮ್ಮ ಕೃತಿಯಲ್ಲಿ 'ವಿಧವಾ ವಿವಾಹ'ದ ಕುರಿತಾದ ಸಮರ್ಥನೆಯನ್ನು ಸಮಾಜದ ಮುಖಂಡನೊಬ್ಬನ ಬಾಯಿಂದಲೇ ಹೇಳಿಸುವ ದಿಟ್ಟತನವನ್ನು ಎಚ್.ನಾಗವೇಣಿಯವರು ತೋರಿದ್ದಾರೆ. ಎಂ.ಕೆ.ಇಂದಿರಾ ಅವರ 'ಫಣಿಯಮ್ಮ' ಬಾಲ ವಿಧವೆ ಆಕೆಯಲ್ಲಿ ಪುರಾಣ ಮಹಾಕಾವ್ಯಗಳಲ್ಲಿ ಬಂದಿರುವ ಸ್ತ್ರೀ ಪಾತ್ರಗಳ ನೋವಿಗೆ ಸ್ಪಂದನೆಯಿದೆ. ಸಂಪ್ರದಾಯಿಕ ಮನೋಭಾವ ರೀತಿ-ರಿವಾಜುಗಳನ್ನು ಪ್ರಶ್ನಿಸುವ ಗಟ್ಟಿತನವಿದೆ. ಈ ಗಟ್ಟಿತನ 'ಮರು ವಿವಾಹ' ದಂತಹ ವಿಚಾರಕ್ಕೆ ಮುಂದುವರೆಯಲಾರದು. ಆದರೆ ಇಂದಿರಾರವರು ತಮ್ಮ ಮತ್ತೊಂದು ಕಾದಂಬರಿ 'ಸದಾನಂದ'ದಲ್ಲಿ 'ಪುನರ್ವಿವಾಹ'ವನ್ನು ಸಾಕಾರಗೊಳಿಸಿದ್ದಾರೆ. ಆರಂಭಿಕ ಕಾಲದಲ್ಲಿಯೇ ಪ್ರಮುಖ ಲೇಖಕಿಯಾಗಿ ಗುರುತಿಸಿಕೊಂಡ ಸರಸ್ವತಿಬಾಯಿ ರಾಜವಾಡೆ ಯವರು 'ಅವಳ ಉದ್ಧಾರ' ಕಥೆಯ ಮೂಲಕ ವಿಧವಾಶ್ರಮದ ಅನ್ಯಾಯಗಳನ್ನು ಬಯಲಿ ಗೆಳೆಯುತ್ತಾರೆ. ಗೀತಾ ಕುಲಕರ್ಣಿಯವರ 'ಸ್ವಪ್ನ ಮಂದಿರ' ಕಾದಂಬರಿಯಲ್ಲಿ ತಾಯಿ ಮತ್ತು ಮಗಳು ಇಬ್ಬರೂ ವಿಧವೆಯರಾಗಿ ತಮ್ಮದೇ ದಾರಿಯಲ್ಲಿ ಬದುಕಿನ ಅರ್ಥವನ್ನು ಕಂಡುಕೊಳ್ಳುವ ವಸ್ತು ಚಿತ್ರಣವಿದೆ. ಅನುಪಮಾ ನಿರಂಜನರವರ 'ಚಿತ್ತ ಮೋಹನ' ಕಾದಂಬರಿಯಲ್ಲಿಯೂ ಕಥಾ ನಾಯಕಿಯನ್ನು ಮರುಮದುವೆಗೆ ಒಪ್ಪಿಸಲಾದರೂ ಕಥಾ ನಾಯಕನ ಆಕಸ್ಮಿಕ ಸಾವು ಆಕೆಯನ್ನು ಅದೇ ಸ್ಥಿತಿಯಲ್ಲಿ ಉಳಿಸಿಬಿಡುತ್ತದೆ. ಒಟ್ಟಿನಲ್ಲಿ ವೈಧವ್ಯವನ್ನು ಮಾನವೀಯ ನೆಲೆಯಲ್ಲಿ ಸ್ಪಂದಿಸುವ, ಬೆಂಬಲಿಸುವ ಚಿಂತನೆಗಳು ಈ ಕಾಲಮಾನದ ಲೇಖಕಿಯರ ಬರಹಗಳಲ್ಲಿ ನಿರೂಪಿತವಾಗಿವೆ. 'ವೈಧವ್ಯ'ದ ಕಾರಣಕ್ಕೆ ಸಮಾಜದಿಂದ ಹೆಣ್ಣಿನ ಮೇಲೆ ಹೇರಲ್ಪಡುವ

ನಿರ್ಬಂಧಗಳನ್ನು ಈ ಹಿಂದಿನ ಲೇಖಕಿಯರು ಖಂಡಿಸಿದ್ದರು. ಆದರೆ 'ವಿಧವಾ ವಿವಾಹ'ವನ್ನು ಪ್ರೋತ್ಸಾಹಿಸುವಲ್ಲಿ ದ್ವಂದ್ವಗಳಿದ್ದವು. ಇವುಗಳನ್ನು ಪ್ರವರ್ಧಮಾನ ಕಾಲಘಟ್ಟದಲ್ಲಿ ಬಂದ ಬಹುತೇಕ ಲೇಖಕಿಯರು ಮೀರಿ ನಿಲ್ಲುವಲ್ಲಿ ಯಶಸ್ವಿಯಾದರು.

**೨. ವೇಶ್ಯಾ ಸಮಸ್ಯೆ:** ಪ್ರಗತಿಶೀಲ ಪಂಥದ ಲೇಖಕರು ಆಯ್ಕೆ ಮಾಡಿಕೊಳ್ಳುತ್ತಿದ್ದ 'ವೇಶ್ಯಾ ಸಮಸ್ಯೆ'ಯ ವಸ್ತುವನ್ನು ಈ ಕಾಲದ ಲೇಖಕಿಯರು ಸಹ ಬರೆಯಲಾರಂಭಿಸಿದರು. ಸಂಪ್ರದಾಯಿಕ, ಮಡಿವಂತಿಕೆಯ ವಾತಾವರಣದ ನಡುವೆಯೂ ಮುಕ್ತ ಮನಸ್ಸಿನಿಂದ 'ವೇಶ್ಯಾ ಸಮಸ್ಯೆ'ಯಂತಹ ವಿಚಾರವನ್ನು ಕಥೆ-ಕಾದಂಬರಿಗಳಲ್ಲಿ ಪ್ರವರ್ಧಮಾನ ಕಾಲದ ಲೇಖಕಿಯರು ನಿರೂಪಿಸಿದರು. ಸರಸ್ವತಿ ಬಾಯಿ ರಾಜವಾಡೆಯವರ 'ಅವಳ ಉದ್ಧಾರ' ಕಥೆಯಲ್ಲಿ ಗಂಡನಿಂದ ನಿರಾಶ್ರಿತಳಾದ ನಾಯಕಿ ಮೋಸಕ್ಕೆ ಬಲಿಯಾಗಿ ವೇಶ್ಯಾವೃತ್ತಿಗೆ ಇಳಿಯುತ್ತಾಳೆ. ಇವರ ಮತ್ತೊಂದು ಕಥೆಯಾದ 'ಅಹಾಪ್ರಪಂಚವೆ' ಸಹ ವೇಶ್ಯಾ ಸಮಸ್ಯೆಯನ್ನು ಒಳಗೊಂಡಿದೆ. ತ್ರಿವೇಣಿಯವರ 'ಹೂವುಹಣ್ಣು'ವಿನ ರಮಾ ಬಡತನ, ವೈಧವ್ಯದ ಕಾರಣಕ್ಕೆ ವೇಶ್ಯೆಯಾಗುವ ಸನ್ನಿವೇಶವಿದೆ. ಎಚ್.ವಿ.ಸಾವಿತ್ರಮ್ಮನವರ 'ಮೇನಕೆ' ಕಥೆಯಲ್ಲಿ ಕಥಾನಾಯಕಿ ಮದುವೆಯಾದ ದಿನವೇ ಗಂಡನಿಂದ ಪರಿತ್ಯಕ್ತಳಾಗಿ ವೇಶ್ಯಾವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಮುಂದೊಂದು ದಿನ ಗಂಡನೇ ಆಕೆಯ ಬಳಿ ಬಂದಾಗ ಆತನನ್ನು ತಿರಸ್ಕರಿಸುವ ಮೂಲಕ ತನ್ನ ಪ್ರತಿಭಟನೆ ತೋರುತ್ತಾಳೆ. ಎಂ.ಕೆ.ಇಂದಿರಾರವರ 'ಗೆಜ್ಜೆಪೂಜೆ'ಯಲ್ಲಿನ ಕಥಾನಾಯಕಿ 'ಚಂದ್ರಾ'ಳು ಸಹ ತಂಗಿ ಮತ್ತು ತಂದೆಯ ಉದ್ಧಾರಕ್ಕಾಗಿ ವೇಶ್ಯೆಯಾಗಿ ಮುಂದೊಂದು ದಿನ ಆತ್ಮಹತ್ಯೆಗೆ ಒಳಗಾಗುತ್ತಾಳೆ.

ಒಟ್ಟಾರೆ ಪ್ರತಿಯೊಬ್ಬ ಲೇಖಕಿಯರು ತಮ್ಮ ಕಥೆಗಳಲ್ಲಿ ಚಿತ್ರಿಸಿದ ಸ್ತ್ರೀ ಪಾತ್ರಗಳು, ಕುಟುಂಬ, ಸಮಾಜದಂತಹ ವ್ಯವಸ್ಥೆಗಳಿಂದ ಅನ್ಯಾಯ, ತಿರಸ್ಕಾರಗಳಿಗೆ ಒಳಗಾದಾಗ ಅಸಹಾಯಕತೆಯ ಸಂದರ್ಭಗಳಲ್ಲಿ 'ವೇಶ್ಯಾವೃತ್ತಿ'ಯನ್ನು ಆಯ್ದುಕೊಳ್ಳುವ, ಅದೂ ಜಿಗುಪ್ಸೆಯಾದಾಗ ಆತ್ಮಹತ್ಯೆ ಮಾಡಿಕೊಳ್ಳುವತ್ತ ಮುಖ ಮಾಡುತ್ತವೆ. ಅದೇ ರೀತಿ ಹೆಣ್ಣು ಅನ್ಯಾಯಕ್ಕೊಳಪಟ್ಟಾಗ, ದೇಹವ್ಯಾಪಾರವನ್ನೇ ಪರಿಹಾರವಾಗಿ ಕಂಡುಕೊಳ್ಳುವ ವಿಪರ್ಯಾಸ ಮತ್ತು ಸಮಾಜದ ದುರಂತ ಸ್ಥಿತಿಯನ್ನು ಇಲ್ಲಿನ ಕಥೆಗಳು ನಿರೂಪಿಸುತ್ತವೆ.

**೩. ಲೈಂಗಿಕ ಶೋಷಣೆ:** ಹೆಣ್ಣು ಅಸಹಾಯಕಳು, ಪ್ರಧಾನ ಸಂಸ್ಕೃತಿಯ ಅಧೀನಳು ಎಂಬ ಹಿನ್ನೆಲೆಯಲ್ಲಿ ಕೌಟುಂಬಿಕ ಹಾಗೂ ಸಾಮಾಜಿಕ ವಲಯದ ಪರಧಿಯೊಳಗೆ ನಾನಾ ರೀತಿಯ ಲೈಂಗಿಕ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾಳೆ. ಆಕೆಯ ಶೀಲ, ಚಾರಿತ್ರ್ಯದ ಬಗ್ಗೆ ಉಪದೇಶ ನೀಡುವ, ಗೌರವಿಸುವ ವ್ಯವಸ್ಥೆಯೇ ಇಂತಹದೊಂದು ಶೋಷಣೆಗೆ ಮುಂದಾಗುವುದು ಹೊಸತೇನಲ್ಲ. ಪ್ರವರ್ಧಮಾನ ಕಾಲದ ಲೇಖಕಿಯರು 'ವೇಶ್ಯಾ ಸಮಸ್ಯೆ'ಯ ಜೊತೆಗೆ 'ಲೈಂಗಿಕ

ಶೋಷಣೆ'ಯ ದುರಂತಗಳನ್ನು ಕಟ್ಟಿಕೊಡುತ್ತಾರೆ. ಪಾವಿತ್ರ್ಯತೆಯ ಪಾಠ ಹೇಳುವ ಧಾರ್ಮಿಕ ಕೇಂದ್ರಗಳ ಅನಾಚಾರ, ಧರ್ಮಗುರುಗಳಿಂದ ಅಮಾಯಕ ಹೆಣ್ಣು ಮಕ್ಕಳ ಮೇಲಾಗುವ ಅನ್ಯಾಯವನ್ನು ಸರಸ್ವತಿಬಾಯಿ ರಾಜವಾಡೆಯವರ 'ಅಹತ ಹೃದಯ' ಕೃತಿ ಹೇಳುತ್ತದೆ. ಅನುಪಮಾ ನಿರಂಜನರವರ 'ಶ್ವೇತಾಂಬರಿ' ವೈದ್ಯ ವಲಯದಲ್ಲಿ ದಾದಿಗಳಿಗಾಗುವ ಅನ್ಯಾಯ, ದುರುಪಯೋಗವನ್ನು ಹೇಳಿದರೆ, 'ಸಂಕೋಲೆಯೊಳಗಿಂದ' ಕಥೆಯು ಗಂಡನ ಲೈಂಗಿಕ ಶೋಷಣೆಯಿಂದ ರೋಗಗಳ ಗೂಡಾಗಿ ಸಾಯುವವರೆಗೂ ಅನಾಥಳಾಗಿ ಬಾಳುವ ಹೆಣ್ಣಿನ ದುರಂತವನ್ನು ಕಟ್ಟಿಕೊಡುತ್ತದೆ. ಹೆಣ್ಣನ್ನು ದೇಹ ವ್ಯಾಪಾರದ ನೆಲೆಯಲ್ಲಿ ನೋಡುವ ಪೌರಾಣಿಕ ಕಥಾವಸ್ತು 'ಮಾಧವಿ' ಕಾದಂಬರಿ ಬಹಳ ವಿಶಿಷ್ಟವಾಗಿದೆ. ಗಂಡನೆದುರೇ ಅಪರಿಚಿತರಿಂದ ಅತ್ಯಾಚಾರಕ್ಕೆ ಒಳಗಾಗಿ, ಗಂಡನ ಆತ್ಮವಂಚನೆಯ ಕರುಣೆಗೆ ಬೇಸತ್ತು ಸ್ವಂತ ಬದುಕು ಕಟ್ಟಿಕೊಳ್ಳುವ 'ಒಂದು ಘಟನೆ ಮತ್ತು ಅನಂತರ' ಕಥೆ ಲೈಂಗಿಕ ಶೋಷಣೆಯ ಜೊತೆಗೆ ನಾಯಕಿಯ ಪ್ರಗತಿಪರ ನಿಲುವನ್ನು ಬಿಂಬಿಸುತ್ತದೆ. ತ್ರಿವೇಣಿಯವರ 'ಕೀಲುಗೊಂಬೆ' ಮತ್ತು 'ಶರಪಂಜರ' ಕಾದಂಬರಿಗಳಲ್ಲಿಯೂ ಸಹ ತನ್ನದಲ್ಲದ ತಪ್ಪಿಗೆ ಲೈಂಗಿಕ ದಬ್ಬಾಳಿಕೆಗೆ ಸಿಲುಕಿ ನರಳುವ ಕಥಾನಾಯಕಿಯರಿದ್ದಾರೆ. ಎಚ್.ವಿ.ಸಾವಿತ್ರಮ್ಮನವರ 'ನಿರಾಶ್ರಿತೆ' ಮತ್ತು 'ದಮಯಂತಿ' ಕಥೆಗಳು, ಬಿ.ಟಿ. ಲಲಿತಾನಾಯಕರವರ 'ಲೂಟಿ', 'ನೆಲೆ–ಬೆಲೆ' ಕೃತಿಗಳು ಸಹ ಅತ್ಯಾಚಾರದಂತಹ ದೌರ್ಜನ್ಯವನ್ನು ಚಿತ್ರಿಸುತ್ತವೆ. ವಿಶೇಷವಾಗಿ 'ನಿರಾಶ್ರಿತೆ' ಮತ್ತು 'ದಮಯಂತಿ' ಕಥೆಗಳಲ್ಲಿ ವಿಷಮ ಪರಿಸ್ಥಿತಿಯಲ್ಲಿ ಬಿಟ್ಟು ಪಲಾಯನಗೈಯುವ ಗಂಡಂದಿರ ಬಗ್ಗೆ ಸ್ತ್ರೀ ಪಾತ್ರಗಳು ಧೃತಿಗೆಡುವುದಿಲ್ಲ. ಬದಲಾಗಿ ಒಬ್ಬಳು ಅತ್ಯಾಚಾರದ ಫಲವಾಗಿ ಹುಟ್ಟಿದ ಮಗುವಿನಲ್ಲಿ ಜೀವನ ಪ್ರೀತಿಯನ್ನು ಕಂಡುಕೊಂಡರೆ, ಮತ್ತೊಬ್ಬಳು ತನ್ನ ಮನೋಧರ್ಮಕ್ಕೆ ಹೊಂದುವ ವ್ಯಕ್ತಿಯನ್ನು ವರಿಸುತ್ತಾಳೆ. ಲೈಂಗಿಕ ಶೋಷಣೆಗಳಿಗೆ ಒಳಗಾಗುವ ಹೆಣ್ಣುಮಕ್ಕಳಲ್ಲಿ ಕೆಲವರು ಈ ಆಘಾತಗಳನ್ನು ನಿಭಾಯಿಸದೆ, ಮಾನಸಿಕ ಯಾತನೆ, ತಿರಸ್ಕಾರ, ದ್ವಂದ್ವಗಳಲ್ಲಿ ನರಳುವಂತವರಾಗಿದ್ದಾರೆ ಮತ್ತೆ ಕೆಲವರು ತಮ್ಮದಲ್ಲದ ತಪ್ಪನ್ನು ಸಕಾರಾತ್ಮಕವಾಗಿ ತೆಗೆದುಕೊಂಡು ಹೊಸ ಬದುಕಿಗೆ ಅಣಿಯಾಗುತ್ತಾರೆ. ಹೀಗೆ ಎರಡೂ ಬಗೆಯ ಪಾತ್ರಗಳನ್ನು ಇಲ್ಲಿನ ಲೇಖಕಿಯರ ಕಥಾಸಾಹಿತ್ಯದಲ್ಲಿ ಗಮನಿಸಬಹುದಾಗಿದೆ. ಆದರೆ, ಅಂದಿನಿಂದ ಇಂದಿನ ಕಾಲಮಾನದವರೆಗೂ ಹೆಣ್ಣು ಎಷ್ಟೇ ಪ್ರಗತಿಪರಳಾಗಿ, ಆಕೆಗೆ ಕಾನೂನಾತ್ಮಕ ಬೆಂಬಲಗಳಿದ್ದರೂ ಪ್ರತಿ ಕ್ಷೇತ್ರದಲ್ಲೂ, ಹಂತದಲ್ಲೂ ಲೈಂಗಿಕ ಶೋಷಣೆಗೆ ಒಳಗಾಗುತ್ತಲೇ ಇದ್ದಾಳೆ. ನಿಜಕ್ಕೂ ಇದು ನಾಗರಿಕ ಸಮಾಜ ತಲೆತಗ್ಗಿಸಬೇಕಾದ ವಿಚಾರವಾಗಿದೆ.



**೪. ದುಡಿಯುವ ವರ್ಗದ ಮಹಿಳೆಯರು:** ಸಾಮಾಜಿಕ ಸುಧಾರಣಾ ಚಳುವಳಿಗಳ ಭಾಗವಾಗಿ ಒದಗಿಬಂದ ಸ್ತ್ರೀ ಶಿಕ್ಷಣ ಹೆಣ್ಣುಮಕ್ಕಳಿಗೆ ಉದ್ಯೋಗವಕಾಶಗಳನ್ನು ಒದಗಿಸಿತು. ಮನೆಯಲ್ಲಿನ

ಕೈಕೆಲಸದಿಂದ ಹೊರಗಿನ ಹಲವಾರು ಕ್ಷೇತ್ರಗಳವರೆಗೆ ದುಡಿಯುವ ವರ್ಗದ ಮಹಿಳೆಯರ ಸಂಖ್ಯೆ ವಿಸ್ತಾರವಾಯಿತು. ಇಲ್ಲಿ ಎರಡು ರೀತಿಯ ವರ್ಗಗಳಿವೆ. ಕೆಲವರಿಗೆ ದುಡಿಮೆ ಅನಿವಾರ್ಯದ ಜೀವನೋಪಾಯ ಮಾರ್ಗವಾದರೆ, ಕೆಲವರಿಗೆ ಆಧುನಿಕತೆ, ಸ್ವಾವಲಂಬನೆಯ ಆಶಯವಾಗಿರುತ್ತದೆ. ತ್ರಿವೇಣಿಯವರ 'ಕಂಕಣ', 'ಮುಕ್ತಿ', 'ಕಾಶೀಯಾತ್ರೆ' ಕಾದಂಬರಿಗಳಲ್ಲಿ ಮೊದಲ ವರ್ಗದ ಹೆಣ್ಣುಮಕ್ಕಳು ಕಾಣಿಸಿಕೊಳ್ಳುತ್ತಾರೆ. ಇಲ್ಲಿ ಗಂಡನ ಆಶ್ರಯ ತಪ್ಪಿದಾಗ, ಬದುಕಿನ ಏಳುಬೀಳುಗಳಿಂದಾಗಿ ಉದ್ಯೋಗವನ್ನು ಆಶ್ರಯಿಸಲಾಗುತ್ತದೆ. ಇವರ ಮತ್ತೆರಡು ಕಾದಂಬರಿಗಳಾದ 'ಬಾನು ಬೆಳಗಿತು', 'ದೂರದಬೆಟ್ಟ'ಗಳಲ್ಲಿ ಸ್ವಾತಂತ್ರ್ಯ ಹಾಗೂ ಆರ್ಥಿಕ ಸ್ವಾವಲಂಬನೆಯ ಮನೋಭಾವನೆಯಿಂದ ಉದ್ಯೋಗವನ್ನು ಬಯಸುವ ಹೆಣ್ಣುಮಕ್ಕಳು ಇದ್ದರೂ ಸಹ ಇದಕ್ಕೆ ಸಮಾಜ ಮತ್ತು ಕುಟುಂಬ ನಕಾರಾತ್ಮಕ ಪ್ರತಿಕ್ರಿಯೆ ತೋರುವುದನ್ನು ಕಟ್ಟಿಕೊಡಲಾಗಿದೆ.

ಅನುಪಮಾ ನಿರಂಜನರವರು 'ಹಿಮದ ಹೂ' ಕಾದಂಬರಿಯ ಕಥಾ ನಾಯಕಿಯಲ್ಲಿ ಔದ್ಯೋಗಿಕ ಮತ್ತು ಸಾಂಸಾರಿಕ ಎರಡೂ ಕಡೆ ನ್ಯಾಯ ಸಲ್ಲಿಸಲು ಪ್ರಯತ್ನಿಸುವ ದ್ವಂದ್ವವಿದೆ. ವೀಣಾ ಶಾಂತೇಶ್ವರರವರ 'ಗಂಡಸರು' 'ಶೋಷಣೆ–ಬಂಡಾಯ ಇತ್ಯಾದಿ' ಕಾದಂಬರಿಗಳಲ್ಲಿನ ಸ್ತ್ರೀ ಪಾತ್ರಗಳು ಸುಶಿಕ್ಷಿತರು, ಉದ್ಯೋಗಸ್ಥರು, ಆಧುನಿಕತೆಗೆ ಹೊಂದಿಕೊಂಡು ಬದುಕುತ್ತಿರುವವರು. ಹೀಗೆ ಈ ಎಲ್ಲ ಮಾದರಿಗಳನ್ನು ಗಮನಿಸಿದಾಗ ಉದ್ಯೋಗ ಈ ಕಾಲಕ್ಕೆ ಒಂದು ಪ್ರಗತಿಪರ ಬದಲಾವಣೆಯಾಗಿ ಕಂಡುಬಂದಿದೆ. ಆದರೆ ಮತ್ತೊಂದು ಕಡೆ ಹೆಣ್ಣಿನ ದುಡಿಮೆ ಇನ್ಯಾರದೋ ಪೋಷಣೆಗಾಗಿ ವ್ಯಯವಾಗುವುದು. ಇದರೊಂದಿಗೆ ದುಡಿಯುವ ವಲಯದಲ್ಲಿಯೂ ವಿವಿಧ ರೀತಿಯ ದೌರ್ಜನ್ಯಗಳಿಗೆ ಒಳಗಾಗುವುದನ್ನು ಅವಲೋಕಿಸಿದರೆ ಉದ್ಯೋಗ ಹೆಣ್ಣಿನ ಪ್ರಗತಿಪರ ಬೆಳವಣಿಗೆಗೆ ಪೂರಕ ಎಂಬ ವಿಚಾರವನ್ನು ಒಪ್ಪುವಲ್ಲಿ ಸಂಶಯ ಮೂಡುತ್ತದೆ.

**೫. ಸಾಂಸಾರಿಕ ಜಗತ್ತು:** ಕೌಟುಂಬಿಕ ಜಗತ್ತಿನ ಒಳಗಡೆ ಹೆಣ್ಣಿನ ಅಸ್ತಿತ್ವ ವೈವಿಧ್ಯಮಯವಾದುದು. ಕಾರಣ ತಾಯಿ, ಮಗಳು, ಸೊಸೆ, ಹೆಂಡತಿ, ತಂಗಿ ಹೀಗೆ ಅನೇಕ ಪಾತ್ರಗಳನ್ನು ಆಕೆ ನಿರ್ವಹಿಸುತ್ತಾಳೆ. ಅದರಲ್ಲೂ ಕಥೆ–ಕಾದಂಬರಿಗಳಲ್ಲಿ ತಾಯಿ ಮತ್ತು ಹೆಂಡತಿ ಬಹು ಪ್ರಮುಖ ಪಾತ್ರಗಳು. ಹಿಂದಿನಿಂದಲೂ ತ್ಯಾಗ, ಪಾತಿವ್ರತ್ಯ, ತಾಯ್ತನ ಇತ್ಯಾದಿ ಮೌಲ್ಯಗಳನ್ನು ಈ ಮಾದರಿಗಳ ಮೂಲಕ ಪಿತೃ ಸಂಸ್ಕೃತಿ ನಿರೀಕ್ಷಿಸುತ್ತಲೇ ಬಂದಿದೆ. ಈ ಕಾಲದ ಲೇಖಕಿಯರ ಕಥೆ–ಕಾದಂಬರಿಗಳಲ್ಲಿ ಕೆಲವು ಕಡೆ ಇಂತಹ ಮೌಲ್ಯಗಳನ್ನು ಪುರಸ್ಕರಿಸುವ ಅಂತೆಯೇ ತಿರಸ್ಕರಿಸುವ ಮಾದರಿಗಳೆರಡೂ ಇವೆ. ವಾಣಿಯವರ 'ಅನಿರೀಕ್ಷಿತ', 'ಹೊಸಬೆಳಕು', ಎಂ.ಕೆ.ಇಂದಿರಾರವರ 'ಫಣಿಯಮ್ಮ', 'ತುಂಗಭದ್ರೆ', ತ್ರಿವೇಣಿಯವರ 'ಅಪಸ್ವರ', 'ಅಪಜಯ', ವಿಶಾಲ ದಕ್ಷಿಣಮೂರ್ತಿಯವರ 'ಪಡಿ ಎಡವಿ ಬಂದವಳು', 'ಜೀವನಚೈತ್ರ' ಮುಂತಾದ ಕಡೆ ಪುರುಷ ವರ್ಗ ನಿರೀಕ್ಷಿಸುವ ಹೆಣ್ಣಿನ ಮೌಲ್ಯಗಳನ್ನು ಪಾತ್ರಗಳಲ್ಲಿ ಚಿತ್ರಿಸಲಾಗಿದೆ.

೬. **ತಾಯ್ತನ-ಬಂಜೆತನ:** ಕಥಾ ಸಾಹಿತ್ಯದ ಕೌಟುಂಬಿಕ ಜಗತ್ತಿನಲ್ಲಿ ಅನಾವರಣಗೊಳ್ಳುವ ಪರಿಕಲ್ಪನೆಗಳಲ್ಲಿ ತಾಯ್ತನ ಮತ್ತು ಬಂಜೆತನ ಪ್ರಮುಖವಾದವುಗಳು. ತಾಯ್ತನ ಹೆಣ್ಣಿನ ಸಾಂಸಾರಿಕ ಬದುಕಿನ ಪ್ರಮುಖ ಹಂತವಾಗಿ ಗುರುತಿಸಿಕೊಂಡಿದೆ. ತಾಯ್ತನ ಹೆಣ್ಣಿಗೆ ಪರಿಪೂರ್ಣತೆ ಮತ್ತು 'ತ್ಯಾಗಮಯಿ' ಎಂಬ ಸ್ಥಾನವನ್ನು ಕಲ್ಪಿಸಿಕೊಟ್ಟರೆ, ಬಂಜೆತನ ಆಕೆಗೆ ಕೌಟುಂಬಿಕ, ಸಾಮಾಜಿಕ ತಿರಸ್ಕಾರ, ಅನುಪಯುಕ್ತೆ ಎಂಬ ಭಾವವನ್ನು ಸ್ಥಿರೀಕರಿಸುತ್ತದೆ. ಈ ಎರಡೂ ರೀತಿಯ ಸ್ಥಿತಿಗಳು ಹಾಗೂ ಸಾಮಾಜಿಕ ಪ್ರತಿಕ್ರಿಯೆಗಳನ್ನು ಇಲ್ಲಿನ ಕಥಾ ಸಾಹಿತ್ಯದಲ್ಲಿ ಗ್ರಹಿಸಬಹುದಾಗಿದೆ. ಎಂ.ಎಸ್.ಕಾತ್ಯಾಯನಿಯವರ 'ಮಾಲಾ' ಕಥೆಯಲ್ಲಿನ ನಾಯಕಿ ವಿದ್ಯಾವಂತೆ, ಕೌಟುಂಬಿಕ ಅನ್ಯೋನ್ಯತೆ ಗುಣವುಳ್ಳವಳು. ಆದರೆ 'ಬಂಜೆತನ'ದ ಕಾರಣದಿಂದ ಎಲ್ಲರಿಂದ ಅವಮಾನಕ್ಕೊಳಗಾಗುವ ಸಂದರ್ಭ ಎದುರಾಗುತ್ತದೆ. ಆದರೆ, ಆಕೆಗೆ ತಡವಾಗಿ 'ತಾಯ್ತನ' ಒಲಿದುಬಂದಾಗ ಪುನಃ ಸಾಂಸಾರಿಕ ಜೀವನ ಒಂದು ಹಂತಕ್ಕೆ ಬಂದು ನಿಲ್ಲುತ್ತದೆ. ಇವರ ಮತ್ತೊಂದು ಕಥೆಯಾದ 'ರಂಗು'ವಿನಲ್ಲಿ ಬಂಜೆತನದ ಕಾರಣದಿಂದ ಅಸಹಾಯಕಳಾಗಿ ತಿರಸ್ಕೃತೆಯಾಗಿ ಮಾನಸಿಕ ರೋಗಿಯಾಗುವ ಹೆಣ್ಣಿನ ಬದುಕು ದುರಂತಕ್ಕೆ ಹೊರಳುತ್ತದೆ. ಸುಶೀಲಾ ಕೊಪ್ಪರವರ 'ದೃಷ್ಟಿಯ ಆಚೆ ಮತ್ತು ವಿಜ್ಞಾನದ ಈಚೆ' ಕತೆಯಲ್ಲಿ 'ಬಂಜೆತನ'ಕ್ಕೆ ಹೆಣ್ಣು ಮಾತ್ರ ಕಾರಣಳಲ್ಲ ಎಂದು ಪ್ರತಿಪಾದಿಸುವ ವಿಚಾರ ಪರತೆ ಕಂಡುಬಂದರೆ 'ಶ್ರೀಹರಿಯ ಇಚ್ಛೆ' ಕಥೆಯಲ್ಲಿ 'ಬಂಜೆ' ಪಟ್ಟದಿಂದ ಮುಕ್ತಿಹೊಂದಲು ಪರಪುರುಷನ ಸಾಂಗತ್ಯವನ್ನು ಬಯಸುವ ಅನ್ಯಮಾರ್ಗದ ಚಿತ್ರಣವಿದೆ. ಇದೇ ರೀತಿಯ ಕಥಾ ಹಂದರವನ್ನು ಎಚ್.ಎಸ್. ಪಾರ್ವತಿಯವರ 'ಜಾಬಾಲ' ಕಥೆಯಲ್ಲಿಯೂ ಕಾಣಬಹುದಾಗಿದೆ. ಉಳಿದಂತೆ ಕಮಲಾ ಹಂಪನಾರವರ 'ಇದೇ ನಿನ್ನ ಬದುಕು', ಬಿ.ಟಿ.ಲಲಿತಾ ನಾಯಕರ 'ನೆಲೆ-ಬೆಲೆ' ಮುಂತಾದ ಕಥೆ-ಕಾದಂಬರಿಗಳಲ್ಲಿಯೂ ಈ ಮಾದರಿಯ ವಸ್ತು, ಪಾತ್ರಗಳು ನಿರೂಪಿತವಾಗಿವೆ. ಇವುಗಳ ಹೊರತಾಗಿ ಎಚ್.ವಿ.ಸಾವಿತ್ರಮ್ಮನವರ 'ನಿರಾಶ್ರಿತೆ'ಯ ಕಥಾ ನಾಯಕಿ ಅತ್ಯಾಚಾರದಂತಹ ದುರಂತದಿಂದ ಮಗುವನ್ನು ಪಡೆದು, ತಾಯ್ತತನದ ಮೌಲ್ಯವನ್ನೇ ಪುರಸ್ಕರಿಸಿ, ಗಂಡನನ್ನು ತೊರೆಯುತ್ತಾಳೆ. ವೀಣಾ ಶಾಂತೇಶ್ವರರ 'ಹೀಗೊಂದು ಕಥೆ'ಯ ನಾಯಕಿ ಮದುವೆಯೇ ಇಲ್ಲದೆ 'ಲಿವಿಂಗ್ ಟು ಗೆದರ್' ಪರಿಕಲ್ಪನೆಯಲ್ಲಿ ಸಂಗಾತಿಯ ಅಸಮ್ಮತಿಯ ನಡುವೆಯೂ ತಾಯ್ತನವನ್ನು ಉಳಿಸಿಕೊಳ್ಳುತ್ತಾಳೆ. ಈ ಎಲ್ಲ ಕಥೆಗಳು ತಾಯ್ತನದ ವಿಶೇಷ ಆಯಾಮವನ್ನು ತೆರೆದಿಡುತ್ತವೆ. ಒಟ್ಟಾರೆಯಾಗಿ 'ತಾಯ್ತನ' ಎನ್ನುವುದನ್ನು ಹೆಣ್ಣಿನ ಮೌಲ್ಯವನ್ನಾಗಿ ಸಮಾಜ ಪುರಸ್ಕರಿಸುತ್ತಲೇ ಬಂದಿದೆ. ಇದರೊಟ್ಟಿಗೆ 'ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಳೆಲೆಯ ಹಾಸುಂಡು ಬೀಸಿ ಒಗೆದ್ಹಂಗೆ" ಎಂದು ಜಾನಪದ ಕಾಲದಿಂದಲೂ 'ಬಂಜೆ'ಯಾದ ಹೆಣ್ಣು ಅನರ್ಹಳು ಎಂದು ಉಪೇಕ್ಷೆ ಮಾಡುತ್ತಲೇ ಬರಲಾಗಿದೆ. ಈ ಕಾಲದ ಬಹುತೇಕ ಕಥೆಗಾರ್ತಿಯರಲ್ಲಿ

‘ತಾಯ್ತನ’ ಒಂದು ಮೌಲ್ಯವೆಂಬುದನ್ನು ಪಾತ್ರಗಳ ಮೂಲಕ ಒಪ್ಪಿಸುವ ಹಾಗೂ ‘ಬಂಜೆತನ’ ಹೆಣ್ಣಿಗೆ ಶಾಪವಲ್ಲ ಎಂದು ಪ್ರತಿಪಾದಿಸುವ ಎರಡೂ ರೀತಿಯ ದ್ವಂದ್ವ ನಿಲುವುಗಳನ್ನು ಗಮನಿಸಬಹುದಾಗಿದೆ.

**೭. ಮನೋ ವಿಶ್ಲೇಷಣಾತ್ಮಕ ನೆಲೆಗಳು:** ಆರಂಭಿಕ ಕಾಲದ ಲೇಖಕಿಯರು ಬರವಣಿಗೆಗಳಲ್ಲಿ ಸ್ತ್ರೀಯರ ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾವಲಂಬನೆಯಂತಹ ಬಾಹ್ಯ ವಲಯದ ಸಮಸ್ಯೆ ಮತ್ತು ಬೇಡಿಕೆಗಳಿಗೆ ಪ್ರಾಮುಖ್ಯತೆ ನೀಡಿದರು. ಆದರೆ ನಂತರದ ಲೇಖಕಿಯರು ಹೆಣ್ಣಿನ ಸಾಂಸಾರಿಕ ಗೊಂದಲಗಳು, ಮಾನಸಿಕ ವಲಯದ ಸಂಕೀರ್ಣತೆ ಹಾಗೂ ಸಂವೇದನೆಗಳನ್ನು ಪಾತ್ರಗಳಲ್ಲಿ ಅಭಿವ್ಯಕ್ತಗೊಳಿಸಿದರು. ಮನೋವೈಜ್ಞಾನಿಕ ನೆಲೆಯಲ್ಲಿ ಹೆಣ್ಣಿನ ಬದುಕಿನ ಆಯಾಮಗಳನ್ನು ಪರಿಚಯಿಸಿಕೊಟ್ಟ ಲೇಖಕಿಯರಲ್ಲಿ ತ್ರಿವೇಣಿ ಪ್ರಮುಖ ಲೇಖಕಿಯಾಗಿದ್ದಾರೆ. ಇವರ ‘ಮುಚ್ಚಿದ ಬಾಗಿಲು’, ‘ಬೆಕ್ಕಿನ ಕಣ್ಣು’, ‘ದೂರದಬೆಟ್ಟ’, ‘ಶರಪಂಜರ’, ‘ತಾವರೆಕೊಳ’ ಕಾದಂಬರಿಗಳು ಮನೋವೈಜ್ಞಾನಿಕ ಸಂಗತಿಗಳನ್ನು ಒಳಗೊಂಡಿವೆ. ಮಲತಾಯಿಯ ಕುತಂತ್ರ, ತಂದೆಯ ನಿಷ್ಕಾಳಜಿಗೆ ಒಳಗಾಗಿ ‘ಹುಚ್ಚಿ’ಯೆಂದು ಕರೆಸಿಕೊಳ್ಳುವ ‘ಬೆಕ್ಕಿನ ಕಣ್ಣು’ ಕಾದಂಬರಿ ನಾಯಕಿ ಕುಸುಮ, ಕುರೂಪದ ಕಾರಣದಿಂದ ಸ್ವತಃ ಅಜ್ಜಿಯಿಂದ ಅವಹೇಳನಕ್ಕೆ ಒಳಗಾಗಿ ಮಾನಸಿಕ ರೋಗಿಯಾಗುವ ‘ಮುಚ್ಚಿದ ಬಾಗಿಲು’ ಕಥೆಯ ಕನಕ, ಹಾಗೆಯೇ ಗಂಡನ ಕೀಳರಿಮೆ ಗುಣವನ್ನು ಸಹಿಸದೆ ಮನೋಸ್ವಾಸ್ಥ್ಯ ಕಳೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುವ ಶಾರದನಂತಹ ಪಾತ್ರಗಳಿವೆ. ‘ಶರಪಂಜರ’ ಕಾದಂಬರಿಯಲ್ಲಿ ಮದುವೆಗೆ ಮುನ್ನ ಅತ್ಯಾಚಾರಕ್ಕೊಳಗಾದ ಸತ್ಯಸಂಗತಿ ತಿಳಿದು, ಗಂಡ ತಿಸ್ಕರಿಸಿದಾಗ ‘ಕಾವೇರಿ’ ಅನುಭವಿಸುವ ಮನೋವೈರುಧ್ಯ, ಇದರಿಂದ ಹುಚ್ಚಿಯಾಗುವ ಬಗೆ ಇವೆಲ್ಲವೂ ಹೆಣ್ಣಿನ ಮಾನಸಿಕ ಸ್ಥಿತಿಯನ್ನು, ಹೊಯ್ದಾಟಗಳ ಮಾದರಿಯನ್ನು ನಿರೂಪಿಸುತ್ತವೆ. ಇವರ ‘ದೂರದ ಬೆಟ್ಟ’ ಕಾದಂಬರಿಯಲ್ಲಿ ವೈಧವ್ಯದ ಕಾರಣಕ್ಕೆ ಬದುಕು ನೆಲೆ ತಪ್ಪಿದಾಗ ಮರುವಿವಾಹದ ಮೂಲಕ ಕಥಾನಾಯಕಿ ಹೊಸ ಬದುಕು ಕಟ್ಟಿಕೊಳ್ಳುತ್ತಾಳೆ. ಆದರೆ, ಹಳೆ ಮತ್ತು ಹೊಸ ನೆನಪುಗಳ ನಡುವೆ ಹೊಯ್ದಾಟ ಶುರುವಾದಾಗ ಮಾನಸಿಕ ಬದಲಾವಣೆ ತಂದುಕೊಳ್ಳುವಲ್ಲಿ ಸಫಲಳಾಗುತ್ತಾಳೆ. ಹಾಗಾಗಿ ಹೆಣ್ಣಿನ ಮಾನಸಿಕ ತುಮುಲಗಳಿಗೆ ಚಿಕಿತ್ಸಕ ದಾರಿಯನ್ನು ಸೂಚಿಸುವಂತಹ ಕಾದಂಬರಿ ಇದಾಗಿದೆ. “ಮನೋವಿಜ್ಞಾನ ಆರಂಭದಿಂದ ಲಿಂಗತಾರತಮ್ಯವನ್ನು ನಿರೂಪಿಸುತ್ತ ಬಂದಿದ್ದು, ಉನ್ಮಾದ–ಖಿನ್ನತೆಗಳು ಹೆಣ್ಣುತನದ ಲಕ್ಷಣಗಳೆಂದು ಭಾವಿಸಿದೆ. ಗಂಡಿನ ಇಂಥ ವರ್ತನೆಗಳನ್ನೂ ಹೆಣ್ಣುತನವೆಂದೇ ಆರೋಪಿಸಿದೆ. ತ್ರಿವೇಣಿಯವರು ಕೂಡ ಹೆಣ್ಣಿನ ದುರ್ಬಲತೆ ಎಂಬುದನ್ನು ಒಪ್ಪಿರುವಂತೆ ಅವರ ಕಾದಂಬರಿಗಳಲ್ಲಿ ಅದಕ್ಕೆ

ನಿದರ್ಶನಗಳಿವೆ."[೨೦] ಹಾಗಾಗಿ ಹೆಣ್ಣು ಮತ್ತು ಗಂಡು ಜೈವಿಕ ನೆಲೆಯಲ್ಲಿ ಗುರುತಿಸಿಕೊಳ್ಳುವ ವ್ಯತ್ಯಾಸವಾದರೂ ಸಹ ಮನೋ ವೈಜ್ಞಾನಿಕ ನೆಲೆಯಲ್ಲಿಯೂ ಹೆಣ್ಣು ಪುರುಷನಿಗಿಂತಲೂ ದುರ್ಬಲಳು ಎಂದು ಬಿಂಬಿಸಲಾಗಿದೆ ಎಂದೆನಿಸುತ್ತದೆ. ಆದರೂ ಸಹ ಇತರೆ ಲೇಖಕಿಯರ ಕಥಾ ಸಾಹಿತ್ಯದಲ್ಲಿನ ಹೆಣ್ಣಿನ ಸಂವೇದನೆಗಳು, ಮಾನಸಿಕ ಜಗತ್ತಿನ ಪರಿಚಯಗಳಿಗಿಂತಲೂ ಮನಶಾಸ್ತ್ರೀಯ ನೆಲೆಯಲ್ಲಿ ಪಾತ್ರಗಳನ್ನು ಚಿತ್ರಿಸಿದ ತ್ರಿವೇಣಿಯವರು ವಿಭಿನ್ನವಾಗಿ ನಿಲ್ಲುತ್ತಾರೆ.

**೮. ಪ್ರಗತಿಪರ ಧೋರಣೆಗಳು:** ಈ ಕಾಲದ ಲೇಖಕಿಯರು ಶಿಕ್ಷಣ, ಸುಧಾರಣಾವಾದಿ ನಿಲುವುಗಳು, ಆಧುನಿಕತೆಯ ಕಾರಣದಿಂದ ಸಾಂಪ್ರದಾಯಿಕ ಚೌಕಟ್ಟನ್ನು ಮೀರುವ ಪ್ರಯತ್ನ ಮಾಡಿದರು. ಪರಿಣಾಮವಾಗಿ ತಮ್ಮ ಆಲೋಚನೆ, ಬರಹಗಳಲ್ಲಿ ವಿಭಿನ್ನ ಪ್ರಗತಿಪರ ನಿಲುವುಗಳನ್ನು ಪ್ರತಿಪಾದಿಸುವಂತಾಯಿತು. ಚಂದ್ರಭಾಗಿ ಕೆ.ರೈ ರವರು 'ಅಮಂಗಳಾ ಅಮಂಗಳಾ' ಎಂಬ ನೀಳ್ಗತೆಯಲ್ಲಿ ವಿಧವೆಯರ ಬಗ್ಗೆ ಸಮಾಜ ಹೇರಿರುವ ನಂಬಿಕೆಗಳನ್ನು ಪ್ರಶ್ನಿಸಿ, ಅವುಗಳನ್ನು ಮುರಿಯುವ ಮೂಲಕ ಪ್ರಗತಿಪರತೆಯನ್ನು ತೋರುತ್ತಾರೆ. ತ್ರಿವೇಣಿಯವರ 'ಬೆಳ್ಳಿ ಮೋಡ' ಕಾದಂಬರಿಯಲ್ಲಿ ಕಥಾನಾಯಕಿ ಗಂಡಿನ ಸಹಚರ್ಯೆಯನ್ನು ನಿರಾಕರಿಸಿದ್ದರೆ, 'ಸೇರದದಾರಿ' ಕಥೆಯಲ್ಲಿ ಗಂಡನ ಅನೈತಿಕ ಸಂಬಂಧಕ್ಕೆ ಬೇಸತ್ತು ಆತನನ್ನೇ ತೊರೆಯುವ ಪ್ರಗತಿಪರತೆಯನ್ನು ಸ್ತ್ರೀ ಪಾತ್ರಗಳು ತೋರುತ್ತವೆ. ಬಂಜೆತನಕ್ಕೆ ಹೆಣ್ಣೊಬ್ಬಳೇ ಹೊಣೆಯೇ? ಎಂದು ಹೇಳುವ ಮೂಲಕ ಸಮಾಜದ ಮನಸ್ಥಿತಿಯನ್ನು ಪ್ರಶ್ನಿಸುವ ಸುಶೀಲಾ ಕೊಪ್ಪರವರ 'ದೃಷ್ಟಿಯ ಆಚೆ ಅಥವಾ ವಿಜ್ಞಾನದ ಈಚೆ' ಕಥೆಯ ನಾಯಕಿ ಹಾಗೂ ನೈತಿಕತೆ ಎಂಬುದು ಗಂಡು ಮತ್ತು ಹೆಣ್ಣು ಇಬ್ಬರಿಗೂ ಸಂಬಂಧಿಸಿದ್ದೆಂಬುದನ್ನು ಪ್ರತಿಪಾದಿಸುವ 'ಅವಿಸ್ಮರಣೀಯ ಮೂರು ಗಂಟೆಗಳು' ಕಥೆಗಳು ಪ್ರಮುಖವಾದವು. ಇಲ್ಲಿ ಪುರುಷ ನಿರ್ಮಿತ ನಂಬಿಕೆಗಳನ್ನು ತಿರಸ್ಕರಿಸಿ ಧಿಕ್ಕರಿಸಲಾಗುತ್ತದೆ. ರಾಜಲಕ್ಷ್ಮಿ ಎನ್.ರಾವ್ ಅವರ 'ಸಂಗಮ' ಕಥೆಯಲ್ಲಿ ಕಥಾನಾಯಕಿ ಹಣ, ಸೌಂದರ್ಯದ ಮೇಲಿನ ವ್ಯಾಮೋಹ ಹೊಂದಿದ ಗಂಡುಗಳನ್ನು ತಿರಸ್ಕರಿಸುವ ಮೂಲಕ ಹೆಣ್ಣಿನ ಅಸ್ತಿತ್ವದ ಸಂಕೇತವಾಗುತ್ತಾಳೆ. ವೀಣಾ ಶಾಂತೇಶ್ವರರು 'ಕೊನೆಯ ದಾರಿ', 'ಮುಳ್ಳುಗಳು', 'ಗಂಡಸರು' ಮುಂತಾದವುಗಳಲ್ಲಿ ಮದುವೆ, ತಾಯ್ತನ, ಪ್ರತಿಯೊಂದು ಹಂತದಲ್ಲೂ ಆಯ್ಕೆ ಸ್ವಾತಂತ್ರ್ಯವನ್ನು ಬಯಸುವ ಸ್ತ್ರೀ ಪಾತ್ರಗಳನ್ನು ಚಿತ್ರಿಸುತ್ತಾರೆ. ಸಾರಾ ಅಬೂಬಕ್ಕರ್‌ರವರ 'ಸಹನ' ಕಾದಂಬರಿಯ ನಸೀಮ ಗಂಡನ ದೌರ್ಜನ್ಯದ ನಡುವೆಯೂ ಸ್ವತಂತ್ರ ಬದುಕನ್ನು ರೂಪಿಸಿಕೊಳ್ಳುತ್ತಾಳೆ. ಅದೇ ರೀತಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಹೆಂಡತಿಯನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸದ ಗಂಡಂದಿರನ್ನು ತೊರೆದು ಬಾಳುವ ಸಾವಿತ್ರಮ್ಮನವರ 'ನಿರಾಶ್ರಿತೆ', 'ದಮಯಂತಿ'ಯ ಕಥಾ ನಾಯಕಿಯರು ವಿಶೇಷವೆನಿಸುತ್ತಾರೆ. ಮನೆಯವರ ಅನಾದರದ ನಡುವೆ ಕೃತಕ ಗರ್ಭಧಾರಣೆ

ಮೂಲಕ ಮಗುವನ್ನು ಪಡೆಯುವ ಪದ್ಮಾಶೆಣೈರವರ 'ಅನಿಶ್ಚಿತ' ಕಥೆಯ ನಾಯಕಿಯ ನಿರ್ಧಾರ ದಿಟ್ಟತನದಿಂದ ಕೂಡಿದೆ. ಹೀಗೆ ಹೆಣ್ಣಿನ ವಿಭಿನ್ನ ಮಾದರಿಯ ಉದಾಹರಣೆಗಳು ಈ ಕಾಲಮಾನದ ಕಥಾ ಸಾಹಿತ್ಯದಲ್ಲಿ ದೊರೆಯುತ್ತವೆ. ಇದಲ್ಲದೆ ಅಂತರ್‌ಧರ್ಮೀಯ ವಿವಾಹ, ಸಾಂಪ್ರದಾಯಿಕ ನಂಬಿಕೆಗಳ ವಿರೋಧ, ವ್ಯಕ್ತಿಸ್ವಾತಂತ್ರ್ಯದ ಬಯಕೆ, ಸ್ವ ಅಸ್ತಿತ್ವದ ಪ್ರತಿಪಾದನೆಯನ್ನು ಧ್ವನಿಸುವ ಪ್ರಗತಿಪರ ಕಥೆ–ಕಾದಂಬರಿಗಳನ್ನು ಸಹ ಗಮನಿಸಬಹುದಾಗಿದೆ. ಇವೆಲ್ಲವು ಹೆಣ್ಣನ್ನು ಕುರಿತಾಗಿ ಸಾಹಿತ್ಯವಲಯ ಮತ್ತು ಲೇಖಕಿಯರಲ್ಲಿದ್ದ ದೃಷ್ಟಿಕೋನ, ಬದಲಾದ ಮನೋಭಾವಗಳನ್ನು ದಾಖಲಿಸುತ್ತವೆ. ಎಂ.ಎಸ್.ಆಶಾದೇವಿಯವರು ಡಿ.ಆರ್.ನಾಗರಾಜರವರ ಮಾತುಗಳನ್ನು ಹೀಗೆ ಉಲ್ಲೇಖಿಸುತ್ತಾರೆ "ಹೆಣ್ಣನ್ನು ಕೇವಲ ಗೃಹಿಣಿ ಎಂದು ಅಸಡ್ಡೆ ಮಾಡಲಾಗದು. ಏಕೆಂದರೆ ತನ್ನ ತ್ಯಾಗ, ಬಲಿದಾನ ಇತ್ಯಾದಿಗಳಿಗೆ ಏನೂ ಬೆಲೆಯಿಲ್ಲ ಎಂಬ ಆತ್ಮಪ್ರಜ್ಞೆ ಇವಳಿಗೆ ಬಂದರೆ ಎಲ್ಲವನ್ನೂ ಧಿಕ್ಕರಿಸಿ ನಡೆಯಬಲ್ಲ ಶಕ್ತಿಯೂ ಇವರಿಗಿದೆ."[೨೧] ಆದ್ದರಿಂದ ಹೆಣ್ಣಿನ ಆತ್ಮಸಾಕ್ಷಿಗೆ ವಿರುದ್ಧವಾದ ಸಂದರ್ಭಗಳು ಎದುರಾದಾಗ ಆಕೆ ಎಂತಹ ಪರ್ಯಾಯ ಮಾರ್ಗದಲ್ಲೂ ನಡೆಯಬಲ್ಲಳು ಎಂಬುದನ್ನು ಇಲ್ಲಿನ ಪ್ರಗತಿಪರ ಕಥೆ–ಕಾದಂಬರಿಗಳು ನಿರೂಪಿಸುತ್ತವೆ. ಅದೇ ರೀತಿ ಸಮಾಜ, ಕುಟುಂಬ ಮುಂತಾದ ವಲಯಗಳು ಒಡ್ಡುವ ಸವಾಲುಗಳನ್ನು ಎದುರಿಸುವ ಸ್ಥೈರ್ಯ ಹೆಣ್ಣಿನಲ್ಲಿ ಇದ್ದೇ ಇರುತ್ತದೆ.

ಒಟ್ಟಾರೆಯಾಗಿ ಸ್ವಾತಂತ್ರ್ಯ ನಂತರದ ಈ ಅವಧಿಯಲ್ಲಿ 'ಸ್ತ್ರೀಶಿಕ್ಷಣ', 'ಮರುಮದುವೆ', 'ಆರ್ಥಿಕ ಸ್ವಾವಲಂಬನೆ' ಮುಂತಾದವುಗಳು ಸುಧಾರಿತ ನಿಲುವನ್ನು ತಾಳಿದವು. ಅದೇ ರೀತಿ ನಗರ–ಗ್ರಾಮೀಣ, ದೇಸೀ–ವಿದೇಶಿ ಸಂಸ್ಕೃತಿ, ಸಂಪ್ರದಾಯ–ಆಧುನಿಕತೆಯಂತಹ ವಿಚಾರಗಳು ತೀವ್ರ ಸಂಘರ್ಷದ ನೆಲೆಯಾಗಿರುವುದನ್ನೂ ಗಮನಿಸಬಹುದು. ಹೆಣ್ಣಿನ ಸ್ಥಿತಿಗತಿಗಳ ಬಗ್ಗೆ ಸಹಾನುಭೂತಿಯ ಜೊತೆಗೆ ಆಕೆಗೆ ಶಿಕ್ಷಣ, ಉದ್ಯೋಗ, ಸ್ವಾವಲಂಬನೆಯಂತಹ ಅನುಕೂಲತೆಗಳು ಒದಗಿ ಬಂದಿವೆ. ಆದರೆ ಈ ಕಾಲಮಾನದ ಬಹುತೇಕ ಕಥೆ–ಕಾದಂಬರಿಗಳಲ್ಲಿ ವಿವಾಹ, ಕುಟುಂಬ ಸಂಸ್ಥೆಯೇ ಹೆಣ್ಣಿನ ಬದುಕಿನ ಗುರಿಯಾಗುತ್ತದೆ. ಇದರ ಹೊರತಾಗಿ ಅಸಹಾಯಕತೆ, ನಿರಾಸೆ, ಸೋಲು, ತಿರಸ್ಕಾರಗಳು ಎದುರಾದಾಗ 'ಸಾವು' ಪರಿಹಾರದ ರೂಪವನ್ನು ಪಡೆದುಕೊಳ್ಳುತ್ತದೆ. ಕೆಲವು ಸಲ ಲೇಖಕಿಯರ ಕಥಾ ಸಾಹಿತ್ಯದಲ್ಲಿನ ಪಾತ್ರಗಳು ಎಷ್ಟೇ ಆತ್ಮಸ್ಥೈರ್ಯ, ಮುಕ್ತ ಮನೋಭಾವ ವ್ಯಕ್ತಪಡಿಸಿದರೂ ಅಂತಿಮ ಧೋರಣೆ ಮಾತ್ರ ಸಾಂಪ್ರದಾಯಿಕ ಪರಿಧಿಯಲ್ಲೇ ನಿಲ್ಲುತ್ತದೆ. ಹೆಣ್ಣಿಗೆ ಎಷ್ಟೇ ಸ್ವತಂತ್ರ ವ್ಯಕ್ತಿತ್ವ, ವಿದ್ಯೆ, ಉದ್ಯೋಗ ಮುಂತಾದ ಸೌಕರ್ಯಗಳಿದ್ದಾಗಲೂ ವಿವಾಹ, ತಾಯ್ತನ, ಗಂಡಿನ ರಕ್ಷಣೆ ಅನಿವಾರ್ಯವೆಂಬಂತೆ ಅಂತ್ಯ ಕಾಣುತ್ತವೆ. ಹಾಗಾಗಿ ಈ ಅಂಶಗಳನ್ನು ಪ್ರವರ್ಧಮಾನ ಕಾಲದ ಲೇಖಕಿಯರ ಬರವಣಿಗೆಯ ಮಿತಿಯಾಗಿ ಗುರುತಿಸಬಹುದಾಗಿದೆ.

ಹೆಣ್ಣು ಮಕ್ಕಳು ತಮ್ಮ ಮೇಲಿನ ಶೋಷಣೆ, ಅನ್ಯಾಯಗಳನ್ನು ಅರ್ಥಮಾಡಿಕೊಳ್ಳುವುದರಿಂದ ಆರಂಭವಾಗಿ ನಂತರದ ದಿನಗಳಲ್ಲಿ ಬಂಡಾಯ, ಪ್ರತಿಭಟನೆಗಳಿಗೆ ಇಳಿಯುವ ಚಿತ್ರಣಗಳು ಈ ಅವಧಿಯ ಕಥೆ-ಕಾದಂಬರಿಗಳಲ್ಲಿವೆ. ಆರಂಭದಲ್ಲಿ ಸ್ತ್ರೀ ಶಿಕ್ಷಣ, ಉದ್ಯೋಗ, ವಿಧವಾ ವಿವಾಹದಂತಹ ಬೇಡಿಕೆ ಹಕ್ಕುಗಳನ್ನು ಅಹವಾಲುಗಳಾಗಿ ಮಂಡಿಸುವ ಕ್ರಮದಲ್ಲಿ ಕಥಾಸಾಹಿತ್ಯ ಆರಂಭವಾಯಿತು. ನಂತರದಲ್ಲಿ ವಾಸ್ತವತೆ, ಸ್ವ ಅಸ್ತಿತ್ವ, ಹೆಣ್ಣಿನ ಖಾಸಗಿ ವಿಷಯಗಳವರೆಗೆ ವಿಸ್ತರಣೆ ಪಡೆಯಿತು. ಸಾಹಿತ್ಯ ವಲಯದಲ್ಲಿ ದಾಖಲಾದ ಹೊಸಬಗೆಯ ಪಲ್ಲಟ ಇದಾಗಿದೆ.ಈ ವೇಳೆ ಹೆಣ್ಣಿನ ಭಾವನಾಲೋಕ ಬರಹಗಳ ಮೂಲಕ ಅನಾವರಣಗೊಂಡಿತು. ಆಕೆಯ ಬದುಕಿನ ತಲ್ಲಣ, ಅನಿಶ್ಚಿತತೆ ಪುರುಷ ಪಕ್ಷಪಾತಿಯಾದ ಸಮಾಜದ ಧೋರಣೆಗಳನ್ನು ಒರೆಗೆ ಹಚ್ಚಿ ನೋಡುವಂತಾಯಿತು.

ಮೇಲಿನ ಎರಡೂ ಕಾಲಘಟ್ಟಗಳಲ್ಲಿ ಬಂದಿರುವ ಲೇಖಕಿಯರು ಹಾಗೂ ಅವರ ಕಥಾಸಾಹಿತ್ಯದ ವಸ್ತು ವಿಷಯಗಳನ್ನು ಗಮನಿಸಿದಾಗ ಕೆಲವು ವ್ಯತ್ಯಾಸಗಳನ್ನು ಈ ಕೆಳಗಿನ ಅಂಶಗಳ ಮೂಲಕ ಸ್ಪಷ್ಟಪಡಿಸಿಕೊಳ್ಳಲಾಗಿದೆ.

**ಮಹಿಳಾ ಹಕ್ಕುಗಳ ಅಹವಾಲು ಕ್ರಮ**

೧. ಮೊದಲ ಹಂತದ ಲೇಖಕಿಯರು ದೈವಸ್ತುತಿಗಳ ರಚನೆಗೆ ಒತ್ತುಕೊಡುವುದರ ಜೊತೆಗೆ ಬಾಲ್ಯವಿವಾಹ, ವೈಧವ್ಯ, ಸಾಂಪ್ರದಾಯಿಕ ಕಟ್ಟುಪಾಡುಗಳ ಕುರಿತಾದ ಅಸಮಾಧಾನಗಳನ್ನು ಹೊರಹಾಕಿದರು.

೨. ಅಲ್ಲಲ್ಲಿ ಸುಧಾರಣಾವಾದಿ ಪ್ರಗತಿಪರ ನಿಲುವುಗಳು ಕಂಡುಬಂದರೂ ಸಹ ಪಿತೃ ಸಂಸ್ಕೃತಿಯನ್ನು ಮೀರದೆ ಗೊಂದಲದಲ್ಲಿಯೇ ಉಳಿದುಬಿಡುವ ಅಂಶಗಳು ಕಾಣಿಸುತ್ತವೆ.

೩. ಶಿಕ್ಷಣ ಸೌಲಭ್ಯದ ಕೊರತೆ ಒಂದೆಡೆಯಾದರೆ ಮತ್ತೊಂದೆಡೆ ತಮ್ಮ ಚಿಂತನೆಗಳನ್ನು ಬರಹರೂಪದಲ್ಲಿ ಅಭಿವ್ಯಕ್ತಗೊಳಿಸುವಲ್ಲಿ ಲೇಖಕಿಯರಿಗೆ ಪ್ರೋತ್ಸಾಹ, ಸಹಕಾರಗಳ ಕೊರತೆ ಕಂಡುಬರುತ್ತದೆ. ಆದಾಗ್ಯೂ ಇರುವ ಮಿತಿಯೊಳಗೆ ಸ್ತ್ರೀಪರ ಚಿಂತನೆಗಳನ್ನು ಪ್ರತಿಪಾದಿಸಿದ ಲೇಖಕಿಯರ ನಿಲುವು ಮೆಚ್ಚುವಂತಹದು.

೪. ಸ್ತ್ರೀ ಶಿಕ್ಷಣ, ಪುನರ್ವಿವಾಹ, ಹೆಣ್ಣಿನ ವೇದನೆ, ಶೋಷಣೆ ಇತ್ಯಾದಿಗಳನ್ನು ವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಆದರೆ ಇವು ಚಿಂತನೆಗಳಾಗಿ ಉಳಿದಿವೆಯೇ ಹೊರತು ಪರಿಹಾರದ ಹಂತಕ್ಕೆ ನಿರೀಕ್ಷಿಸುವಂತಿಲ್ಲ. ಆದಾಗ್ಯೂ "ತಾವು ದೊಡ್ಡ ಸಾಹಿತ್ಯ ಪ್ರಕ್ರಿಯೆಯೊಂದರ ಭಾಗ ಎಂಬ ಭಾವನೆ ಇದ್ದಂತೆ ತೋರುವುದಿಲ್ಲ. ಆದರೂ ಇವರ ಪ್ರತಿಭೆ ಮತ್ತು

ಬರೆಯಬೇಕೆಂಬ ಶ್ರದ್ಧೆ, ಸಂಕಲ್ಪಗಳನ್ನು ನಾವು ಕಡೆಗಣಿಸುವಂತಿಲ್ಲ"[೨೨] ಎಂಬ ಎಚ್.ಎಸ್. ಶ್ರೀಮತಿಯವರ ಉಲ್ಲೇಖ ಈ ಕಾಲದ ಲೇಖಕಿಯರ ಕುರಿತು ಸಮರ್ಥನೆ ಒದಗಿಸುತ್ತದೆ.

೫. ರಾಷ್ಟ್ರೀಯ ಚಳುವಳಿ, ಸಂಪ್ರದಾಯಿಕ ಮನೋಭಾವದ ಪ್ರಭಾವದಲ್ಲಿ ಲೇಖಕಿಯರ ಚಿಂತನೆಗಳನ್ನು ಗುರುತಿಸುವ ವಾತಾವರಣ ಅಂದಿನ ಕಾಲಕ್ಕೆ ಇರಲಿಲ್ಲ. ಇದರ ನಡುವೆಯೂ ಬರವಣಿಗೆ ಹಾಗೂ ಅಭಿವ್ಯಕ್ತಿಗಳು ನಿಲ್ಲಲಿಲ್ಲ ಎಂಬುದೇ ಸಮಾಧಾನಕರ ಸಂಗತಿ.

೬. ತಿರುಮಲಾಂಬ, ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆಯಂತಹ ಅನೇಕರು ಹಲವಾರು ಅಡೆತಡೆಗಳ ನಡುವೆಯೂ ತಮ್ಮದೇ ಪತ್ರಿಕೆಗಳನ್ನು ಆರಂಭಿಸಿದರು. ಹೊಸ ಲೇಖಕಿಯರ ಬರಹಗಳನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸುವ ಮೂಲಕ ಮುಂದಿನ ಕಾಲಮಾನದ ಲೇಖಕಿಯರ ಪರಂಪರೆಗೆ ಸ್ಫೂರ್ತಿಯಾದರು.

೭. ಕಥೆ–ಕಾದಂಬರಿ ದೈವಸ್ತುತಿಗಳಲ್ಲದೆ, ಆತ್ಮಕಥೆ, ಅನುವಾದ, ವೈಚಾರಿಕ ಬರಹ, ಬಿಡಿ ಲೇಖನಗಳಂತಹ ಸಾಹಿತ್ಯ ಪ್ರಕಾರಗಳಲ್ಲಿಯೂ ತೊಡಗಿಕೊಂಡುದು ಈ ಹಂತದ ಲೇಖಕಿಯರ ವಿಶೇಷತೆಯಾಗಿದೆ.

### ಮಹಿಳಾ ಚಿಂತನೆಗಳ ಪ್ರತಿಭಟನೆ ಕ್ರಮ

೧. ಹೆಣ್ಣಿಗೆ ಉದ್ಯೋಗ, ಶಿಕ್ಷಣ ಇತ್ಯಾದಿ ಅವಕಾಶಗಳು ದೊರೆತರೂ ಕೌಟುಂಬಿಕ, ಸಾಮಾಜಿಕ ಪರಧಿಯೊಳಗೆ ಆಕೆ ಅನುಭವಿಸುವ ತಾಕಲಾಟ, ಗೊಂದಲಗಳು ಕೊನೆಯಾಗದಿರುವುದು ಇವರ ಬರಹಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು.

೨. ತಮ್ಮ ವಿರುದ್ಧ ಶೀಲ, ಪಾವಿತ್ರ್ಯ, ತಾಯ್ತನದ ಹೆಸರಿನಲ್ಲಿ ರೂಪಿಸಿದ ತಪ್ಪು ನಂಬಿಕೆಗಳನ್ನು ಪ್ರಶ್ನಿಸುವ, ಸ್ವಾವಲಂಬನೆ ಬಯಸುವ, ಗಂಡಿನ ದೌರ್ಜನ್ಯ, ಅನ್ಯಾಯ, ಅರ್ಥ ರಹಿತ ಧಾರ್ಮಿಕ ನಿಲುವುಗಳನ್ನು ವಿರೋಧಿಸುವ ಪಾತ್ರಗಳು ಪರಿಣಾಮಕಾರಿಯಾಗಿ ಮೂಡಿಬಂದವು.

೩. ಈ ಕಾಲಮಾನದಲ್ಲಿ ವಿಭಿನ್ನ ಜಾತಿ, ಕೋಮು, ವರ್ಗ, ಪ್ರಾದೇಶಿಕತೆಗಳ ಹಿನ್ನೆಲೆಗಳಿಂದ ಬಂದಿರುವ ಲೇಖಕಿಯರು ತಮ್ಮದೇ ಸಮುದಾಯಗಳ ಮಹಿಳಾಪರ ವಿಚಾರಗಳನ್ನು ಬರವಣಿಗೆಯಲ್ಲಿ ಪ್ರಚುರಗೊಳಿಸಿದರು.

೪. ಆರಂಭಿಕ ಕಾಲದ ಲೇಖಕಿಯರಿಗಿಂತ ಹೆಚ್ಚಿನ ಮಟ್ಟದ ಶಿಕ್ಷಣ ಹಾಗೂ ಪತ್ರಿಕಾ ಮಾಧ್ಯಮದ ಸಹಕಾರ ಈ ಹಂತದ ಲೇಖಕಿಯರಿಗೆ ದೊರೆಯಿತು. ಈ ಸಂದರ್ಭದ ಜನಪ್ರಿಯ ಪತ್ರಿಕೆಗಳಾದ ಶೂದ್ರ, ಸಂಕ್ರಮಣ, ರುಜುವಾತು, ಸಾಕ್ಷಿ, ಲಂಕೇಶಪತ್ರಿಕೆ, ಪ್ರಜಾವಾಣಿಗಳು

ಲೇಖಕಿಯರ ಬರವಣಿಗೆಯನ್ನು ಜನಮಾನಸಕ್ಕೆ ತಲುಪಿಸಿದವು. ಪತ್ರಿಕೋದ್ಯಮದಲ್ಲಿ ಮಹಿಳಾ ವಿಷಯಕ್ಕೆ ಸಂಬಂಧಿಸಿದಂತೆ ಸಕಾರಾತ್ಮಕ ಬದಲಾವಣೆಗಳು ಉಂಟಾದವು. ಮಹಿಳೆಗೆ ಸಂಬಂಧಿಸಿದಂತೆ ಹೊಸ ಎಚ್ಚರ ಮತ್ತು ಕಾಳಜಿಗಳನ್ನು ಆದ್ಯತೆಯನ್ನಾಗಿಸಿಕೊಂಡವು. ಇದಕ್ಕೂ ಹಿಂದೆ ಮಹಿಳಾ ವಿಚಾರಗಳು, ಬರಹಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಲು ಹಿಂದೆ ಸರಿಯುತ್ತಿದ್ದ ಕಾಲವಿತ್ತು. ಆದರೆ ೧೯೭೫ರ ವೇಳೆಗೆ ಮಹಿಳೆಯ ವಿಚಾರಗಳೇ ಪತ್ರಿಕೆಗಳ ಆಕರ್ಷಣೆಯಾದವು.

೫. ಈ ಹಂತದಲ್ಲಿಯೂ ಕಥೆ-ಕಾದಂಬರಿಗಳ ಹೊರತಾಗಿ ಕಾವ್ಯ, ನಾಟಕ, ನೀಳ್ಗತೆ, ವೈಚಾರಿಕ ಬರಹ, ಅನುವಾದ, ಆತ್ಮಕಥೆ, ಪ್ರಬಂಧ ಇತ್ಯಾದಿ ಪ್ರಕಾರಗಳಲ್ಲಿ ಲೇಖಕಿಯರು ತೊಡಗಿಕೊಂಡರು.

೬. ಹಿಂದಿನ ಕಾಲಮಾನದ ಲೇಖಕಿಯರಿಗಿಂತಲೂ ಪ್ರಗತಿಪರ ಚಿಂತನೆಗಳಿದ್ದಾಗಲೂ ಕೆಲವೆಡೆ ಮದುವೆ, ತಾಯ್ತನ ಇತ್ಯಾದಿಗಳ ಬಗ್ಗೆ ಪಿತೃಸಂಸ್ಕೃತಿ ರೂಪಿಸಿದ ಮೌಲ್ಯಗಳನ್ನು ಸಮರ್ಥಿಸಿಕೊಳ್ಳುವ ಸಂದರ್ಭಗಳು ಕೆಲವೆಡೆ ಕಂಡುಬರುತ್ತವೆ.

ಒಟ್ಟಾರೆ ಈ ಎರಡೂ ಕಾಲಮಾನದಲ್ಲಿ ಬರುವ ಲೇಖಕಿಯರಿಗೆ ಹೆಣ್ಣು ಮತ್ತು ಆಕೆಯ ಕುರಿತಾದ ವಿಚಾರಗಳೇ ಕೇಂದ್ರ ವಸ್ತು. ಆದರೆ ಅವರು ತಮ್ಮ ವಿಚಾರ ಕಕ್ಷೆಗೆ ತೆಗೆದುಕೊಂಡ ವಿಷಯಗಳು ಮಾತ್ರ ಕಾಲ, ಸನ್ನಿವೇಶಗಳನ್ನಾಧರಿಸಿ ಬದಲಾವಣೆಗೊಳಪಡುತ್ತಾ ಬಂದಿವೆಯಷ್ಟೆ. ಪಿತೃ ಸಂಸ್ಕೃತಿಯಲ್ಲಿ ಸ್ತ್ರೀಯ ಸ್ಥಾನಮಾನಗಳೇಕೆ ಹೀಗೆ? ಎಂಬ ವಿಚಾರ ಪರತೆಯಿಂದ ಮೊದಲಾಗಿ ಅಲ್ಲಿನ ಲೋಪಗಳನ್ನು ಪ್ರಶ್ನಿಸುವ, ಧಿಕ್ಕರಿಸುವ ಹಂತಕ್ಕೆ ಲೇಖಕಿಯರ ಸಾಹಿತ್ಯ ಬೆಳೆದುಬಂದಿದೆ. ಮಹಿಳಾ ಹಕ್ಕುಗಳು ಆರಂಭಿಕವಾಗಿ ಅಹವಾಲು ಕ್ರಮದಲ್ಲಿ ಮಂಡನೆಯಾದವು. ನಂತರದಲ್ಲಿ ಪ್ರತಿಭಟನಾ ಕ್ರಮಕ್ಕೆ ಹೊರಳಿದ್ದನ್ನು ಕಾಣಬಹುದುದಾಗಿದೆ. ಹೀಗೆ ಲೇಖಕಿಯರ ಕಥಾ ಪರಂಪರೆಯ ವಿವಿಧ ಆಯಾಮಗಳನ್ನು ದಾಖಲಿಸುತ್ತಲೇ ಮುಂದೆ ಎದುರಾಗುವುದು ೧೯೭೫ ರಿಂದ ೮೫ರ ವರೆಗಿನ 'ಮಹಿಳಾ ದಶಕ'. "೧೯೭೫ರ ಅಂತರಾಷ್ಟ್ರೀಯ ಮಹಿಳಾ ವರ್ಷದ ಪ್ರಭಾವದಿಂದ ಕರ್ನಾಟಕ ಲೇಖಕಿಯರ ಸಂಘದ ಸ್ಥಾಪನೆಯಾಯಿತು. ಒಟ್ಟು ಮಹಿಳೆಯರ ಹಕ್ಕು ಬಾಧ್ಯತೆಗಳ ಬಗೆಗಿನ ಚಿಂತನೆಗಳು ಕ್ರಮೇಣವಾಗಿ ಜಾಗೃತವಾಗುತ್ತಿದ್ದ ಕಾಲ. ಮುಂದಿನ ಪಲ್ಲಟಗಳಿಗೆ ಇದು ಸಿದ್ಧಗೊಳ್ಳುತ್ತಿರುವುದನ್ನು ಗಮನಿಸಬಹುದು. ಮುಂದಿನ ಹೊರಳುಗಳಿಗೆ ಇದೊಂದು ರೀತಿಯ ಕೋಶಾವಸ್ಥೆಯ ಕಾಲ, ಸಿದ್ಧತೆಯ ಕಾಲ ಎನ್ನಬಹು ದೇನೋ?"[೨೨] ಎಂದು ಮಂಗಳಾ ಪ್ರಿಯದರ್ಶಿನಿಯವರು ಈ ದಶಕದ ಮಹತ್ವವನ್ನು ಹೇಳುತ್ತಾರೆ. ಹೀಗೆ ಮತ್ತಷ್ಟು ಹೊಸ ಬದಲಾವಣೆಗೆ ಕಾರಣವಾದ ೧೯೭೫-೮೫ರ ಅವಧಿಯನ್ನು ಅಧ್ಯಯನದಲ್ಲಿ

ಮಹಿಳಾ ಚಿಂತನೆಗಳ ಪರ್ಯಾಯ ಕ್ರಮ ಎಂದು ಮೂರನೆಯದಾಗಿ ಗುರುತಿಸಿಕೊಳ್ಳಲಾಗಿದೆ. ಈ ಹಂತದಲ್ಲಿ ಲೇಖಕಿಯರು ತಮ್ಮ ಕಥಾಸಾಹಿತ್ಯದ ಪಾತ್ರಗಳಲ್ಲಿ ಹೆಣ್ಣಿನ ಮೂಲಭೂತ ಸಮಸ್ಯೆಗಳಿಗೆ, ಆಕೆಯ ಸಾರ್ವತ್ರಿಕ ಮತ್ತು ಖಾಸಗಿ ವಿಷಯಗಳಿಗೆ ಸಂಬಂಧಿಸಿದಂತೆ ಪರ್ಯಾಯ ಪರಿಹಾರಗಳನ್ನು ಹುಡುಕಲು ಪ್ರಯತ್ನಿಸಿದರು.

### ೨.೪.೩. ಮಹಿಳಾ ಚಿಂತನೆಗಳ ಪರ್ಯಾಯ ಕ್ರಮ

ಅಂತಾರಾಷ್ಟ್ರೀಯ ಮಟ್ಟದ ಮಹಿಳಾ ಚಳುವಳಿಗಳ ಪರಿಣಾಮವಾಗಿ ಅಭಿವೃದ್ಧಿಯ ಆಶಯಗಳನ್ನಿಟ್ಟುಕೊಂಡು ಬಂದದ್ದು ೧೯೭೫–೮೫ರ 'ಮಹಿಳಾ ದಶಕ'. ಬಂಡಾಯ, ಸಂಘಟನೆ, ಮಹಿಳಾ ವರ್ಷದ ಪ್ರತೀಕವಾಗಿ ಬಂದ ಚಿಂತನೆ ಹಾಗೂ ಕಾನೂನು ತಿದ್ದುಪಡಿ, ಸ್ತ್ರೀ ಸಬಲೀಕರಣದ ಪರಿಕಲ್ಪನೆ ಮತ್ತು ಸ್ತ್ರೀವಾದಿ ಧೋರಣೆಗಳು ಲೇಖಕಿಯರ ಚಿಂತನಾಕ್ರಮದ ಮೇಲೆ ಪರಿಣಾಮವನ್ನು ಬೀರಿದವು. "೧೯೭೫ರ ಅಂತರಾಷ್ಟ್ರೀಯ ಮಹಿಳಾ ದಶಕ ಮತ್ತು ಮಹಿಳಾ ವರ್ಷದ ನಂತರದ ಅವಧಿಯಲ್ಲಿ ಕನ್ನಡದಲ್ಲಿ ಸ್ತ್ರೀಪರ ಚಿಂತನೆಗಳು ಮುನ್ನೆಲೆಗೆ ಬಂದು, ಸ್ತ್ರೀ ಸಂಸ್ಕೃತಿಯ ಶೋಧ, ಮಹಿಳಾ ಸಾಹಿತ್ಯ ಪರಂಪರೆಯ ನಿರ್ಮಾಣದ ಪ್ರಯತ್ನಗಳು ಪ್ರಾರಂಭವಾದವು."[೨೪] ಪ್ರಸ್ತುತ ದಶಕ ಮಹಿಳೆಯರಿಗೆ ಸಂಬಂಧಿಸಿದಂತೆ ಸಾಹಿತ್ಯ ವಲಯದ ಮೇಲೂ ತನ್ನ ಪ್ರಭಾವ ಬೀರಿತು. ಇದರ ಪರಿಣಾಮ "ಈವರೆಗೆ ಸಾಹಿತ್ಯಲೋಕವನ್ನು ಪ್ರವೇಶಿಸದಿದ್ದ ವಿಭಿನ್ನ ಸಾಮಾಜಿಕ ಸ್ತರದ ಮಹಿಳೆಯರು ತಮ್ಮ ಸಮಾಜ ಸಂಸ್ಕೃತಿಯ ಅಜ್ಞಾತ ನೆಲೆಗಳನ್ನು ಸಾಹಿತ್ಯ ಕೃತಿಯ ಮೂಲಕ ಅನಾವಣರಗೊಳಿಸುತ್ತ, ಮಹಿಳಾ ಸಾಹಿತ್ಯದ ಅನುಭವ ಲೋಕವನ್ನು ವೈಚಾರಿಕ ವ್ಯಾಪ್ತಿಯನ್ನು ವಿಸ್ತರಿಸಿದವು"[೨೫] ಎಂಬ ಶಾಂತಾ ಇಮ್ರಾಪುರರವರ ಮಾತುಗಳು ಅಂದಿನ ಮಹಿಳಾ ಸಾಹಿತ್ಯ ರಚನೆಯ ಸಂದರ್ಭ ಹಾಗೂ ಬದಲಾವಣೆಯನ್ನು ನಿರೂಪಿಸುತ್ತವೆ. ಸಾಹಿತ್ಯ ವಲಯ ಅದುವರೆಗೆ ನಿರೀಕ್ಷಿಸದೆ ಇದ್ದ ಹೊಸ ಬದಲಾವಣೆಗೆ ಅಣಿಯಾಯಿತು. ದಲಿತ, ಮುಸ್ಲಿಂ, ಬಂಡಾಯ ಹೀಗೆ ವಿವಿಧ ರೀತಿಯ ಸಂವೇದನೆಗಳೊಂದಿಗೆ ಲೇಖಕಿಯರ ಬರವಣಿಗೆಗಳು ಮಿಳಿತಗೊಂಡವು. ಪುರುಷ ಪ್ರಧಾನ ವ್ಯವಸ್ಥೆಗೆ ಪರ್ಯಾಯವಾಗಿ ತಮ್ಮದೇ ಆದ ವೈಚಾರಿಕ ನಿಲುವುಗಳನ್ನು ಪ್ರತಿಪಾದಿಸುವ ಪ್ರಯತ್ನಗಳಾದವು.

ಪ್ರಸ್ತುತ ಮಹಾಪ್ರಬಂಧದ ಉದ್ದೇಶ ಮಹಿಳಾ ದಶಕದ ಅವಧಿಯ ಲೇಖಕಿಯರ ಕಥಾಸಾಹಿತ್ಯದಲ್ಲಿನ ಸ್ತ್ರೀಪಾತ್ರಗಳ ಪ್ರತಿನಿಧೀಕರಣವನ್ನು ಸ್ತ್ರೀವಾದಿ ಹಿನ್ನಲೆಯಲ್ಲಿ ಅರಿಯುವುದಾಗಿದೆ. ಮಹಿಳಾ ದಶಕದ ಅವಧಿಯ ಬಹುತೇಕ ಲೇಖಕಿಯರು ಈ ಹಿಂದಿನ ಅವಧಿಯಲ್ಲಿಯೇ ಬರವಣಿಗೆಯನ್ನು ಆರಂಭಿಸಿದ್ದರು. ಆದರೆ, ಆಯಾ ಕಾಲ, ಸನ್ನಿವೇಶಗಳಿಗೆ ತಕ್ಕಂತೆ ಚಿಂತನಾ ಕ್ರಮಗಳು ಸಹ ಬದಲಾಗುತ್ತವೆ. ಆದ್ದರಿಂದ ಒಂದು ಹಂತದ ಚಿಂತನೆಗಳು ಮುಂದಿನ

ಹಂತದ ಬರಹದಲ್ಲಿ ಬೇರೆಯದೇ ಆಶಯಗಳನ್ನು ಹೇಳುವ ಸಾಧ್ಯತೆಗಳಿರುತ್ತವೆ. ಹಾಗಾಗಿ ಮಹಿಳಾ ದಶಕದ ಪರಿಣಾಮವಾಗಿ ಲೇಖಕಿಯರ ಚಿಂತನಾಕ್ರಮದಲ್ಲಿ ಆದ ಬದಲಾವಣೆ ಏನು? ಹೇಗೆ? ಬದಲಾದ ಚಿಂತನೆಗಳನ್ನು ತಮ್ಮ ಕಥೆಗಳ ಪಾತ್ರಗಳಲ್ಲಿ ಪ್ರತಿನಿಧೀಕರಿಸಿದ್ದಾರೆಯೇ? ಎಂಬುದನ್ನು ಪರಿಶೀಲಿಸಲಾಗಿ ಈ ಅಧ್ಯಯನ ಲೇಖಕಿಯರ ಕೇಂದ್ರಿತ ಎನ್ನುವುದಕ್ಕಿಂತಲೂ ಮಹಿಳಾ ದಶಕದ ಚಿಂತನೆಗಳ ಕೇಂದ್ರಿತ ಎನ್ನಬಹುದಾಗಿದೆ.

ಈ ಹಿನ್ನೆಲೆಯಲ್ಲಿಯೇ ಮಹಿಳಾ ದಶಕದ ಲೇಖಕಿಯರ ಕಥಾ ಸಾಹಿತ್ಯದ ಸ್ತ್ರೀಪಾತ್ರಗಳ ಪ್ರತಿನಿಧೀಕರಣವನ್ನು ಅರಿಯಲು ಐದು ಜನ ಪ್ರಾತಿನಿಧಿಕ ಲೇಖಕಿಯರ ಕಥಾ ಸಾಹಿತ್ಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮುಂದಿನ ಅಧ್ಯಾಯದಲ್ಲಿ ವೈದೇಹಿ, ವೀಣಾಶಾಂತೇಶ್ವರ, ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್, ಬಿ.ಟಿ.ಲಲಿತಾ ನಾಯಕ್‌ರವರ ಕಥಾಸಾಹಿತ್ಯವನ್ನು ಸ್ತ್ರೀ ಪಾತ್ರಗಳ ಪ್ರತಿನಿಧೀಕರಣದ ಮೂಲಕ ವಿಶ್ಲೇಷಿಸಲಾಗುತ್ತದೆ. ಈ ರೀತಿಯ ವಿಶ್ಲೇಷಣೆಗೆ ೧೯೭೫-೮೫ರ ಮಹಿಳಾ ದಶಕ, ಇದಕ್ಕೆ ಹಿನ್ನೆಲೆಯಾಗಿ ಜರುಗಿದ ಮಹಿಳಾ ಚಳುವಳಿಗಳು, ಕೌಟುಂಬಿಕ ಹಾಗೂ ಸಾಮಾಜಿಕ ವಲಯಗಳಲ್ಲಿ ಹೆಣ್ಣಿನ ವಿಚಾರಗಳಲ್ಲಾದ ಮಹತ್ವದ ಬದಲಾವಣೆ, ಕಾಯ್ದೆ, ಕಾನೂನು, ಹೋರಾಟ ಮುಂತಾದ ವಿಚಾರಗಳ ಅರಿವು ಅತ್ಯಗತ್ಯ. ಹಾಗಾಗಿ ಇದೇ ಅಧ್ಯಾಯದ ಆರಂಭದಲ್ಲಿ ಈಗಾಗಲೇ ಜಾಗತಿಕ, ರಾಷ್ಟ್ರ ಹಾಗೂ ರಾಜ್ಯದ ಹಂತಗಳಲ್ಲಿ ನಡೆದ ಮಹಿಳಾ ಚಳುವಳಿಗಳ ಇತಿಹಾಸವನ್ನು ತಿಳಿಯಲಾಗಿದೆ. ಈ ಎಲ್ಲ ಹೋರಾಟಗಳ ಫಲವಾಗಿ ಬಂದ 'ಮಹಿಳಾ ದಶಕ' ಮತ್ತು ಅದರ ಚಾರಿತ್ರಿಕ ಹಿನ್ನೆಲೆ, ಪ್ರಭಾವ, ಸುಧಾರಣೆ ಹಾಗೂ ಆಶಯಗಳನ್ನು ವಿವರವಾಗಿ ದಾಖಲಿಸಲಾಗಿದೆ. ಇವೆಲ್ಲವುಗಳ ಅರಿವಿನೊಂದಿಗೆ ಪ್ರಾತಿನಿಧಿಕ ಲೇಖಕಿಯರ ಕಥಾ ಸಾಹಿತ್ಯ, ಪರಂಪರೆ ಹಾಗೂ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣವನ್ನು ವಿಶ್ಲೇಷಿಸುವುದು ಸೂಕ್ತ ಕ್ರಮವೆನ್ನಿಸುತ್ತದೆ.

## ೨.೫. ಸ್ತ್ರೀ ಪ್ರತಿನಿಧೀಕರಣದ ಪರಿಕಲ್ಪನಾತ್ಮಕ ಚರ್ಚೆ

'ಪ್ರತಿನಿಧೀಕರಣ' ಎಂಬುದು ಆಧುನಿಕತೆಯ ಸಂದರ್ಭದಲ್ಲಿ ಹೆಚ್ಚು ಮಹತ್ವವನ್ನು ಪಡೆದುಕೊಂಡ ಪರಿಕಲ್ಪನೆಯಾಗಿದೆ. ಸರ್ವರಿಗೂ ಸಮಾನತೆಯನ್ನು ಕಲ್ಪಿಸುವ ಉದ್ದೇಶ ಮತ್ತು ಆಶಯದ ಹಿನ್ನೆಲೆಯಲ್ಲಿ 'ಪ್ರತಿನಿಧೀಕರಣ' ಪದ ಬಳಕೆಗೆ ಬಂದಿದೆ. ಆಂಗ್ಲ ಭಾಷೆಯಲ್ಲಿ 'Representation' ಎಂದು ಕರೆಯಲ್ಪಡುವ 'ಪ್ರತಿನಿಧೀಕರಣ' ಎಂಬ ಪದಕ್ಕೆ ನಿಘಂಟಿನಲ್ಲಿ 'ಚಿತ್ರಿಸು', 'ತೋರಿಸು', 'ಪರವಾಗಿ ನಿಲ್ಲು' ಎಂಬ ಬೇರೆ ಬೇರೆ ಅರ್ಥಗಳಿವೆ. ಬಿ.ಜಿ.ಕಲಾವತಿಯವರು ಹೇಳುವಂತೆ "ಪ್ರತಿನಿಧೀಕರಣವೆಂದರೆ ಯಾವುದೇ ಘಟನೆ ಇರಬಹುದು, ಲೋಕಾನುಭವ ಇರಬಹುದು ಅಥವಾ ವ್ಯಕ್ತಿಯನ್ನು ಕುರಿತು, ಸಮುದಾಯವನ್ನು ಕುರಿತು ಯಾವುದೇ ವಿಚಾರದ

ಬಗ್ಗೆ ಯಾವುದೇ ಮಾಧ್ಯಮದ ಮೂಲಕ ಭಾಷಿಕ, ಭಾಷಿಕೇತರ ಸಂಜ್ಞೆಗಳನ್ನು ಬಳಸಿ ನಿರೂಪಿಸುವುದಾಗಿದೆ."[೨೬] ಈ ಉಲ್ಲೇಖದನ್ವಯ ರೈತಾಪಿ, ದಲಿತ, ಮಹಿಳೆ, ಕಾರ್ಮಿಕ, ಸಾಹಿತ್ಯ, ರಾಜಕೀಯ, ಸಂಸ್ಕೃತಿ, ಧರ್ಮ ಹೀಗೆ ಹತ್ತಾರು ಸಮುದಾಯ ಹಾಗೂ ಅಲ್ಲಿನ ವಿದ್ಯಮಾನಗಳ ಪ್ರತಿನಿಧಿಯಾಗಿ ನಿಲ್ಲುವ ಪರಿಕಲ್ಪನೆಯಾಗಿ 'ಪ್ರತಿನಿಧೀಕರಣ' ಪದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಎಲ್ಲಾ ವಲಯಗಳಲ್ಲಿಯೂ ವ್ಯಾಪಕವಾಗಿ ಬಳಕೆಗೆ ಬಂದಿದೆ.

ಇವೆಲ್ಲವುದರ ಜೊತೆಗೆ ಪ್ರಸ್ತುತ ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ 'ಸ್ತ್ರೀ ಪ್ರತಿನಿಧೀಕರಣ'ದ ನಿರ್ವಚನೆ ಸಹ ಮುಖ್ಯವಾದುದು, 'ಸ್ತ್ರೀ ಪ್ರತಿನಿಧೀಕರಣ' ಎಂದರೆ ಮಹಿಳೆಯ ಪರವಾಗಿ ನಿಲ್ಲುವ, ಆಕೆಯ ಸ್ಥಾನಮಾನಗಳನ್ನು ಚಿತ್ರಿಸುವ ಎಂಬ ಸಾಮಾನ್ಯ ಅರ್ಥವನ್ನು ಹೇಳಬಹುದು. ಸಾಹಿತ್ಯ ವಲಯವನ್ನು ಕೇಂದ್ರವಾಗಿಟ್ಟುಕೊಂಡು ಈಗಾಗಲೇ 'ದಲಿತ ಕಾದಂಬರಿಗಳಲ್ಲಿ ಮಹಿಳೆಯರ ಪ್ರತಿನಿಧೀಕರಣ', 'ದಲಿತ–ಬಂಡಾಯ ಸಾಹಿತ್ಯದಲ್ಲಿ ಮಹಿಳಾ ಪ್ರತಿನಿಧೀಕರಣ', 'ಮಾಸ್ತಿಯವರ ಕಥೆಗಳಲ್ಲಿ ಸ್ತ್ರೀ ಪ್ರತಿನಿಧೀಕರಣ', 'ಹೈದ್ರಾಬಾದ್ ಕರ್ನಾಟಕದ ಮಹಿಳಾ ಸಾಹಿತ್ಯದಲ್ಲಿ ಸ್ತ್ರೀ ಪ್ರತಿನಿಧೀಕರಣ' ಹೀಗೆ ವಿವಿಧ ನೆಲೆಗಳಲ್ಲಿ 'ಸ್ತ್ರೀ ಪ್ರತಿನಿಧೀಕರಣ'ದ ಅಧ್ಯಯನಗಳು ನಡೆದಿವೆ. ಆದರೆ ಜಾಗತಿಕವಾಗಿ ಮಹಿಳಾ ದಶಕವೆಂದು ಗುರುತಿಸಿಕೊಂಡ ೧೯೭೫–೮೫ರ ಅವಧಿಯ ಪ್ರಾತಿನಿಧಿಕ ಲೇಖಕಿಯರ ಕಥಾಸಾಹಿತ್ಯದಲ್ಲಿನ 'ಸ್ತ್ರೀ ಪ್ರತಿನಿಧೀಕರಣ'ವನ್ನು ಹೇಳುವುದು ಪ್ರಸ್ತುತ ಮಹಾಪ್ರಬಂಧದ ಉದ್ದೇಶವಾಗಿದೆ. ಇಲ್ಲಿನ ಲೇಖಕಿಯರ ಕಥನಗಳು ಮಹಿಳೆಯ ಬದುಕನ್ನು ಯಾವ ಗ್ರಹಿಕೆಯ ಹಿನ್ನೆಲೆಯಲ್ಲಿ ಪ್ರತಿನಿಧಿಸುತ್ತವೆ ಎಂಬುದನ್ನು ಗಮನಿಸಲಾಗುತ್ತದೆ.

ಸೀತಾಲಕ್ಷ್ಮಿ ಅವರ ಪ್ರಕಾರ "ಸ್ತ್ರೀ ಪ್ರತಿನಿಧೀಕರಣ ಎಂದರೆ ಒಂದು ವ್ಯವಸ್ಥೆ ಹೆಣ್ಣನ್ನು ನಿಯಂತ್ರಿಸುತ್ತಾ ಬಂದರೂ ಅದರಿಂದ ಅವಳು ಅನುಭವಿಸಿದ ಬದುಕನ್ನು ಪ್ರತಿನಿಧಿಸುವುದಾಗಿದೆ. ಹೆಣ್ಣು ಬದುಕಿದ ರೀತಿಯನ್ನು ಅವಳ ಕಾಲದ ಸಂಸ್ಕೃತಿ, ನಂಬಿಕೆಗಳ ಹಿನ್ನೆಲೆಯಲ್ಲಿ ನೋಡುವುದಾಗಿದೆ. ಅವಳ ಆಲೋಚನೆ ಬದುಕಿದ ರೀತಿಯಲ್ಲೇ ಅವಳಿದ್ದ ಸಮಾಜ, ಸಂಸ್ಕೃತಿ ಹಾಗೂ ಆಳುವ ವರ್ಗ ಅವಳನ್ನು ನಡೆಯಿಸಿಕೊಂಡ ಬಗೆಯನ್ನು ಹುಡುಕುವುದಾಗಿದೆ."[೨೭] ಆದ್ದರಿಂದ ಈ ಹೇಳಿಕೆಯನ್ನು ಒಪ್ಪುತ್ತಲೇ ಮಹಿಳಾ ದಶಕದ ಸಂದರ್ಭಕ್ಕೆ ಲೇಖಕಿಯರ ಚಿಂತನೆಗಳಲ್ಲಿ ಉಂಟಾದ ಬದಲಾವಣೆ, ಹೆಣ್ಣಿನ ಬದುಕು, ಆಕೆಯ ಸಾಮಾಜಿಕ ಸ್ಥಾನಮಾನ, ವ್ಯಕ್ತಿಗತ ಅನುಭವಗಳು, ನಿರ್ವಹಿಸುವ ಪಾತ್ರಗಳು ಇತ್ಯಾದಿಗಳನ್ನು ಕಥಾ ಸಾಹಿತ್ಯದಲ್ಲಿ ದಾಖಲಿಸಿದ ಕ್ರಮವನ್ನು ಇಲ್ಲಿನ ಮಹಾಪ್ರಬಂಧದಲ್ಲಿ 'ಸ್ತ್ರೀ ಪ್ರತಿನಿಧೀಕರಣ' ಎಂದು ನಿರ್ವಚಿಸಿಕೊಳ್ಳಲಾಗಿದೆ.

ಕಾಲಕ್ಕೆ ತಕ್ಕಂತೆ ದೃಷ್ಟಿಕೋನಗಳು ಬದಲಾಗುತ್ತವೆ. ಇಲ್ಲಿಯೂ ಹಾಗೆ ಮಹಿಳಾ ದಶಕಕ್ಕೂ ಮುಂಚಿನ ಮತ್ತು ನಂತರದ ಲೇಖಕಿಯರು ತಮ್ಮ ಕಥಾ ಸಾಹಿತ್ಯದಲ್ಲಿ ಸ್ತ್ರೀಯನ್ನು ಪ್ರತಿನಿಧೀಕರಿಸಿದ ಮಾದರಿಗಳಲ್ಲಿ ಸಹಜವಾಗಿ ವ್ಯತ್ಯಾಸಗಳಿದ್ದೇ ಇವೆ. ಆದ್ದರಿಂದ ಪ್ರಸ್ತುತ ಅಧ್ಯಾಯದಲ್ಲಿ 'ಲೇಖಕಿಯರ ಕಥಾ ಪರಂಪರೆ'ಯ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ೧೨ ರಿಂದ ೧೭ನೇ ಶತಮಾನದ ಮಧ್ಯಕಾಲೀನ ಸಾಹಿತ್ಯದಲ್ಲಿ ಪ್ರಚುರಗೊಂಡ ಸ್ತ್ರೀ ಕುರಿತಾದ ಚಿಂತನೆಗಳ ಸಂಕ್ಷಿಪ್ತ ನೋಟವನ್ನು ಕಟ್ಟಿಕೊಡುತ್ತಲೇ ಆಧುನಿಕ ಲೇಖಕಿಯರ ಕಥಾ ಪರಂಪರೆಯನ್ನು ಚರ್ಚಿಸಲಾಗಿದೆ. ಈ ಮೂಲಕ ಆಧುನಿಕ ಕಾಲದ ಆರಂಭದಿಂದ ಮಹಿಳಾ ದಶಕದವರೆಗಿನ ಲೇಖಕಿಯರು ತಮ್ಮ ಕಥಾ ಸಾಹಿತ್ಯದಲ್ಲಿ ಚಿತ್ರಿಸಿದ ಸ್ತ್ರೀ ಮಾದರಿಗಳು, ಆಶಯಗಳು ಮುಂತಾದವುಗಳನ್ನು ಗ್ರಹಿಸಲಾಗಿದೆ. ಈ ರೀತಿಯ ಗ್ರಹಿಕೆಯಿಂದ ಸ್ತ್ರೀ ಪ್ರತಿನಿಧೀಕರಣದ ಮಾದರಿಗಳು, ಅಭಿವ್ಯಕ್ತಿ ಕ್ರಮಗಳು, ವಸ್ತು, ವಿಷಯಗಳ ತಳಹದಿಯ ಮೇಲೆ ಮಹಿಳಾ ದಶಕದ ಚಿಂತನೆಗಳನ್ನು ಪ್ರಾತಿನಿಧಿಕ ಲೇಖಕಿಯರ ಸ್ತ್ರೀ ಮಾದರಿ ಪಾತ್ರಗಳಲ್ಲಿ ಅನ್ವಯಿಸುವುದರೊಂದಿಗೆ ಮಹಾಪ್ರಬಂಧದ ಮುಂದಿನ ಅಧ್ಯಯನ ಸಾಗುತ್ತದೆ.

**ಅಡಿಟಿಪ್ಪಣಿಗಳು**

೧. ಉಷಾ ಎಂ., ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪು.೪೬

೨. ಓಮನ್ ಟಿ.ಕೆ., ೧೯೯೦, ಪ್ರೊಟೆಸ್ಟ್ ಅಂಡ್ ಚೇಂಜ್, ಪು.೪

೩. ಸುಜ್ಞಾನಮೂರ್ತಿ ಬಿ., ೨೦೦೯, ನಮಗೆ ಗೋಡೆಗಳಿಲ್ಲ, ಪು.೩೬

೪. ಗಾಯತ್ರಿ ಎನ್., ೧೯೯೮, ಮಹಿಳಾ ಚಳುವಳಿಯ ಮಜಲುಗಳು, ಪು.೧೪

೫. ಗಾಂಧಿ ಎಂ.ಕೆ., ೧೯೨೦, ಯಂಗ್ ಇಂಡಿಯಾ, ವುಮೆನ್ ಆ್ಯಂಡ್ ದ ವೋಟ್, ಪು.೨

೬. ಶ್ರೀಮತಿ ಎಚ್.ಎಸ್., ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಪು.೧೭೨

೭. ಗಾಯತ್ರಿ ಎನ್., ೧೯೯೮, ಮಹಿಳಾ ಚಳುವಳಿಯ ಮಜಲುಗಳು, ಪು.೩೧

೮. ಅದೇ, ಪು.೭೦

೯. ಶ್ರೀಮತಿ ಎಚ್.ಎಸ್., ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪು.೩೮

೧೦. ವಿಜಯದಬ್ಬೆ, ೧೯೯೭, ನಾರಿ: ದಾರಿ-ದಿಗಂತ, ಪು.೧೧೪

೧೧. ಎಂ.ಆರ್.ಶ್ರೀ, ೧೯೬೬, ವಚನ ಧರ್ಮಸಾರ, ಪು.೧೦೩

೧೨. ಸರಸ್ವತಿ ಎಚ್.ಜಿ.(ಲೇ), ೧೯೯೩, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಆಧುನಿಕ ಪೂರ್ವ ಬರಹಗಾರ್ತಿಯರು, ಬರಗೂರು ರಾಮಚಂದ್ರಪ್ಪ(ಸಂ), ಪು.೧೫

೧೩. ಬರಗೂರು ರಾಮಚಂದ್ರಪ್ಪ(ಸಂ), ೧೯೯೩, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಪು.೧೪೨

೧೪. ಮೀರಾ ಎಲ್.ಜಿ., ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ತಿರುಮಲಾಂಬರವರಿಂದ ೧೯೫೦ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ಶ್ರೀಮತಿ ಎಚ್.ಎಸ್.(ಸಂ), ಪು.೨೫೧

೧೫. ಕೇಶವ ಶರ್ಮ, ೨೦೧೦, ಸ್ತ್ರೀವಾದಿ ಆಖ್ಯಾನ, ಪು.೯೩

೧೬. ಶಾಂತಾ ಇಮ್ರಾಪೂರ, ೨೦೦೭, ಸಾಹಿತ್ಯ ಸಂವೇದನೆ, ಪು.೧೪೪

೧೭. ಸುಮಿತ್ರಬಾಯಿ ಬಿ.ಎನ್., ೨೦೦೬, ಸ್ತ್ರೀವಾದ, ಪು.೧೦೦

೧೮. ಆಶಾದೇವಿ ಎಂ.ಎಸ್.,೨೦೧೧, ವೀಣಾ ಶಾಂತೇಶ್ವರ ವಾಚಿಕೆ, ಪು.೧೨

೧೯. ಕೇಶವಶರ್ಮ, ೧೯೯೩, ಸಾಹಿತ್ಯ ವಿಮರ್ಶೆ ೧೯೯೩, ರಹಮತ್ ತರೀಕೆರೆ(ಸಂ), ಪು.೯

೨೦. ಬಿದರಿ ಚಂದ್ರಕಲಾ, ೨೦೧೧, ಕೊಡಗಿನ ಗೌರಮ್ಮ ಮತ್ತು ತ್ರಿವೇಣಿಯವರ ಸಾಹಿತ್ಯ ಅವಲೋಕನ, ಶಾರದಾ ಮುಳ್ಳೂರು(ಸಂ), ಪು.೬೮

೨೧. ಆಶಾದೇವಿ ಎಂ.ಎಸ್.,೨೦೧೧, ವೀಣಾ ಶಾಂತೇಶ್ವರ ವಾಚಿಕೆ, ಪು.೧೨೪

೨೨. ಶ್ರೀಮತಿ ಎಚ್.ಎಸ್., ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪು.೨೮೭

೨೩. ಮಂಗಳಾ ಪ್ರಿಯದರ್ಶಿನಿ, ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ೧೯೫೦–೧೯೭೫ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ಶ್ರೀಮತಿ ಎಚ್.ಎಸ್.(ಸಂ), ಪು.೩೭೦

೨೪. ಶಾಂತಾ ಇಮ್ರಾಪೂರ, ೨೦೦೭, ಸಾಹಿತ್ಯ ಸಂವೇದನೆ, ಪು.೫

೨೫. ಅದೇ, ಪು.೬

೨೬. ಕಲಾವತಿ ಬಿ.ಜಿ., ೨೦೧೦, ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ, ಪು.೨೭

೨೭. ಸೀತಾಲಕ್ಷ್ಮಿ, ೨೦೦೪, ಮಾಸ್ತಿ ಅವರ ಕಥೆಗಳಲ್ಲಿ ಸ್ತ್ರೀ ಪ್ರತಿನಿಧೀಕರಣ, ಪು.೪೪

# ಅಧ್ಯಾಯ: ಮೂರು

# ಆಯ್ದ ಲೇಖಕಿಯರ ಕಥನಪರಂಪರೆ: ಸಾಹಿತ್ಯ ಚಿಂತನೆ ಹಾಗೂ ಗ್ರಹಿಕೆಯ ನೆಲೆಗಳು

೩.೧. ಪೀಠಿಕೆ

೩.೨. ವೈದೇಹಿ

೩.೩. ವೀಣಾ ಶಾಂತೇಶ್ವರ

೩.೪. ಗೀತಾ ನಾಗಭೂಷಣ

೩.೫. ಸಾರಾ ಅಬೂಬಕ್ಕರ್

೩.೬. ಬಿ.ಟಿ.ಲಲಿತಾನಾಯಕ್

## ಅಧ್ಯಾಯ: ಮೂರು

# ಆಯ್ದ ಲೇಖಕಿಯರ ಕಥನ ಪರಂಪರೆ: ಸಾಹಿತ್ಯ ಚಿಂತನೆ ಹಾಗೂ ಗ್ರಹಿಕೆಯ ನೆಲೆಗಳು

### ೩.೧. ಪೀಠಿಕೆ

ಸಾಹಿತ್ಯದಲ್ಲಿ ಕಾಲ್ಪನಿಕತೆಗಿಂತಲೂ ವಾಸ್ತವದ ಬದುಕಿಗೆ ಹೆಚ್ಚು ಮಹತ್ವ ಈ ಕಾರಣಕ್ಕಾಗಿಯೇ ಸಾಹಿತ್ಯವನ್ನು 'ಸಮಾಜದ ಪ್ರತಿಬಿಂಬ' ಎಂದು ಹೇಳಲಾಗಿದೆ. ಸಾಹಿತ್ಯ ಪ್ರಕಾರಗಳಲ್ಲಿ ಅತ್ಯಂತ ಜನಪ್ರಿಯವಾದುದು ಕಥಾಸಾಹಿತ್ಯ. ಬಹಳ ಹಿಂದೆ ಕಥೆಯೆಂದರೆ ಕೇವಲ ಧಾರ್ಮಿಕ, ಪೌರಾಣಿಕ, ಚಾರಿತ್ರಿಕ ಎಂಬ ಆಯಾಮಗಳಲ್ಲಿ ಗುರುತಿಸಲಾಗುತ್ತಿತ್ತು. ಆದರೆ ಆಧುನಿಕತೆಯ ಸಂದರ್ಭದಲ್ಲಿ ಹೊಸ ಸವಾಲು, ವಿನ್ಯಾಸಗಳೊಂದಿಗೆ ಕಥಾ ಸಾಹಿತ್ಯ ವಿಭಿನ್ನ ಸ್ವರೂಪವನ್ನು ಪಡೆದುಕೊಂಡಿದೆ. ಹಾಗೆಯೇ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಪರದಾಡಬೇಕಿದ್ದ ಸಂದರ್ಭದಲ್ಲಿ ಈ ಬಗೆಯ ಕಥಾಸಾಹಿತ್ಯದ ಮೂಲಕ ಮಹಿಳಾ ಸಾಹಿತ್ಯಕ್ಕೂ ಒಂದು ಪರಂಪರೆ ಸೃಷ್ಟಿಯಾಯಿತು. ಇಂತಹ ಪರಿವರ್ತನೆಯನ್ನು ಆ ಕಾಲದ ಲೇಖಕಿಯರ ಸಾಧನೆಯಾಗಿ ಗುರುತಿಸಬಹುದಾಗಿದೆ. ಮಹಿಳೆ ಮತ್ತು ಕಥೆಗೂ ಇರುವ ಸಂಬಂಧ ಅವಿನಾಭಾವವಾದದ್ದು. "ಭಾರತೀಯ ಪರಂಪರೆಯಲ್ಲಿ ಕಥೆಗೆ ದೈವೀ ನೆಲೆಯನ್ನು ಕಲ್ಪಿಸಲಾಗಿದೆ. ಕಥೆ ಹೇಳುವ ಕ್ರಿಯೆ ಮೊದಲು ಹುಟ್ಟಿದ್ದು ಮಹಿಳೆಯರಿಂದಲೇ. ಕಥೆ ಇಂದು ಇಪ್ಪತ್ತನೆಯ ಶತಮಾನದಲ್ಲಿ ಒಂದು ಗಂಭೀರ ಸಾಹಿತ್ಯ ಪ್ರಕಾರವೆಂದು ಕನ್ನಡದಲ್ಲಿ ನೆಲೆಗೊಂಡಿದೆ."[೧] ಆದ್ದರಿಂದಲೇ ನಮ್ಮ ಚರಿತ್ರೆಯಲ್ಲಿ ಅಜ್ಜಿ ಕಥೆಗಳೆಂದು ಜನಪ್ರಿಯವಾಗಿ ಮನರಂಜನೆ, ಬಿಡುವಿನ ಸಮಯದ ಸದುಪಯೋಗದಂತಹ ಉದ್ದೇಶಗಳಿಂದ ಹಲವಾರು ಕಥೆಗಳು ಬಂದಿವೆ. ಇಲ್ಲಿ ಕಥೆಗಳ ಸೂತ್ರಧಾರಿಣಿ ಹೆಚ್ಚಾಗಿ ಅಜ್ಜಿಯೇ ಆಗಿದ್ದು, ಇವೆಲ್ಲ ಅಭಿವ್ಯಕ್ತಿ ಮೌಖಿಕವಾಗಿರುತ್ತಿತ್ತು. ಆದರೆ, ಆಧುನಿಕತೆಯ ಸಂದರ್ಭದಲ್ಲಿ ಅಕ್ಷರಲೋಕಕ್ಕೆ ಎಂದು ಮಹಿಳೆಯರ ಪ್ರವೇಶವಾಯಿತೋ ಅಲ್ಲಿಂದ ಕಥೆಗಳು ಲಿಖಿತರೂಪವನ್ನು ತಾಳಿದ್ದೂ ಅಲ್ಲದೆ, ಉದ್ದೇಶಗಳ ಸ್ವರೂಪವೂ ಬದಲಾಯಿತು.

ಅದರಲ್ಲೂ ೭೦ರ ದಶಕದ ಸಂದರ್ಭವನ್ನು ಗಮನಿಸಿ ಹೇಳುವುದಾದರೆ ಈ ಅವಧಿಯಲ್ಲಿ ಅಪಾರ ಸಂಖ್ಯೆಯ ಲೇಖಕಿಯರು ತಮ್ಮ ಕೃತಿಗಳ ಮೂಲಕ ಜನಪ್ರಿಯತೆಯನ್ನು ಗಳಿಸಿಕೊಂಡಿದ್ದರು. ಈಗಾಗಲೇ ಲೇಖಕಿಯರ ಬರವಣಿಗೆಗಳು 'ಜನಪ್ರಿಯ ಸಾಹಿತ್ಯ', 'ಸಿನಿಮಾ ಸಾಹಿತ್ಯ', 'ಮನರಂಜನಾ ಸಾಹಿತ್ಯ' ಎಂಬ ವಿಶೇಷಣಗಳಿಗೆ ಒಳಗಾಗಿದ್ದವು. ಇಂತಹ ಸಂದರ್ಭದಲ್ಲಿ ಕೆಲವು ಲೇಖಕಿಯರು ಸಂವೇದನಾ ಪೂರ್ಣ, ಗಂಭೀರ ನೆಲೆಯ ಕಥೆ–ಕಾದಂಬರಿಗಳನ್ನು ಸಹ ರಚಿಸಿದರು. ಈ ಲೇಖಕಿಯರ ಕಥಾಸಾಹಿತ್ಯವನ್ನು ಗಮನಿಸಿದಾಗ ಅವರ ಸುತ್ತಮುತ್ತಲಿನ ವಿದ್ಯಮಾನಗಳು, ವ್ಯಕ್ತಿ–ವಿಷಯಗಳೇ ಕಥೆಯ ವಸ್ತುಗಳಾಗಿ, ಪಾತ್ರಗಳಾಗಿ ನಿಲ್ಲುವ ಉದಾಹರಣೆಗಳು ಕಂಡುಬರುತ್ತವೆ.

ಇದನ್ನೇ ಪ್ರಸ್ತುತ ಪ್ರಬಂಧದ ಅಧ್ಯಯನಕ್ಕೆ ಅಳವಡಿಸಿಕೊಂಡು ಹೇಳುವುದಾದರೆ, ಲೇಖಕಿಯರ ವೈಯಕ್ತಿಕ ಜೀವನ, ಸುತ್ತಲಿನ ಸಾಮಾಜಿಕ ಪರಿಸರ, ಗ್ರಹಿಕೆಗೆ ಬಂದ ಸೂಕ್ಷ್ಮ ಸಂವೇದನೆಗಳು ಅವರ ಬರವಣಿಗೆಯನ್ನು ಪ್ರಭಾವಿಸಿರುತ್ತವೆ. ಇವೆಲ್ಲವೂ ಆಯಾ ಕೃತಿಯನ್ನು ಓದಿ ಅರ್ಥೈಸಿಕೊಳ್ಳುವ ಸಂದರ್ಭದಲ್ಲಿ ಓದುಗರ ಅನುಭವಕ್ಕೂ ಬರುವಂತಹದ್ದಾಗಿರುತ್ತವೆ. ಹೀಗೆ ಒಂದು ಕೃತಿಯನ್ನು ಓದಿ ಅರ್ಥೈಸಿಕೊಳ್ಳುವಲ್ಲಿ ಎಚ್.ಎಸ್.ಶ್ರೀಮತಿಯವರು ಕೆಲವು ವಿಧಗಳನ್ನು ಗುರುತಿಸುತ್ತಾರೆ. ಅವುಗಳಲ್ಲಿ "ಒಂದು ಕೃತಿಯನ್ನು ಕೃತಿಕಾರನ ಜೀವನದ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳುವುದು ಒಂದು ಬಗೆಯಾದರೆ, ಕೃತಿಯನ್ನು ಆ ಕಾಲದ ಚಾರಿತ್ರಿಕ ಹಿನ್ನೆಲೆಯಲ್ಲಿ ನೋಡುವುದು. ಅಂದರೆ ಅಂದಿನ ಆರ್ಥಿಕ, ಸಾಮಾಜಿಕ, ರಾಜಕೀಯ ಸಂದರ್ಭಗಳನ್ನಿಟ್ಟು ಗ್ರಹಿಸುವುದು ಮತ್ತೊಂದು ಬಗೆ. ಈ ಹಿನ್ನೆಲೆಯಲ್ಲಿ ಲೇಖಕಿಯರ ಕಥಾಸಾಹಿತ್ಯದ ಅಧ್ಯಯನ ಮತ್ತು ವಿಶ್ಲೇಷಣೆಯ ಸಂದರ್ಭಕ್ಕೆ ಅವರ ವೈಯಕ್ತಿಕ ಜೀವನ ಹಾಗೂ ಹಿನ್ನೆಲೆಯ ಪರಿಚಯ, ಪ್ರಭಾವಿಸಿದ ಪರಿಸರ–ಪ್ರೇರಣೆ ಇತ್ಯಾದಿಗಳ ತಿಳುವಳಿಕೆ ಮುಖ್ಯವಾಗುತ್ತದೆ."[೨]

ಶ್ರೀಮತಿಯವರ ಮೇಲಿನ ಹೇಳಿಕೆಯಂತೆ ಕೃತಿಕಾರರ ಜೀವನ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಕೃತಿಯನ್ನು ಗಮನಿಸುವುದು ಒಪ್ಪುವ ವಿಚಾರವಾಗಿದೆ. ಕಾರಣ ಈ ಬಗೆಯ ಗ್ರಹಿಕೆಯ ಮೂಲಕ ಪ್ರತಿಯೊಬ್ಬ ಲೇಖಕಿಯರ ವಿಭಿನ್ನ ದೃಷ್ಟಿಕೋನ ಮತ್ತು ಬರವಣಿಗೆಯ ವೈಶಿಷ್ಟ್ಯದ ಪರಿಚಯವೂ ಆಗುತ್ತದೆ. ಹಾಗಾಗಿ ಪ್ರಸ್ತುತ ಪ್ರಬಂಧದ ಈ ಅಧ್ಯಾಯದಲ್ಲಿ ಅಧ್ಯಯನ ಒಳಗೊಂಡ ಪ್ರಾತಿನಿಧಿಕ ಲೇಖಕಿಯರಾದ ವೈದೇಹಿ, ವೀಣಾ ಶಾಂತೇಶ್ವರ, ಗೀತಾ ನಾಗಭೂಷಣ, ಸಾರಾ ಅಬೂಬಕ್ಕರ್, ಬಿ.ಟಿ.ಲಲಿತಾ ನಾಯಕ್ ಅವರ ನಿರ್ವಚನವನ್ನು ಸಾಹಿತ್ಯ ಚಿಂತನೆ ಮತ್ತು ಗ್ರಹಿಕೆಯ ಹಿನ್ನಲೆಯಲ್ಲಿ ಕಟ್ಟಿಕೊಡಲಾಗಿದೆ. ಈ ವೇಳೆ ಪ್ರತಿಯೊಬ್ಬ ಲೇಖಕಿಯರ ವೈಯಕ್ತಿಕ ಜೀವನದ ಸಂಕ್ಷಿಪ್ತ ಪರಿಚಯದ ಹಿನ್ನೆಲೆಯಲ್ಲಿ ಅವರ ಬರವಣಿಗೆಯ ವಿಶೇಷತೆ, ಸಾಂಸ್ಕೃತಿಕ ಸಂದರ್ಭ, ಆಲೋಚನಾ ವಿಧಾನವನ್ನು ಹೇಳುವುದಾಗಿದೆ.

## ೩.೨. ವೈದೇಹಿ

ಕರಾವಳಿ ಭಾಗದ ಜನಪ್ರಿಯ ಲೇಖಕಿಯಾದ ವೈದೇಹಿಯವರು ಬದುಕಿನ ಸಂಕೀರ್ಣತೆಯನ್ನು ತುಂಬಾ ಆಸಕ್ತಿ ಮತ್ತು ಕುತೂಹಲಗಳಿಂದ ಕಂಡವರು. ಆದ್ದರಿಂದಲೇ ಮನುಷ್ಯ ಸಹಜವಾದ ಸಂಬಂಧ ಮತ್ತು ಭಾವನೆಗಳನ್ನು ತುಂಬಾ ಸೃಜನಶೀಲವಾಗಿ ತಮ್ಮ ಸಾಹಿತ್ಯದಲ್ಲಿ ನಿರೂಪಿಸಿದರು. ಅವರು ಅಂದಿನ ಕಾಲಮಾನಕ್ಕೆ ಜಾರಿಯಲ್ಲಿದ್ದ ಯಾವುದೇ ಸಾಹಿತ್ಯ ಚಳುವಳಿಯಲ್ಲಿ ಗುರುತಿಸಿ ಕೊಂಡವರಲ್ಲ. ಬದಲಾಗಿ ತಮ್ಮದೇ ವಿಶಿಷ್ಟ ಧ್ವನಿಪೂರ್ಣತೆ, ಕಥಾತಂತ್ರ, ವಸ್ತು, ಹೆಣ್ಣಿನ ಜೀವನದ ಒಳಸ್ವರೂಪವನ್ನು ತಮ್ಮ ಸಾಹಿತ್ಯದಲ್ಲಿ ಅಳವಡಿಸಿಕೊಂಡರು. ಜೀವನದ ಆಂತರಿಕ ಅನುಭವಗಳ ವಿವಿಧ ಆಯಾಮಗಳನ್ನು ಗ್ರಹಿಸುವ ವೈದೇಹಿಯವರು ತಮ್ಮ ಸಮಕಾಲೀನ ಲೇಖಕಿಯರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ.

೧೯೪೫ರ ಫೆಬ್ರವರಿ ೧೨ರಂದು ದಕ್ಷಿಣ ಕನ್ನಡದ ಕುಂದಾಪುರದಲ್ಲಿ ಜನಿಸಿದರು. ತಂದೆ ಎ.ವಿ.ಎನ್.ಹೆಬ್ಬಾರ್ ಹಾಗೂ ತಾಯಿ ಮಹಾಲಕ್ಷ್ಮಿಯಮ್ಮ. 'ವೈದೇಹಿ' ಅವರ ಕಾವ್ಯನಾಮವಾದರೆ ನಿಜವಾದ ಹೆಸರು 'ಜಾನಕಿ'. ತುಂಬಾ ಸಂಪ್ರದಾಯಸ್ಥ ವೈದಿಕ ಕುಟುಂಬ ಅವರದು. "ಕೆಲಸವೇ ವೇದವೆನ್ನುವ ಅವರ ತಾಯಿಗೆ ಹೆಣ್ಣುಮಕ್ಕಳು ಓದುತ್ತ ಕೂಡುವುದು ಪ್ರಪಂಚ ಮರೆತಂತೆ ಅಪರಾಧ."[೩] ಆದರೆ ವೈದೇಹಿಯವರಿಗೆ ಬರವಣಿಗೆಯಲ್ಲಿ ಎಲ್ಲಿಲ್ಲದ ಆಸಕ್ತಿ. ಹೀಗಾಗಿ ಮದುವೆಯ ನಂತರದಲ್ಲಿ ಅವರ ಆಸಕ್ತಿಯನ್ನು ಪ್ರೋತ್ಸಾಹಿಸಿದವರು ಮಾವ ಮತ್ತು ಪತಿ ಶ್ರೀನಿವಾಸಮೂರ್ತಿಯವರು. ಶಿವಮೊಗ್ಗದಲ್ಲಿ ಕುಟುಂಬದೊಂದಿಗೆ ನೆಲೆಯೂರಿದಾಗ ಒದಗಿದ ಸಾಂಸ್ಕೃತಿಕ ವಾತಾವರಣ, ಪ್ರಸಿದ್ಧ ಬರಹಗಾರರ ಪರಿಚಯ, ಒತ್ತಾಸೆಗಳು ಬರೆಯಲು ಪ್ರೇರೇಪಿಸಿದವು. ಕೌಟುಂಬಿಕ, ಸಾಮಾಜಿಕ ವಲಯದಲ್ಲಿ ತುಂಬಾ ಆಪ್ತವಾಗಿ ಬದುಕಿದ ವೈದೇಹಿಯವರು ವಿವಿಧ ಸ್ತರದಲ್ಲಿ ಜೀವಿಸುವ ಹೆಣ್ಣಿನ ಕಷ್ಟ-ನಷ್ಟ, ನೋವು-ನಲಿವು ಇತ್ಯಾದಿಗಳನ್ನು ತುಂಬಾ ಹತ್ತಿರದಿಂದ ಕಂಡವರು. ಹಾಗಾಗಿಯೇ ಅವರು ಸ್ತ್ರೀಲೋಕದ ಅನುಭವ ಮತ್ತು ಸಾಕ್ಷಿ ಪ್ರಜ್ಞೆಗಳನ್ನಿಟ್ಟುಕೊಂಡು ಬಹುತೇಕ ಬರವಣಿಗೆಯನ್ನು ರೂಪಿಸಿದವರಾಗಿದ್ದಾರೆ.

### ೩.೨.೧. ವೈದೇಹಿ: ಸಾಹಿತ್ಯಿಕ ಸೃಜನಶೀಲತೆ

ಆಧುನಿಕ ಕನ್ನಡ ಸಾಹಿತ್ಯದ ನವ್ಯೋತ್ತರ ಸಂದರ್ಭದಲ್ಲಿ ವೈದೇಹಿ ಬರವಣಿಗೆಯನ್ನು ಆರಂಭಿಸಿದರು. ತಮ್ಮ ವಿಭಿನ್ನ ಕಥೆಗಳ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶ ಪಡೆದರು. ಕಥಾ ಸಾಹಿತ್ಯ ಮಾತ್ರವಲ್ಲದೆ ಅನುವಾದ, ಮಕ್ಕಳ ಸಾಹಿತ್ಯ, ಕವನ ಸಂಕಲನ, ಅಂಕಣಬರಹ, ನೆನಪಿನ ಸಂಗ್ರಹ ಹೀಗೆ ಬೇರೆ ಬೇರೆ ಸಾಹಿತ್ಯ ಪ್ರಕಾರಗಳಲ್ಲಿಯೂ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

**ಕಥಾ ಸಂಕಲನಗಳು**

- ಮರ-ಗಿಡ-ಬಳ್ಳಿ(೧೯೭೯)
- ಅಂತರಂಗದ ಪುಟಗಳು(೧೯೮೪)
- ಗೋಲ(೧೯೮೬)
- ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು(೧೯೯೧)
- ಅಮ್ಮಚ್ಚಿಯೆಂಬ ನೆನಪು(೨೦೦೦)
- ಕ್ರೌಂಚ ಪಕ್ಷಿಗಳು(೨೦೦೫)
- ಅಲೆಗಳಲ್ಲಿ ಅಂತರಂಗ(೨೦೦೬)

  (೧೯೭೯ರಿಂದ ೨೦೦೪ರ ವರೆಗಿನ ಕಥೆಗಳ ಸಂಗ್ರಹ)
- ಕತೆ ಕತೆ ಕಾರಣ(೨೦೧೬)

**ಕಾದಂಬರಿ**

- ಅಸ್ಪೃಶ್ಯರು(೧೯೯೨)

**ಕವನಗಳು**

- ಬಿಂದುಬಿಂದಿಗೆ(೧೯೯೦)
- ಪಾರಿಜಾತ(೧೯೯೯)
- ಹೂವ ಕಟ್ಟುವ ಕಾಯಕ(೨೦೧೧)

**ಪ್ರಬಂಧ ಸಂಕಲನ**

- ಮಲ್ಲಿನಾಥನ ಧ್ಯಾನ(೧೯೯೬)(ಲಂಕೇಶ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಸಂಗ್ರಹ)
- ಜಾತ್ರೆ(೧೯೯೮)(ಸ್ಮೃತಿಕಥನ)
- ಮೇಜು ಮತ್ತು ಬಡಗಿ(೨೦೦೭)(ಲೇಖನ, ಕಥೆ, ಸಂದರ್ಶನ, ಅನುವಾದಗಳ ಮಿಶ್ರ ಸಂಗ್ರಹ)

**ನೆನಪುಗಳ ಸಂಗ್ರಹ**

- ಸೇಡಿಯಾಪು ನೆನಪುಗಳು(೧೯೯೬)(ಸೇಡಿಯಾಪು ಕೃಷ್ಣಭಟ್ಟರ ನೆನಪುಗಳ ಸಂಗ್ರಹ)
- ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು(೧೯೮೪)(ಕೋ.ಲ.ಕಾರಂತರ ಬದುಕಿನ ನೆನಪುಗಳ ಸಂಗ್ರಹ)
- ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ(೨೦೦೩)(ದಿ॥ ಬಿ.ವಿ.ಕಾರಂತರ ಬದುಕಿನ ನೆನಪು ಅನುಭವಗಳ ಕಥನ)
- ಮುಂತಾದ ಕೆಲವು ಪುಟಗಳು(೨೦೦೮)(ಲೇಖಕಿ ಶ್ರೀಮತಿ ಸರಸ್ವತಿಬಾಯಿ ರಾಜವಾಡೆ ಯವರ ಬದುಕಿನ ಕಥನ)

**ಅನುವಾದ**

- ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ(೧೯೯೪)
  (ಕಮಲಾದೇವಿ ಚಟ್ಟೋಪಾಧ್ಯಾಯ ಬರೆದ 'Indian Women's struggle for freedom'ನ ಅನುವಾದ
- ಬೆಳ್ಳಿಯ ಸಂಕೋಲೆಗಳು(೧೯೮೫)
  (ಭಾರತೀಯ ಮಹಿಳೆಯರ ಸ್ಥಿತಿಗತಿ ಕುರಿತು ಶ್ರೀಮತಿ ಮೈತ್ರೇಯ ಮುಖ್ಯೋಪಾಧ್ಯಾಯ ಬರೆದ 'Silver Shackles' ಕೃತಿಯ ಅನುವಾದ)
- ಸಂಗೀತ ಸಂವಾದ(೧೯೯೯)
  (ಸಂಗೀತ ವಿದ್ವಾಂಸ ಡಾ.ಭಾಸ್ಕರ್ ಚಂದಾವರ್ಕರ್ ಅವರ ಉಪನ್ಯಾಸಗಳು)
- ಸೂರ್ಯ ಕಿನ್ನರಿಯರು(೧೯೯೬)
  (ಸ್ವಪ್ನ ದತ್ತ ಅವರ 'The Sun Fairies' ಅನುವಾದ)

**ಮಕ್ಕಳ ನಾಟಕಗಳು**

- ಐದು ಮಕ್ಕಳ ನಾಟಕಗಳು(೧೯೯೨)
  (ಧಾಂ ಧೂಂ ಸುಂಟರಗಾಳಿ, ಮೂಕನ ಮಕ್ಕಳು, ಗೊಂಬೆ ಮ್ಯಾಕ್ಬೆತ್, ಢಾಣಾ ಢಂಗುರ, ನಾಯಿಮರಿ)
- ಮೂರು ಮಕ್ಕಳ ನಾಟಕಗಳು(೧೯೯೭)
  (ಸೂರ್ಯಬಂದ, ಝುಂ ಝಾಂ ಆನೆ ಮತ್ತು ಪುಟ್ಟ, ಕೋಟು ಗುಮ್ಮ)
- ಎರಡು ಮಕ್ಕಳ ನಾಟಕಗಳು(೨೦೦೨)
  (ಹಕ್ಕಿ ಹಾಡು, ಅರ್ಧಚಂದ್ರ ಮಿಠಾಯಿ)

- ಸೋಮಾರಿ ಓಲ್ಯಾ(೨೦೦೪)
- ಮಕ್ಕಳ ಎರಡು ನಾಟಕಗಳು(೨೦೦೯)
  (ಅಳಿಲು ರಾಮಾಯಣ ಮತ್ತು ಸತ್ರು ಅಂದ್ರೆ ಸಾಯ್ತಾರಾ?)
- ಆನೆ ಬಂತೋ ಆನೆ(೨೦೧೫)
- ರಾಜಾ ಲಿಯರ್(೨೦೧೫)

**ಅಂಕಣ ಬರಹ**

- ಹರಿವ ನೀರು(೨೦೧೨)

**ಸಂಪಾದನೆ**

- ಕೊಡಗಿನ ಗೌರಮ್ಮ

**೩.೨.೨. ಸಾಹಿತ್ಯ ರಚನೆಯ ಸಂದರ್ಭ ಮತ್ತು ಪ್ರತಿರೋಧದ ಮಾದರಿ**

ಮಹಿಳೆಗೆ ಬರವಣಿಗೆ ಮತ್ತು ಅಭಿವ್ಯಕ್ತಿ ಒಂದು ಸವಾಲಾಗಿ ಪರಿಣಮಿಸಿದ ದಿನಗಳಿದ್ದದ್ದಿವೆ. ಇವುಗಳನ್ನು ಮೀರಿಯೂ ಬರಹ, ಸೃಜನಶೀಲ ಚಿಂತನೆಗಳಲ್ಲಿ ಮಹಿಳೆಯರು ತೊಡಗಿಕೊಳ್ಳುತ್ತಲೇ ಬಂದಿದ್ದಾರೆ. ಇವರಲ್ಲಿ ವೈದೇಹಿಯೂ ಒಬ್ಬರು. ವೈದೇಹಿಯವರು ಬರೆಯಲು ಪ್ರಾರಂಭಿಸಿದ್ದು ಎಪ್ಪತ್ತರ ದಶಕದ ಮಧ್ಯಭಾಗದಲ್ಲಿ. ಈ ವೇಳೆಗೆ ಮಹತ್ವದ ಬೆಳವಣಿಗೆ ಎಂಬಂತೆ ಅಧಿಕ ಸಂಖ್ಯೆಯಲ್ಲಿ ಹೆಣ್ಣುಮಕ್ಕಳು ಬರೆಯಲಾರಂಭಿಸಿದ್ದರು. ಇದೇ ಸಂದರ್ಭವನ್ನು ಕುರಿತಾಗಿ "ಎಂಬತ್ತರ ದಶಕದಲ್ಲಿ ಮಹಿಳಾ ಸಾಹಿತ್ಯ ತನ್ನ ಸ್ವತಂತ್ರ ಅಸ್ತಿತ್ವ ಸ್ಥಾಪಿಸಿಕೊಳ್ಳುವಷ್ಟು ಗಟ್ಟಿಯಾಗಿ ಬೆಳೆದಿತ್ತು. ಪ್ರತಿಭಾ ನಂದಕುಮಾರ್, ನೇಮಿಚಂದ್ರ, ವೈದೇಹಿ, ಸರ್ವಮಂಗಳಾ, ವಿಜಯಾದಬ್ಬೆ ಮುಂತಾದವರು ಯಾವ ಪ್ರಕಾರದಲ್ಲೇ ಬರೆಯಲಿ ಇದು ಸಂವೇದನಾಶೀಲೆಯಾದ ಹೆಣ್ಣೊಬ್ಬಳ ಬರಹ ಎಂದು ಹೇಳಿಬಿಡಬಹುದಾದಷ್ಟು ಸ್ತ್ರೀ ವಿಶಿಷ್ಟ ಪ್ರಜ್ಞೆ ಗಾಢವಾಯಿತು"[೪] ಎಂದು ಟಿ.ಪಿ.ಅಶೋಕರವರು ವಿವರಿಸುತ್ತಾರೆ. ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆಯರ ಬರವಣಿಗೆಗೆ ಪ್ರಾಮುಖ್ಯತೆ ಒದಗಿಬಂದಿತು. ಕಥೆ, ಕವನ, ಕಾದಂಬರಿ, ವಿಚಾರ ಸಾಹಿತ್ಯ ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ಸ್ತ್ರೀ ಸಂವೇದನೆಯನ್ನು ನಿಷ್ಠವಾಗಿರಿಸಿ ಲೇಖಕಿಯರು ಬರವಣಿಗೆಯನ್ನು ಮುಂದುವರಿಸಿದರು. ಈ ಮೂಲಕ ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸದೊಂದು ಲೇಖಕಿಯರ ಪರಂಪರೆ ನೆಲೆಗೊಳ್ಳುವಂತಾಯಿತು. ಈ ಪರಂಪರೆಯಲ್ಲಿ ಒಬ್ಬರಾಗಿ ಗುರುತಿಸಿಕೊಂಡವರು ವೈದೇಹಿ. ಅವರು ಕಥಾಸಾಹಿತ್ಯ ರಚನೆಗೆ ತೊಡಗುವ ಮುನ್ನ ಕನ್ನಡ ಸಾಹಿತ್ಯದ ಪರಿಸರ ಹೇಗಿತ್ತೆಂಬುದನ್ನು ಬಿ.ಎನ್.ಸುಮಿತ್ರಾಬಾಯಿಯವರು ಹೀಗೆ ಹೇಳುತ್ತಾರೆ. "ತುರ್ತು ಪರಿಸ್ಥಿತಿಯ ನಂತರದಲ್ಲಿ ಹೊಸ ರಾಜಕೀಯ, ಸಾಮಾಜಿಕ ಅರಿವು ಜನರನ್ನು ಎಚ್ಚರಿಸ ತೊಡಗಿದಾಗ ದಲಿತ ಬಂಡಾಯ

ಸಾಹಿತ್ಯ ಚಳುವಳಿಗಳು ತಲೆದೋರಿದವು. ಸಮಾಜದ ಎಲ್ಲಾ ಸ್ತರದ ಅವಕಾಶ ವಂಚಿತ ಜನರು ಹತ್ತಿಕ್ಕಲ್ಪಟ್ಟ ಗುಂಪುಗಳವರು ತಮ್ಮ ಅನುಭವಗಳಿಗೆ ಸಾಹಿತ್ಯದಲ್ಲಿ ಅಭಿವ್ಯಕ್ತಿ ಅಥವಾ ಬಿಡುಗಡೆ ಕಂಡುಕೊಳ್ಳುವ ಧೋರಣೆ ತುಂಬ ಪ್ರಭಾವಶಾಲಿಯಾಗಿ ಬೆಳೆಯಿತು. ಇದರ ಫಲವಾಗಿ ಅದುವರೆಗೂ ಕನ್ನಡ ಸಾಹಿತ್ಯ ಕಂಡಿರದಂಥ ಜನಜೀವನ ಅನುಭವದ ಮಗ್ಗಲುಗಳು ಆಯಾ ಜನರದೇ ಭಾಷೆಯೊಂದಿಗೆ ಕನ್ನಡದ ಮುಖ್ಯ ಸಾಹಿತ್ಯ ವಾಹಿನಿಗೆ ಬಂದು ಕೂಡಿಕೊಳ್ಳ ತೊಡಗಿದವು. ಮುಸ್ಲಿಮರು, ದಲಿತರು ಹಾಗೂ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಬರಹದ ಲೋಕಕ್ಕೆ ಬರಲು ಅನುಕೂಲಕರವಾದ ವಾತಾವರಣ ಅಂದು ನಿರ್ಮಾಣವಾಗಿತ್ತು. ಮಹಿಳಾ ಜಾಗೃತಿ, ಮಹಿಳಾ ವಿಮೋಚನಾ ಚಳುವಳಿಗಳು ರೂಪಗೊಳ್ಳತೊಡಗಿದ್ದು, ಮಹಿಳೆಯರ ಬರಹಗಳಲ್ಲಿ ಹೊಸ ಸಂವೇದನೆ ಎಚ್ಚರಗಳು ತಲೆದೋರಿದವು. ಮಹಿಳಾ ಸಾಹಿತ್ಯಕ್ಕೆ ವಿಶಿಷ್ಟವಾದ ಸ್ವಂತಿಕೆ, ಘನತೆ ಹಾಗೂ ಸ್ವತಂತ್ರ ಅಸ್ತಿತ್ವಗಳು ದೊರೆತದ್ದು ಎಪ್ಪತ್ತು-ಎಂಬತ್ತರ ದಶಕಗಳ ನಡುವೆ ಎದ್ದು ತೋರಿ ಬರುವ ಒಂದು ಬಹುಮಹತ್ವದ ಸಂಗತಿಯಾಗಿದೆ."[೫] ೧೯೭೫ರ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಸಮಾಜದ ವಿವಿಧ ವಲಯಗಳಲ್ಲಿ ದಮನಕೊಳ್ಳಪಟ್ಟ ವಿವಿಧ ಸಮುದಾಯಗಳು ವಿಮೋಚನೆಯ ಹಾದಿಯನ್ನು ತುಳಿದವು. ಇದರ ಫಲವಾಗಿ ಹಲವಾರು ಹೋರಾಟಗಳು ಮುನ್ನೆಲೆಗೆ ಬಂದು ಶೋಷಿತ ಸಮುದಾಯಗಳನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನಗಳಾದವು. ಸಾಹಿತ್ಯ ಕ್ಷೇತ್ರದಲ್ಲಿಯೂ ಅದುವರೆಗೆ ಪ್ರಾಮುಖ್ಯತೆಯನ್ನು ಪಡೆದುಕೊಳ್ಳದ ವಸ್ತು-ವಿಚಾರಗಳು ಬರವಣಿಗೆಯಲ್ಲಿ ಪ್ರಚುರಗೊಂಡವು. ಈ ಸನ್ನಿವೇಶವನ್ನು ವೈದೇಹಿ ಮಾತ್ರವಲ್ಲದೆ ಪ್ರಸ್ತುತ ಮಹಾಪ್ರಬಂಧದ ಇತರೆ ನಾಲ್ಕು ಜನ ಲೇಖಕಿಯರ ಸಂದರ್ಭಕ್ಕೂ ಅನ್ವಯಿಸಿಕೊಳ್ಳಬಹುದಾಗಿದೆ. ಮೇಲೆ ವಿವರಿಸಿದ ಈ ಎಲ್ಲ ಸನ್ನಿವೇಶಗಳ ನಡುವೆ ತಮ್ಮ ವಿಶಿಷ್ಟ ಬರಹಗಳ ಮೂಲಕ ವೈದೇಹಿಯವರು ಗಮನ ಸೆಳೆದರು.

ವೈದೇಹಿಯವರ ಕಥಾಸಾಹಿತ್ಯದ ವೈಶಿಷ್ಟ್ಯ ಕುರಿತು ಹೇಳುವುದಾದರೆ ಇವರ ಎಲ್ಲ ಕಥೆ-ಕಾದಂಬರಿಗಳ ಕೇಂದ್ರ ಪಾತ್ರ ಹೆಣ್ಣು. ಇಲ್ಲಿ ಹೆಣ್ಣನ್ನು ಏಕಮುಖವಾಗಿ ಸ್ಥಿರಮಾದರಿಯಲ್ಲಿಟ್ಟು ಅವರು ನೋಡುವುದಿಲ್ಲ. ಹಾಗೆಯೇ ಕಥೆಗಳಲ್ಲಿ ಪಾತ್ರಗಳಾಗಿ ಬರುವ ಮಹಿಳೆಯರು ಎಲ್ಲಾ ವಯೋಮಾನ ಮತ್ತು ವಿವಿಧ ಸ್ತರಗಳಿಂದ ಬಂದವರಾಗಿದ್ದಾರೆ. ವ್ಯವಸ್ಥೆಗಿಂತಲೂ ವ್ಯಕ್ತಿ ಮುಖ್ಯ ಎಂದು ಭಾವಿಸುವ ವೈದೇಹಿಯವರು ವಿವಾಹ, ಕುಟುಂಬ, ಜಾತಿಯಂತಹ ವ್ಯವಸ್ಥೆಗಳನ್ನು ತುಂಬಾ ಸೂಕ್ಷ್ಮವಾಗಿ ಕಾಣುತ್ತಾರೆ. ಈ ಕಾರಣದಿಂದಲೇ ಅವರ ಕಥೆಗಳಲ್ಲಿ ಒಂದು ಮಾನವೀಯ ಪ್ರಜ್ಞೆಯನ್ನು, ಸೂಕ್ಷ್ಮ ಸಂವೇದನೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

ವೈದೇಹಿಯವರು ತಮ್ಮ ಮೊದಲ ಹಂತದ ಕಥೆಗಳಾದ 'ಸಂಸಾರ', 'ವರ್ತುಲ', 'ಮರ ಗಿಡ ಬಳ್ಳಿ' ಮುಂತಾದವುಗಳಲ್ಲಿ ಆರಂಭಿಕ ಕಾಲದ ಲೇಖಕಿಯರ ಕಥಾ ದಾಟಿಯನ್ನು

ಅನುಸರಿಸಿದ್ದಾರೆ ಎನ್ನಿಸುತ್ತದೆ. ಈ ಕಾರಣಕ್ಕಾಗಿ "ಹೆಣ್ಣಿನ ಬದುಕನ್ನು ಆಕೆಯ ಪರಿಸರ ಸ್ವಭಾವದ ಒಳಗಿನಿಂದಲೇ ಗ್ರಹಿಸುವ ವೈದೇಹಿಯವರು ಆರಂಭದ ಮಹಿಳಾ ಚಿಂತನೆಗಳ ದನಿಯಾಗಿ ಬಂದ ಶ್ಯಾಮಲಾದೇವಿ, ಗೌರಮ್ಮ, ಸಾವಿತ್ರಮ್ಮನವರ ಪರಂಪರೆ, ಸಂವೇದನಾಶೀಲತೆಗಳ ಮುಂದುವರೆದ ಸ್ಥಿತಿಯೊಂದರ ಪ್ರತಿನಿಧಿಯಾಗಿ ಕಾಣುತ್ತಾರೆ"[೬] ಎಂದು ಹೇಳುವ ಬಿ.ಎನ್.ಸುಮಿತ್ರಬಾಯಿಯವರ ಅಭಿಪ್ರಾಯವನ್ನು ಪೂರಕವಾಗಿ ಉಲ್ಲೇಖಿಸಬಹುದಾಗಿದೆ. ಹಾಗೆಯೇ ಪ್ರಾರಂಭದ ದಿನಗಳಲ್ಲಿ ಕಥೆಗಳನ್ನು ಬರೆಯುವಾಗಿನ ವೈದೇಹಿಯವರ ದೃಷ್ಟಿಕೋನ ಮನಸ್ಥಿತಿಯನ್ನು ಕುರಿತಾದ ವಿವರಣೆಯನ್ನು ಈ ಹೇಳಿಕೆ ನೀಡುತ್ತದೆ. ಅಲ್ಲದೆ ಆರಂಭಿಕ ಲೇಖಕಿಯರು ಚಿತ್ರಿಸಿದ ವಿವಾಹ ಮತ್ತು ಕುಟುಂಬ ಸಂಸ್ಥೆಯೊಳಗಿನ ವೈಧವ್ಯ, ಪರಿತ್ಯಕ್ತ ಹೆಣ್ಣಿನ ಸ್ಥಿತಿ, ಬಂಜೆತನ ಇತ್ಯಾದಿಗಳು ವೈದೇಹಿಯವರ ಕಥೆಗಳಲ್ಲಿ ಮುಂದುವರೆದಿರುವುದು ಸಹ ಇದಕ್ಕೆ ಮತ್ತಷ್ಟು ಸಮರ್ಥನೆ ಒದಗಿಸುತ್ತದೆ.

ಹೆಣ್ಣಿನ ಸೂಕ್ಷ್ಮ ಸಂವೇದನೆಗಳನ್ನು ಆಕೆಯ ದೃಷ್ಟಿಕೋನದಿಂದ ವಿವರಿಸುವ ಬಗೆ ವೈದೇಹಿಯವರದು. ಹಾಗಾಗಿ ಮುಂದಿನ ಕಥೆಗಳನ್ನು ಬರೆಯುವ ಹೊತ್ತಿಗೆ ಮತ್ತಷ್ಟು ಸೂಕ್ಷ್ಮ ಗ್ರಾಹಿಯಾಗುತ್ತಾರೆ. ಅದಕ್ಕಾಗಿ ಮೊದಲ ತಲೆಮಾರಿನ ಲೇಖಕಿಯರು ಸೃಷ್ಟಿಸಿದ 'ಭಾರತೀಯ ನಾರಿ' ಕಲ್ಪನೆಯನ್ನು ನಿರಾಕರಿಸಿ, ವಾಸ್ತವತೆ ಮತ್ತು ಆದರ್ಶಗಳ ನಡುವಿನ ಸಂಘರ್ಷವನ್ನು ಗುರುತಿಸಿದರು. ತಮ್ಮ ಪ್ರಾದೇಶಿಕ ಸಂಸ್ಕೃತಿಯನ್ನು ಪ್ರಧಾನ ಸಂಸ್ಕೃತಿಯೊಂದಿಗೆ ಮುಖಾಮುಖಿಯಾಗಿಸುತ್ತಲೇ ದಿನನಿತ್ಯದ ಬದುಕಿನಲ್ಲಿ ಆವರಿಸಿರುವ ಜಾತಿ, ಲಿಂಗ, ವರ್ಗ ತಾರತಮ್ಯಗಳನ್ನು ವಸ್ತುಗಳನ್ನಾಗಿಸಿ ಕಥೆಗಳನ್ನು ರೂಪಿಸಿದ್ದಾರೆ. ಹಾಗಾಗಿ ತಾವು ಬೆಳೆದ ವೈದಿಕ ಪರಿಸರದ ಜೊತೆಗೆ ಅಲ್ಲಲ್ಲಿ ಶೂದ್ರ, ದಲಿತ ಜಗತ್ತಿನ ಪಾತ್ರಗಳು ಕಥೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಹೊಸ ಪ್ರಪಂಚದಲ್ಲಿ ಕಾಣಿಸುವ ಹೆಣ್ಣುಗಳಿಗಿಂತ ಕೌಟುಂಬಿಕ ಜಗತ್ತಿನೊಳಗಿನ ಹೆಣ್ಣಿನ ಅನುಭವಗಳನ್ನು ಹೆಚ್ಚಾಗಿ ವಿಶ್ಲೇಷಿಸುತ್ತಾರೆ.

ವೈದೇಹಿಯವರ ಮತ್ತೊಂದು ಹಂತದ ಕಥೆಗಳಾದ 'ಚಿಪ್ಪು', 'ಬೀಳು–ಬೇರು' ಕಥೆಗಳು ಮದುವೆ ಎಂಬ ವ್ಯವಹಾರಿಕ ತಳಹದಿಯ ಮೇಲೆ ಕಾಣಿಸಿಕೊಳ್ಳುತ್ತವೆ. ವಿವಾಹ ಸಂಸ್ಥೆಯಲ್ಲಿ ಬದುಕುವ ಹೆಣ್ಣಿನ ಮಾನಸಿಕ ಸ್ಥಿತಿಯನ್ನು ಪರಿಚಯಿಸುವ ದೃಷ್ಟಿಯಿಂದ 'ಆತ', 'ಗೂಡಿನೊಳಗೊಂದು ಹಕ್ಕಿ', 'ಅಪರಿಚಿತ', 'ಒಂದು ಅಪರಾಧ ತನಿಖೆ' ಕಥೆಗಳು ವಿಶಿಷ್ಟವಾಗಿವೆ. 'ಅಕ್ಕು', 'ಚಂದಲೆ', 'ಸೌಗಂಧಿಯ ಸ್ವಗತಗಳು' ಮುಂತಾದವು ಲೈಂಗಿಕ ಸಂಬಂಧ, ಮೌಲ್ಯಗಳು, ಮಾನಸಿಕ ಸ್ಥಿತಿಗಳ ಸಂಘರ್ಷವನ್ನು ಕುರಿತಾಗಿ ಹೇಳುತ್ತವೆ. ಇಲ್ಲಿ ಕಥೆಯ ಹೊರಗಿನ ನಿರೂಪಣೆ ಮೃದು ಎಂಬಂತೆ ಕಂಡರೂ ಸಹ ಒಳ ವಿಚಾರಗಳು ಹೆಣ್ಣಿನ ಬದುಕಿನ ಕಟುವಾಸ್ತವವನ್ನು ತಿಳಿಸಿಕೊಡುತ್ತವೆ.

"ವೈದೇಹಿಯವರ ಕಥೆಗಳಲ್ಲಿ ವ್ಯಕ್ತಿತ್ವದ ಮಾನಸಿಕ ತಲ್ಲಣಗಳೇ ಮುಖ್ಯ ಅಂಶಗಳಾಗಿವೆ. ಒಡೆದು ತೋರುವ ಸಾಮಾಜಿಕತೆಗಿಂತ ಒಳ ಉಸಿರಾಗಿ ಬರುವ ಸ್ತ್ರೀತ್ವದ ಸಮಸ್ಯೆಗಳೇ ಇವರಿಗೆ ಮುಖ್ಯ. ಇವೆಲ್ಲ ವ್ಯಕ್ತಿಗತ ಅಪೇಕ್ಷೆಯ ಫಲ"[೭] ಎಂದು ಹೇಳುವ ಕೇಶವಶರ್ಮ ಅವರ ಮಾತಿನಂತೆ ವೈದೇಹಿಯವರು ತಮ್ಮ ಕಥೆಗಳಲ್ಲಿ ಹೊರಗೆ ತೋರುವ ಸಾಮಾಜಿಕ ಬದುಕಿಗಿಂತಲೂ, ಹೆಣ್ಣಿನ ಅಂತರ್ಗತ ಭಾವನೆಗಳಿಗೆ ಪ್ರಾಮುಖ್ಯತೆ ನೀಡಿರುವುದು ತಿಳಿದುಬರುತ್ತದೆ.

ವೈದೇಹಿಯವರ ಕಥೆಗಳ ಮತ್ತೊಂದು ವೈಶಿಷ್ಟ್ಯ ಅವರು ಬರವಣಿಗೆಯಲ್ಲಿ ಬಳಸುವ ಕಥಾತಂತ್ರವಾಗಿದೆ. ಹೇಳಬೇಕೆನಿಸುವ ವಿಷಯಗಳನ್ನು ವಿಭಿನ್ನ ಕಥಾ ತಂತ್ರ ಹಾಗೂ ಸಾಂಕೇತಿಕ ಪ್ರತಿಮೆಗಳನ್ನು ಬಳಸಿ ಹೇಳುತ್ತಾರೆ. 'ಗೋಲ', 'ಪಯಣ', 'ಪ್ರಶ್ನೋತ್ತರಗಳ ಆಚೆ ಈಚೆ', 'ಪುಟ್ಟ ಹಕ್ಕಿ ಮತ್ತು ಆಕಾಶರಾಯ' ಕಥೆಗಳು ಇದಕ್ಕೆ ಸಮರ್ಥ ಉದಾಹರಣೆಗಳಾಗಿವೆ. ಯಾವುದೇ ಅನ್ಯಾಯ, ಶೋಷಣೆ, ಅಸಮತೆಗಳನ್ನು ವ್ಯಕ್ತಪಡಿಸುವಾಗ ಅತಿ ವ್ಯಂಗ್ಯವಲ್ಲದ ದನಿಯಲ್ಲಿ ಹೇಳುವುದು ಅವರ ವೈಶಿಷ್ಟ್ಯ. ಬದುಕನ್ನು ಇಡಿಯಾಗಿ ಹಿಡಿಯಬೇಕು. ಹೇಳುವ ಎಲ್ಲ ನಿಜಗಳನ್ನು ಕಡಿತಗೊಳ್ಳದೆಯೇ ಹೇಳಬೇಕು. ಜಗತ್ತಿಗೆಲ್ಲ ಅವಶ್ಯಕವಾಗಿರುವ ಪ್ರೀತಿಯನ್ನು ಉಳಿಸಿಕೊಳ್ಳುವಂತಹ ಬಲ, ಆತ್ಮಶಕ್ತಿಗಳನ್ನು ಬರಹ ತುಡಿಯಬೇಕೆಂಬ ಆಶಯವನ್ನು ವೈದೇಹಿಯವರೇ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ 'ಅಂತರಂಗದ ಪುಟಗಳು' ಕಥಾಸಂಕಲನದ ಬೆನ್ನುಡಿಯಲ್ಲಿ ಪ್ರಸನ್ನರವರು "ವೈದೇಹಿಯವರನ್ನು ಮಹಿಳಾ ಲೇಖಕಿ ಎನ್ನುವ ಪರಿಮಿತ ಚೌಕಟ್ಟಿನಲ್ಲಿ ಇಟ್ಟು ನೋಡಿ ಮೆಚ್ಚಬೇಕಾದ ಪ್ರಮೇಯವಿಲ್ಲ. ಕನ್ನಡದ ಹೊಸಪೀಳಿಗೆಯ ಯಾವುದೇ ಸಣ್ಣ ಕಥೆಗಾರರಿಗೆ ಸರಿಸಾಟಿಯಾಗಬಲ್ಲದು ಇವರ ಕಥನ ತಂತ್ರ"[೮] ಎಂದಿದ್ದಾರೆ. ಕಾರಣ ಹೊಸ ತಲೆಮಾರಿನ ಅನೇಕ ಕಥೆಗಾರರು ಮತ್ತು ವೈದೇಹಿಯವರ ನಡುವಿನ ವಿಭಿನ್ನತೆಯನ್ನು ನಿರೂಪಿಸಲು ಸಾಧ್ಯವಾಗುವುದು ಅವರ ಕಥಾ ತಂತ್ರದ ಮೂಲಕವೇ ಆಗಿದೆ. ಹಾಗಾಗಿ ವೈವಿಧ್ಯಮಯ ಬರವಣಿಗೆ, ಕಥೆ, ತಂತ್ರ, ವಸ್ತು ವಿಶೇಷತೆಗಳನ್ನು ರೂಪಿಸಿರುವ ವೈದೇಹಿಯವರು ಈ ಕಾಲದ ಪ್ರಮುಖ ಲೇಖಕಿಯಾಗಿದ್ದಾರೆ.

**೩.೨.೩. ಕಥಾಸಾಹಿತ್ಯ ಮತ್ತು ಪ್ರಾದೇಶಿಕತೆ**

ವೈದೇಹಿಯವರು ಕಥಾಸಾಹಿತ್ಯ ಪ್ರಕಾರದಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡಿರುವ ಪ್ರಮುಖ ಕಾರಣಗಳಲ್ಲಿ ಅವರ ಪ್ರಾದೇಶಿಕ ಭಾಷಾ ಶೈಲಿಯ ಬಳಕೆಯೂ ಒಂದಾಗಿದೆ. ಪ್ರತಿಯೊಂದು ಪ್ರದೇಶವು ತನ್ನ ವಿಭಿನ್ನ ಪರಿಸರಕ್ಕೆ ತಕ್ಕಂತೆ ಭಾಷೆ, ಸಂಸ್ಕೃತಿ, ಆಚರಣೆ, ನಂಬಿಕೆಗಳನ್ನು ಒಳಗೊಳ್ಳುತ್ತದೆ. ಈ ಎಲ್ಲ ಅಂಶಗಳು ಪ್ರತಿಯೊಂದು ವಲಯಗಳ ಮೇಲೆ ತನ್ನ ಪ್ರಭಾವವನ್ನು

ಬೀರುತ್ತಿರುತ್ತವೆ. ಸಾಹಿತ್ಯ ಕ್ಷೇತ್ರವೂ ಈ ಪ್ರಭಾವದಿಂದ ಹೊರತಾಗಿಲ್ಲ. ಸಬಿತಾ ಬನ್ನಾಡಿಯವರು "ನಿರ್ದಿಷ್ಟ ಪ್ರದೇಶವೊಂದನ್ನು ಬೆನ್ನಿಗಿಟ್ಟುಕೊಂಡು ಬರೆಯಲೇಬೇಕಾದ ಅಗತ್ಯವೇನೂ ಸಾಹಿತ್ಯ ಕೃತಿಯೊಂದಕ್ಕೆ ಇರಬೇಕಾಗಿಲ್ಲ ಅಥವಾ ನಿರ್ದಿಷ್ಟ ಪ್ರದೇಶವೊಂದರ ಹಿನ್ನೆಲೆಯಲ್ಲಿ ಕೃತಿ ರಚಿಸಬಾರದು ಎಂದೂ ಇಲ್ಲ. ಆದರೆ, ಹೀಗೆ ತನ್ನ ಪರಿಸರದ ದಟ್ಟ ವಿವರಗಳೊಂದಿಗೆ ಕೃತಿ ಮೈದಾಳುವುದರ ಹಿಂದೆ ಇರುವ ಕಾರಣಗಳೇನು ಎಂಬುದನ್ನು ಅನ್ವೇಷಿಸುವುದು ಕುತೂಹಲದ ಸಂಗತಿಯಾಗಿದೆ"[೯] ಎಂದು ಅಭಿಪ್ರಾಯಪಡುತ್ತಾರೆ. ಪ್ರಾದೇಶಿಕ ಭಾಷಾ ಶೈಲಿಯನ್ನೇ ಬಳಸಿಕೊಂಡು ಕೃತಿ ರಚಿಸಿದಾಗ ಮಾತ್ರ ಹೇಳುವ ವಿಚಾರವನ್ನು ನಿರೂಪಿಸಲು ಸಾಧ್ಯ ಎಂಬುದಿಲ್ಲ. ಇದರ ಹೊರತಾಗಿಯೂ ಪರಿಣಾಮಕಾರಿಯಾದ ಕೃತಿ ರಚನೆ ಸಾಧ್ಯ ಎಂಬುದು ಸಬಿತಾರವರ ವಿಚಾರವಾಗಿದೆ. ಇದರ ಹೊರತಾಗಿಯೂ ಒಬ್ಬ ಲೇಖಕಿ ತನ್ನದೇ ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಕೃತಿ ರಚನೆಗೆ ತೊಡಗಿದಾಗ ಇದಕ್ಕೆ ಕಾರಣವಾದ ಅಂಶವೇನು? ಎಂಬುದು ಸಹಜ ಪ್ರಶ್ನೆಯಾಗುತ್ತದೆ. ಸ್ತ್ರೀವಾದಿ ವಿಮರ್ಶಕಿಯಾದ ಬಿ.ಎನ್.ಸುಮಿತ್ರಾಬಾಯಿಯವರು "ಕಳೆದ ಮೂರು ದಶಕಗಳಲ್ಲಿ ತೀವ್ರ ಸಂವೇದನಾಶೀಲ ಬರಹಗಳು ಮಹಿಳೆಯರಿಂದ ಬಂದಿವೆ. ಆದರೆ, ಆ ಬರಹಕ್ಕೆ ವಿಶಿಷ್ಟವಾದ ಪ್ರಾದೇಶಿಕ ಹಾಗೂ ಜನಾಂಗಿಕ ಉಪಭಾಷಿಕ ಲಕ್ಷಣಗಳೇ ಹೆಚ್ಚು ಸತ್ವ ನೀಡಿರುವುದನ್ನು ಗಮನಿಸಬೇಕು"[೧೦] ಎಂದು ಹೇಳಿರುವ ಮತ್ತೊಂದು ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ.

ಸಬಿತಾ ಬನ್ನಾಡಿ ಮತ್ತು ಸುಮಿತ್ರಾ ಬಾಯಿಯವರ ಅಭಿಪ್ರಾಯಗಳನ್ನು ಹೋಲಿಸಿದಾಗ ನಿರ್ದಿಷ್ಟ ಪ್ರದೇಶದ ಹಿನ್ನೆಲೆ, ಭಾಷೆ, ಕೃತಿಗೆ ವೈಶಿಷ್ಟತೆಯನ್ನು ತಂದುಕೊಡುತ್ತದೆ ಎಂಬ ಒಪ್ಪಿತ ಅಭಿಪ್ರಾಯ ತಿಳಿದುಬರುತ್ತದೆ. ಇದರೊಂದಿಗೆ ೭೦-೮೦ರ ದಶಕದಲ್ಲಿ ಬಹುತೇಕ ಲೇಖಕಿಯರು ತಮ್ಮ ಪ್ರಾದೇಶಿಕ ಹಿನ್ನೆಲೆಯಲ್ಲಿಯೇ ರಚಿಸಿದ ಕೃತಿಗಳು ಹೆಚ್ಚು ಪರಿಣಾಮಕಾರಿಯಾಗಿ ಮೂಡಿಬಂದಿರುವುದು ಗಮನಿಸುವ ವಿಚಾರವಾಗಿದೆ. ವೈದೇಹಿಯವರು ಸಹ ತಮ್ಮ ಹಲವಾರು ಕಥೆಗಳನ್ನು ಕುಂದಾಪುರ ಕನ್ನಡದ ಮೂಲಕ ನಿರೂಪಿಸಿದ್ದಾರೆ. ಇದಕ್ಕೆ ಅವರು ಎರಡು ಕಾರಣ ನೀಡುತ್ತಾರೆ. "ಮಾತಿನಲ್ಲೇ ಅಭಿನಯದ ಛಾಪು, ಸಂಕ್ಷಿಪ್ತತೆ, ವ್ಯಂಗ್ಯ, ವಿಡಂಬನೆ, ನವಿರು ಹಾಸ್ಯ ಹಾಸು ಹೊಕ್ಕು, ವ್ಯಕ್ತಿತ್ವಕ್ಕೆ ಸರಿಯಾಗಿ ಬಿಸುಪು ಪಡೆಯುವ ಭಾಷೆ ಇದಾಗಿದೆ"[೧೧] ಎಂಬುದು ಸ್ವತಃ ವೈದೇಹಿಯವರು ಈ ಭಾಷಾ ಶೈಲಿಯ ಬಳಕೆಗೆ ನೀಡುವ ಮೊದಲ ಕಾರಣವಾಗಿದೆ. ಅವರು ಹೇಳುವ ಮತ್ತೊಂದು ಕಾರಣ "ಆಯಾ ಭಾವ ತನ್ನ ಗಾಢತೆಗೆ ಮತ್ತು ತಂತನ್ನ ಪ್ರಾದೇಶಿಕತೆಗೆ ತಕ್ಕನಾಗಿ ತಾನೇ ಭಾಷೆಯನ್ನು ಸೃಷ್ಟಿಸಿಕೊಳ್ಳುತ್ತದೆ. ಭಾಷಾ

ವೈವಿಧ್ಯದ ಹಿಂದಿನ ಗುಟ್ಟೇ ಅದು ತಾನೆ? ಹಾಗೆ ನನ್ನಲ್ಲಿ ಅವೆರಡರ ಕೃಷಿ ನಡೆಯಿತು ಎನ್ನುವುದಕ್ಕಿಂತ ನಡೆಯಲ್ಪಟ್ಟಿತು ಎನ್ನುವುದೇ ಹೆಚ್ಚು ಸೂಕ್ತ"[೧೨] ಎನ್ನುವುದಾಗಿದೆ. ಒಟ್ಟಾರೆ ಅದಾಗ ತಾನೇ ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಕುಂದಾಪುರ ಪ್ರದೇಶದ ಜನಸಮುದಾಯ ಪರಿಸರ, ಸಂವೇದನೆಗಳ ಆತ್ಮೀಯತೆಯನ್ನು ವೈದೇಹಿಯವರ ಕಥೆಗಳಲ್ಲಿ ಕಾಣಬಹುದಾಗಿದೆ. ಹಾಗೆಂದು ಕಾಲ, ಪರಿಸ್ಥಿತಿಗಳಿಗೆ ಹೊಂದಿಕೊಳ್ಳದ ಗುಣ ಅವರದಲ್ಲ. ಆದ್ದರಿಂದಲೇ ತಮ್ಮ ಕೆಲವು ಕಥೆಗಳಲ್ಲಿ ಬೇರೆ ಬೇರೆ ರೀತಿಯ ಭಾಷಾ ಪ್ರಯೋಗಗಳಿಗೂ ಒಡ್ಡಿಕೊಂಡಿದ್ದಾರೆ. 'ಭೂತ', 'ಯಾತ್ರೆ', 'ವಾಣಿಮಾಯಿ', 'ಹಕ್ಕಿಲ್ಲದವರು' ಮುಂತಾದ ಕಥೆಗಳಲ್ಲಿ ತಾಯಿಯ ತವರು ಭಾಷೆಯಾದ ಮಲೆಯಾಳಂ, ತುಳು ಮಿಶ್ರಿತ ಸೊಗಡಿನ ಕನ್ನಡವನ್ನು ಬಳಸಿಕೊಳ್ಳುತ್ತಾರೆ. ಹಾಗೆಯೇ 'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ' ಕಾವ್ಯ ಭಾಷೆಯಾದರೆ, 'ಕ್ರೌಂಚ ಪಕ್ಷಿಗಳು' ಸಂಕಲನ ಶಿಷ್ಟ ಭಾಷೆಯಲ್ಲಿ ಮೂಡಿಬಂದಿದೆ.

ಕನ್ನಡದ ಪ್ರಸಿದ್ಧ ಲೇಖಕಿಯಾದ ಅನುಪಮಾ ನಿರಂಜನರವರು "ಕಥೆಗಳಿಗೆ ಕಾವ್ಯದ ಸೊಬಗನ್ನು ತಂದವರು ವೈದೇಹಿ ಅವರ ಹಾಗೆ ಭಾಷೆಯನ್ನು ದುಡಿಸಿಕೊಂಡ ಲೇಖಕರು ಕನ್ನಡದಲ್ಲಿ ಅಪರೂಪ. ಇದುವರೆಗೆ ನಾವು ಓದಿರುವ ಕಥೆಗಳಿಗಿಂತ ಇಲ್ಲಿನವು ಭಿನ್ನ ಜಾಡನ್ನು ಹಿಡಿದಿವೆ. ಇವರ ಕಥೆಗಳಲ್ಲಿ ವಸ್ತುವಿಗಿಂತ ಭಾವಕ್ಕೆ ತಂತ್ರಕ್ಕೆ ಮತ್ತು ಧ್ವನಿಗೇ ಪ್ರಾಧಾನ್ಯ"[೧೩]ಎಂದು ಕಥೆಗಳಲ್ಲಿ ವೈದೇಹಿಯವರು ಬಳಸಿದ ಸಮರ್ಥ ಭಾಷಾ ಶೈಲಿಯನ್ನು ಕುರಿತಾಗಿ ಹೇಳುತ್ತಾರೆ. ಅನುಪಮಾ ನಿರಂಜನರವರ ಮಾತಿನಂತೆ ಕಥೆಗಳಲ್ಲಿನ ಪಾತ್ರಗಳ ಭಾವ, ಧ್ವನಿಗಳಿಗೆ ಭಾಷೆಯನ್ನು ಒಗ್ಗಿಸುವಲ್ಲಿ ವೈದೇಹಿ ಮತ್ತಷ್ಟು ವಿಶೇಷವೆನಿಸುತ್ತಾರೆ. ಅವರು ಸೃಷ್ಟಿಸಿದ ಪಾತ್ರಗಳು ಅವುಗಳದ್ದೇ ಆದ ಭಾಷೆ–ನುಡಿಗಟ್ಟುಗಳಲ್ಲಿ ಮಾತನಾಡುತ್ತವೆ. ಅದರಲ್ಲೂ ಇಲ್ಲಿ ಬರುವ ಬಹುತೇಕ ಸ್ತ್ರೀ ಪಾತ್ರಗಳು ತಾವೇ ಕಥೆಯನ್ನು ನಿರೂಪಿಸುತ್ತವೆ. ಅಂತರಂಗದ ಮಾತುಗಳು ಕೆಲವೊಮ್ಮೆ ಸ್ವಗತವೂ ಆಗುತ್ತವೆ. ಅವರ ಮತ್ತೊಂದು ವಿಶೇಷತೆಯೆಂದರೆ, ಕಥೆಗಳಲ್ಲಿ ಪ್ರಾದೇಶಿಕ ನುಡಿಗಟ್ಟುಗಳ ಬಳಕೆ. ಹೀಗೆ ಭಾಷೆಗೆ ಸಮೃದ್ಧತೆಯನ್ನು ಒದಗಿಸುವ ನುಡಿಗಟ್ಟುಗಳನ್ನು ಕಥೆಗಳಲ್ಲಿ ತಂದದ್ದು ಅವರ ಸೃಜನಶೀಲತೆಗೆ ಮಾದರಿಯಾದುದು. 'ಉಂಚಬುದ್ಧಿ ಸಮಾ ಅಂತ ಕಾಂಬ' 'ಮೂರ್ ಮಂಡಕ್ಕಿ ಕಾಳಿಗೆ ಕಾರ್ಕಂಡ್ ತಿಂದ್ರೂ', 'ಹಾಸುವಾ ಹಾಸಣಿಗೆ ಬೀಸುವ ಬೀಸಣಿಗೆ ಊಟ ಎಲ್ಲಿವತ್ತು' ಇತ್ಯಾದಿ ನುಡಿಗಟ್ಟುಗಳು ಕಥೆಗಳ ಸಂದರ್ಭಕ್ಕೆ ತಕ್ಕಂತ ಬಳಕೆಯಾಗಿವೆ.

ಹೀಗೆ ಯಾವುದೇ ಒಂದು ಬಗೆಯ ವಸ್ತು, ತಂತ್ರ, ವಿಷಯ, ಸಾಹಿತ್ಯ ಪ್ರಕಾರ, ವಿದ್ಯಮಾನ, ಭಾಷಾ ಶೈಲಿಯೊಂದಿಗೆ ಏಕಮುಖವಾಗಿರದೆ, ವಿಶಿಷ್ಟ ಪ್ರಯೋಗಕ್ಕೆ ವೈದೇಹಿಯವರು ತಮ್ಮನ್ನು ಒಡ್ಡಿಕೊಳ್ಳುತ್ತಾರೆ.

## ೩.೩. ವೀಣಾ ಶಾಂತೇಶ್ವರ

ಪಾರಂಪರಿಕ ರೂಢಿ ಸಂಪ್ರದಾಯಗಳನ್ನು ಹಿಂದೆ ಸರಿಸಿ, ಹೆಣ್ಣಿನ ಅಮೂರ್ತ ಅಂತರಂಗವನ್ನು, ಭಾವಲೋಕವನ್ನು ತೆರೆದು ತೋರುವ ಹೊಸದೊಂದು ನೈತಿಕ ಪ್ರಜ್ಞೆಯುಳ್ಳ ಕಥೆಗಳನ್ನು ಸೃಷ್ಟಿಸಿದವರು ವೀಣಾ ಶಾಂತೇಶ್ವರ. ನವ್ಯ ಚಳುವಳಿಯ ಸಂದರ್ಭದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿದರು. ೨೨.೦೨.೧೯೪೫ರಂದು ಧಾರವಾಡದಲ್ಲಿ ಜನಿಸಿದ ವೀಣಾರವರ ತಂದೆ ಬಲರಾಮಾಚಾರ್ಯ ಯಲಬುರ್ಗಿ, ತಾಯಿ ಇಂದಿರಾ. ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಎ., ಎಂ.ಲಿಟ್, ಪಿಎಚ್.ಡಿ. ಪದವೀಧರೆಯಾದ ವೀಣಾರವರು ಕರ್ನಾಟಕ ಕಲಾ ಕಾಲೇಜಿನಲ್ಲಿ ಪ್ರಾಧ್ಯಾಪಕಿಯಾಗಿ ವೃತ್ತಿಯನ್ನು ಆರಂಭಿಸಿದರು. ಉನ್ನತ ಶೈಕ್ಷಣಿಕ ವಾತಾವರಣದಲ್ಲಿ ಬೆಳೆದ ಅವರಿಗೆ ಬರಹ ಕಷ್ಟವಾದ ಸಂಗತಿಯಾಗಲಿಲ್ಲ. ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಅಪಾರ ಕಾಳಜಿ ಇದ್ದ ಇವರ ತಾಯಿಯವರು ಚಿಕ್ಕವಯಸ್ಸಿನಲ್ಲೇ ವೀಣಾರವರಲ್ಲಿ ಓದುವ ಹವ್ಯಾಸವನ್ನು ಪ್ರೋತ್ಸಾಹಿಸಿದರು. ಹೆಣ್ಣುಮಕ್ಕಳು ಧೈರ್ಯ, ಸ್ವಾಭಿಮಾನ, ಸ್ವತಂತ್ರ ಮನೋಭಾವ, ಶೋಷಣೆಗಳನ್ನು ಎದುರಿಸುವ ಸಾಮರ್ಥ್ಯ ಬೆಳೆಸಿಕೊಳ್ಳಬೇಕೆಂಬುದನ್ನು ತಂದೆ–ತಾಯಿಯರಿಂದ ಕಲಿತರು. ಶಾಂತಾದೇವಿ ಮಾಳವಾಡ, ಗೀತಾ ಕುಲಕರ್ಣಿ ಮುಂತಾದ ಲೇಖಕಿಯರ ಒಡನಾಟ, ಅಮೂರ, ಶಾಂತಿನಾಥ ದೇಸಾಯಿ, ಶಂಕರ ಮೊಕಾಶಿ ಪುಣೇಕರರಂತಹ ಗುರುಗಳ ಪ್ರಭಾವ ಇವರ ಮೇಲಾಯಿತು. ಅದರಲ್ಲೂ ವೀಣಾ ಅವರು ಶಾಂತಿನಾಥ ದೇಸಾಯಿಯವರ ನೇರ ಪ್ರಭಾವದಲ್ಲಿ ಬೆಳೆದವರು. ಹಾಗಾಗಿ "ದೇಸಾಯಿಯವರ ಕಥನ ಸಾಹಿತ್ಯದ ಲಕ್ಷಣಗಳಾದ ನವ್ಯತೆ, ಲೈಂಗಿಕ ಆಸ್ಥೆ, ನಗರ ಸಂವೇದನೆ ಮತ್ತು ಅನುಭವದ ಆದ್ಯತೆಗಳನ್ನು ವೀಣಾ ಅವರ ಸಾಹಿತ್ಯದಲ್ಲೂ ಗುರುತಿಸಲು ಸಾಧ್ಯ. ಹೆಣ್ಣಿನ ಅಂತರಂಗವನ್ನು ಅನಾವರಣಗೊಳಿಸುವಲ್ಲಿ ದೇಸಾಯಿಯವರು ಅನುಸರಿಸಿದ ಮನೋವೈಜ್ಞಾನಿಕ ಕ್ರಮ ಮತ್ತು ಅವರಿಗೆ ದೊರೆತ ಒಳನೋಟಗಳು ವೀಣಾ ಅವರಿಗೂ ಪ್ರಸ್ತುತವೆನಿಸಿದೆ. ದೇಸಾಯಿಯವರಲ್ಲಿರುವಂತೆ ವೀಣಾರವರಲ್ಲೂ ಗಂಡು ಹೆಣ್ಣಿನ ಸಂಬಂಧಗಳಿಗೆ ಆದ್ಯತೆಯಿದೆ"[೧೪] ಎಂದು ಜಿ.ಎಸ್.ಅಮೂರರವರು ಅಭಿಪ್ರಾಯಪಡುತ್ತಾರೆ. ವೀಣಾ ಅವರು ಸಹ ವೈಚಾರಿಕತೆ, ದಾಂಪತ್ಯ ಮತ್ತು ಅದರಾಚೆಗಿನ ಸ್ತ್ರೀ–ಪುರುಷ ಸಂಬಂಧಗಳು, ಆಧುನಿಕತೆಯಂತಹ ಲಕ್ಷಣಗಳನ್ನು ಒಳಗೊಂಡ ಸ್ತ್ರೀಪಾತ್ರಗಳನ್ನಿಟ್ಟುಕೊಂಡು ಕಥೆ ಕಾದಂಬರಿಗಳನ್ನು ರಚಿಸಲು ಆರಂಭಿಸಿದರು. ಆದ್ದರಿಂದ ಶಾಂತಿನಾಥ ದೇಸಾಯಿ ಮತ್ತು ವೀಣಾ ಅವರ ಕಥಾಸಾಹಿತ್ಯದ ಸ್ತ್ರೀ ಪಾತ್ರಗಳಲ್ಲಿ ಸಾಮ್ಯತೆಯನ್ನು ಗುರುತಿಸುವ ಅಮೂರ ಅವರ ಮಾತು ಒಪ್ಪಿತವಾದುದು ಎನಿಸುತ್ತದೆ. ಇದರ ಹೊರತಾಗಿಯೂ ವೀಣಾ ಅವರ ಈ ಪ್ರಯತ್ನ ಕಥಾಸಾಹಿತ್ಯದಲ್ಲಿ ಅವರಿಗೆ ವಿಶೇಷ ಚಹರೆಯನ್ನು ಕಲ್ಪಿಸಿಕೊಟ್ಟಿತು. ೧೯೬೮ರಲ್ಲಿ 'ಮುಳ್ಳುಗಳು'

ಕಥಾಸಂಕಲನದ ಮೂಲಕ ಸಾಹಿತ್ಯ ಲೋಕವನ್ನು ಪ್ರವೇಶಿಸಿದರು. ತಮ್ಮ ಮೊದಲ ಕೃತಿಯ ಮೂಲಕವೇ ಸಾಹಿತ್ಯಲೋಕ, ಓದುಗರು, ವಿಮರ್ಶಕ ವರ್ಗವನ್ನು ಪರಿಣಾಮಕಾರಿಯಾಗಿ ತಲುಪಿದರು.

ಕಳೆದ ಸುಮಾರು ನಾಲ್ಕು ದಶಕಗಳಿಗಿಂತಲೂ ಹೆಚ್ಚಿನ ಅವಧಿಯಲ್ಲಿ ವೀಣಾರವರು ಬರೆದ ಕೃತಿಗಳ ಪ್ರಮಾಣ ಕಡಿಮೆಯಿದ್ದರೂ ಗುಣಾತ್ಮಕತೆ ಮತ್ತು ಪರಿಮಾಣಾತ್ಮಕತೆಯ ದೃಷ್ಟಿಯಿಂದ ಹೆಚ್ಚಿನ ಮಹತ್ವ ಪಡೆದುಕೊಂಡಿವೆ. ಇಂಗ್ಲಿಷ್, ಮರಾಠಿ, ಸಂಸ್ಕೃತ, ಹಿಂದಿ, ಫ್ರೆಂಚ್ ಹೀಗೆ ಬಹು ಭಾಷೆಗಳ ಪರಿಣತಿಯು ಅನುವಾದ ಕ್ಷೇತ್ರದಲ್ಲೂ ಇವರಿಗೆ ಹೆಸರು ತಂದುಕೊಟ್ಟಿತು. ಬಾಲ್ಯದಿಂದಲೂ ಕೌಟುಂಬಿಕ ವಾತಾವರಣದ ಮೂಲಕ ರೂಢಿಸಿಕೊಂಡು ಬಂದ ನಿರ್ಭೀತಿ, ಮನೋಸ್ಥೈರ್ಯಗಳು ಬರಹಗಳಿಗೆ ಮತ್ತಷ್ಟು ಪೂರಕವಾದವು. ಹಾಗೆಂದು ವೀಣಾರವರು ಕೇವಲ ಬರವಣಿಗೆಯಲ್ಲಿ ಮಾತ್ರ ದಿಟ್ಟತನವನ್ನು ಪ್ರದರ್ಶಿಸಿದವರಲ್ಲ. ಅನೇಕ ಬಾರಿ ತಮ್ಮ ವಿದ್ಯಾರ್ಥಿನಿಯರು, ಸಹೋದ್ಯೋಗಿಗಳು, ಪರಿಚಿತ ಹೆಣ್ಣುಮಕ್ಕಳಿಗೆ ಅನ್ಯಾಯವಾದಾಗ ಅವುಗಳನ್ನು ವಿರೋಧಿಸಿ, ಪರಿಹಾರ ದೊರಕಿಸಿ ಕೊಡುವ ಮೂಲಕ ಸ್ತ್ರೀ ಕಾಳಜಿಯನ್ನು ಮೆರೆದವರು. ಕಾಲದ ನಿರೀಕ್ಷೆ, ಹೆಣ್ಣಿನ ಭಾವತಲ್ಲಣಗಳ ಅಭಿವ್ಯಕ್ತಿ, ಅಸ್ತಿತ್ವದ ಹುಡುಕಾಟ, ವಿನೂತನ ಭಾಷಾ ಪ್ರಯೋಗ ಹೀಗೆ ಹಲವಾರು ಬಗೆಯಿಂದ ವೀಣಾ ಅವರು ಕನ್ನಡದ ಮಹತ್ವದ ಕಥೆಗಾರ್ತಿಯಾಗಿದ್ದಾರೆ.

**೩.೩.೧. ವೀಣಾ ಶಾಂತೇಶ್ವರ: ಸಾಹಿತ್ಯಿಕ ಸೃಜನಶೀಲತೆ**

ಕಳೆದ ಎಪ್ಪತ್ತರ ದಶಕದಲ್ಲಿ ಕನ್ನಡದ ನವ್ಯ ಕಥಾಸಾಹಿತ್ಯದ ಹಾದಿಯಲ್ಲಿ ವೀಣಾ ಶಾಂತೇಶ್ವರ ಅವರು ಪ್ರಮುಖ ಲೇಖಕಿಯಾಗಿ ಗುರುತಿಸಿಕೊಂಡಿದ್ದಾರೆ. ಸಣ್ಣಕಥೆಗಳನ್ನೇ ತಮ್ಮ ಅಭಿವ್ಯಕ್ತಿಯ ಪ್ರಬಲ ಮಾಧ್ಯಮವಾಗಿ ರೂಢಿಸಿಕೊಂಡರು. ಹಾಗಾಗಿ ವೀಣಾ ಅವರು ಕಥಾ ಸಾಹಿತ್ಯದಲ್ಲಿ ತೊಡಗಿಕೊಂಡು ಬಂದ ಬಗೆಯನ್ನು 'ಇಲ್ಲಿಂದ ಮುಂದೆಲ್ಲಿಗೆ' ಕೃತಿಯಲ್ಲಿ ಅವರೇ ಹೇಳಿಕೊಂಡ ವಿಚಾರಗಳನ್ನು ಆಧರಿಸಿ ನಾಲ್ಕು ಹಂತಗಳ ಅನುಭವದಲ್ಲಿ ಗುರುತಿಸಲಾಗಿದೆ. ಮೊದಲ ಹಂತ ಆರಂಭವಾದುದು ವಿದ್ಯಾಭ್ಯಾಸದ ಸಂದರ್ಭದಲ್ಲಿ. ತಾಯಿಯ ಪ್ರೋತ್ಸಾಹ ಮತ್ತು ಮನೆಯಲ್ಲಿನ ಮರಾಠಿ ಕಥೆ–ಕಾದಂಬರಿ, ಮಾಸಪತ್ರಿಕೆಗಳು ಏಳನೆಯ ವಯಸ್ಸಿನಲ್ಲಿಯೇ ಕಥೆಗಳನ್ನು ಬರೆಯಲು ಪ್ರೇರೇಪಿಸಿದವು. ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಗಳನ್ನು ನಿರೂಪಿಸುವ ಕಥೆಗಳನ್ನೇ ಹೆಚ್ಚಾಗಿ ಓದುತ್ತಿದ್ದರಿಂದ ೧೩–೧೪ನೆಯ ವರ್ಷಗಳವರೆಗೆ ಅವರು ಬರೆದ ಕಥೆಗಳು ಕ್ರಾಂತಿಕಾರಕ ವಿಚಾರಗಳ ಪ್ರತಿಪಾದನೆಯತ್ತ ಹೆಣೆದುಕೊಂಡಿರುತ್ತಿದ್ದವು. ಈ ಹಂತದ ಕಥೆಗಳಲ್ಲಿ ಅನ್ಯಾಯವನ್ನು ವಿರೋಧಿಸುವ ಹೆಣ್ಣಿನ ಪಾತ್ರ ಇದ್ದೇ ಇರುತ್ತಿತ್ತು. ಆಕೆಯು

ತನ್ನ ಮೇಲಿನ ಅನ್ಯಾಯ-ದಬ್ಬಾಳಿಕೆ ವಿರುದ್ಧ ಹೋರಾಡಿ ಗೆದ್ದ ಸಂದರ್ಭ ವೀಣಾರವರಿಗೆ ಹೆಮ್ಮೆ ಎನಿಸುತ್ತಿತ್ತು.

ಎರಡನೇ ಹಂತವನ್ನು ಅವರ ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ಗುರುತಿಸಬಹುದಾಗಿದೆ. ಮಾಸ್ತಿ, ಅಡಿಗರು, ಕೆ.ಎಸ್.ನರಸಿಂಹಸ್ವಾಮಿ, ಕೀಟ್ಸ್, ಇಬ್ಸನ್, ಬರ್ನಾಡ್ ಷಾ, ಸಾರ್ತ್ರೆ, ಎಲಿಯಟ್ ಮುಂತಾದವರ ನೇರ ಪ್ರಭಾವ ಆಗದಿದ್ದರೂ ವೀಣಾ ಅವರ ಶೈಲಿಯನ್ನು ರೂಪಿಸುವಲ್ಲಿ ಮಹತ್ವದ ಪಾತ್ರವಹಿಸಿದರು. ವಾಸ್ತವದ ಅರಿವಿನೊಂದಿಗೆ ಕ್ರಾಂತಿಕಾರಕ ಮನೋಭಾವ ಇಲ್ಲಿಯೂ ಮುಂದುವರೆಯಿತು. ಸಮಾಜದ ದುಷ್ಟ ವ್ಯವಸ್ಥೆಯ ಬಗೆಗೆ ಕೋಪ, ಅಸಮಾಧಾನ, ಅನ್ಯಾಯವನ್ನು ವಿರೋಧಿಸುವ ತೀವ್ರ ಹಂಬಲ, ಗಂಡಿನಿಂದ ಹೆಣ್ಣಿನ ಮೇಲೆ ತಲತಲಾಂತರಗಳಿಂದ ನಡೆಯುತ್ತಾ ಬಂದ ದೌರ್ಜನ್ಯ ಇವೆಲ್ಲವೂ ವೀಣಾ ಅವರ ಕಥೆಗಳ ವಸ್ತುಗಳಾದವು. 'ಮುಳ್ಳುಗಳು' ಈ ಹಂತದಲ್ಲಿ ಬಂದ ಕಥಾ ಸಂಕಲನವಾಗಿದೆ. ಸಮಾಜದ ಅನ್ಯಾಯ, ಅಪನಂಬಿಕೆಗಳನ್ನು ವಿರೋಧಿಸುವ ಅಂಶಗಳು ಇಲ್ಲಿನ ಕಥೆಗಳಲ್ಲಿ ಪ್ರಚುರಗೊಂಡವು. ಪರಿಣಾಮವಾಗಿ ಸಮಾಜ ಮತ್ತು ಪುರುಷನ ದೌರ್ಜನ್ಯವನ್ನು ಅಪಮಾನ, ಸೋಲುಗಳ ನಡುವೆಯೂ ವಿರೋಧಿಸುವ ಕೆಚ್ಚಿನ ಹೆಣ್ಣುಮಕ್ಕಳು ಕಥೆಗಳ ನಾಯಕಿಯರಾದರು.

ವೀಣಾ ಅವರ ಬರವಣಿಗೆಯ ಮೂರನೆಯ ಹಂತ ಅನುಭವಗಳ ತೀವ್ರತೆ, ಉತ್ಕಟತೆಯಿಂದ ಕೂಡಿದ್ದು. ಈ ವೇಳೆಗೆ ವಿಮರ್ಶನ ದೃಷ್ಟಿ ಅವರಲ್ಲಿ ಪಕ್ವವಾಗಿತ್ತು. ಇಲ್ಲಿನ ನಾಯಕಿಯರು ಸ್ವಾವಲಂಬಿಗಳಾಗಿದ್ದರು. ಪ್ರಸ್ತುತ ಸಂದರ್ಭದಲ್ಲಿ ಉದ್ಯೋಗಸ್ಥ ಹೆಣ್ಣು ವಿವಾಹಿತಳಾಗಿರಲಿ, ಅವಿವಾಹಿತಳಾಗಿರಲಿ, ಸ್ವಾತಂತ್ರ್ಯ ಪ್ರಿಯಳಾಗಿದ್ದರೆ, ಸಂಪ್ರದಾಯ ವಿರೋಧಿಯಾಗಿದ್ದರೆ, ಎದುರಿಸಬೇಕಾದ ವೈಯಕ್ತಿಕ, ಸಾಮಾಜಿಕ, ದೈಹಿಕ, ಮಾನಸಿಕ ಸಮಸ್ಯೆಗಳು ಇಲ್ಲಿನ ಕಥೆಗಳ ವಸ್ತುವಾಗಿದ್ದವು. 'ಕೊನೆಯದಾರಿ', 'ಕವಲು' ಇದೇ ಹಿನ್ನೆಲೆಯಲ್ಲಿ ಬಂದ ಕಥಾ ಸಂಕಲನಗಳಾಗಿವೆ. ಇನ್ನೂ ವೀಣಾ ಅವರು ನಾಲ್ಕನೆಯ ಹಂತಕ್ಕೆ ಬರುವ ವೇಳೆಗೆ ನಿರ್ದಿಷ್ಟ ವಿಚಾರಗಳನ್ನು ಬರೆಯಲೇಬೇಕೆಂದೆನಿಸಿ ಬರೆದದ್ದಲ್ಲ. ಬಾಹ್ಯ ಕಾರಣಗಳ ಒತ್ತಡದಲ್ಲಿ ವಸ್ತು-ಪಾತ್ರ-ತಂತ್ರ ಸನ್ನಿವೇಶಗಳನ್ನು ಹೊಂದಿಸಿಕೊಂಡು ಬರೆದರು. ವಿಚಾರಗಳು ಸಾಕಷ್ಟು ತೀವ್ರವಾಗಿದ್ದೂ ಅಭಿವ್ಯಕ್ತಿಯ ಅನುಭೂತಿ ತೀವ್ರತೆ ಪಡೆಯುವುದಿಲ್ಲ ಎಂಬುದು ಅವರ ವ್ಯಕ್ತಿಗತ ಅಭಿಪ್ರಾಯವಾಗಿತ್ತು. ಆದ್ದರಿಂದ ಪ್ರತಿಯೊಂದು ಹಂತದಲ್ಲಿ ಅವರು ರಚಿಸಿದ ಕಥೆಗಳು ಒಂದೊಂದು ಬಗೆಯ ಮನಸ್ಥಿತಿ, ವಿಚಾರ, ಭಾವನೆ ಮತ್ತು ಪ್ರತಿಕ್ರಿಯೆಗಳನ್ನು ಒದಗಿಸುತ್ತವೆ.

ಹೀಗೆ ವೀಣಾ ತಮ್ಮಲ್ಲಿ ಅಂತರ್ಗತವಾದ ಬರಹಶಕ್ತಿ, ಅನುಭವಗಳು, ಪ್ರಸಂಗಗಳ ಕಾರಣವಾಗಿ ಹಲವಾರು ಕೃತಿಗಳನ್ನು ರಚಿಸಿದರು. ಇದರಿಂದಾಗಿ ಮೂವತ್ತೇಳು ಸಣ್ಣ ಕಥೆಗಳು,

ಎರಡು ಕಾದಂಬರಿಗಳು, ವಿಮರ್ಶೆ, ಇಂಗ್ಲಿಷ್, ಹಿಂದಿ, ಮರಾಠಿ ಕೃತಿಗಳ ಅನುವಾದ, ಸಂಪಾದಿತ ಕೃತಿಗಳು ವೀಣಾ ಅವರಲ್ಲಿ ಕೌಶಲ್ಯಪೂರ್ಣವಾಗಿ ಬಂದಿವೆ. ಅವುಗಳ ಪರಿಚಯ ಈ ಕೆಳಗಿನಂತಿದೆ.

**ಕಥಾ ಸಂಕಲನಗಳು**

- ಮುಳ್ಳುಗಳು(೧೯೬೮)
- ಕೊನೆಯದಾರಿ(೧೯೭೨)
- ಕವಲು(೧೯೭೬)
- ಹಸಿವು(೧೯೮೪)
- ಬಿಡುಗಡೆ(೧೯೯೪)

**ಕಾದಂಬರಿ**

- ಗಂಡಸರು
- ಶೋಷಣೆ, ಬಂಡಾಯ ಇತ್ಯಾದಿ

**ಸಮಗ್ರ ಕಥಾಸಾಹಿತ್ಯ**

- ನಡೆದದ್ದೇ ದಾರಿ(೨೦೧೧)

**ವಿಮರ್ಶೆ**

- ಮಹಿಳಾ ಸಾಹಿತ್ಯದಲ್ಲಿ ವೈಚಾರಿಕತೆ
- ಇಲ್ಲಿಂದ ಮುಂದೆಲ್ಲಿಗೆ(೨೦೦೯)

**ಸಂಪಾದನೆ**

- ಹೊಸ ಹೆಜ್ಜೆ–ಮಹಿಳೆಯರ ಪ್ರಾತಿನಿಧಿಕ ಕವನ ಸಂಕಲನ
- ಮಹಿಳೆಯರ ಸಣ್ಣ ಕಥೆಗಳು
- ಮಹಿಳೆಯರು ಮತ್ತು ಪೊಲೀಸರು
- ಮಹಿಳಾ ಅಧ್ಯಯನ

- ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಣ್ಣ ಕಥೆಗಳು
- ಕನ್ನಡದ ಹನ್ನೊಂದು ಕಥೆಗಾರ್ತಿಯರು

ಅನುವಾದಗಳು

- ಅದೃಷ್ಟ-ಅಮೆರಿಕನ್/ಮೆಕ್ಸಿಕನ್ ಕಥೆಗಳು(ಇಂಗ್ಲಿಷ್‌ನಿಂದ ಕನ್ನಡಕ್ಕೆ)
- ಕುರಿಗಾಹಿ ಬಿಲ್ಲೇಸುರ-ನಿರಾಲಾ ಅವರ ಕಾದಂಬರಿ(ಹಿಂದಿಯಿಂದ ಕನ್ನಡಕ್ಕೆ)
- ಯಕೃತ್ತು-ಶ್ಯಾಮ ಮನೋಹರರ ನಾಟಕ(ಮರಾಠಿಯಿಂದ ಕನ್ನಡಕ್ಕೆ)
- ನದೀ ದ್ವೀಪಗಳು-ಅಜ್ಞೇಯರ ಕಾದಂಬರಿ(ಹಿಂದಿಯಿಂದ ಕನ್ನಡಕ್ಕೆ)
- ಪತಝುಡಕೆ ಫೂಲ್-ಕುರ್ಲಲೇನ್ ಹೈದರ್ ಕತೆ(ಹಿಂದಿಯಿಂದ ಕನ್ನಡಕ್ಕೆ)
- ನಾಚಗ ಘುಮಾ-ಮಾಧವಿ ದೇಸಾಯಿ ಆತ್ಮಕಥೆ(ಭಾಗಶಃ)(ಮರಾಠಿಯಿಂದ ಕನ್ನಡಕ್ಕೆ)
- ಸ್ತನದಾಯಿನಿ-ಮಹಾಶ್ವೇತಾದೇವಿ ಕಥೆ(ಹಿಂದಿಯಿಂದ ಕನ್ನಡಕ್ಕೆ)
- ಮರಾಠಿಯಿಂದ ಕನ್ನಡಕ್ಕೆ ಸುಮಾರು ೧೫ ಬೇರೆ ಬೇರೆ ಕಥೆಗಳು ಅನುವಾದಗೊಂಡಿವೆ

**೩.೩.೨. ಅಸ್ತಿತ್ವವಾದಿ ಸ್ತ್ರೀ ಸಂವೇದನೆಯ ಅಭಿವ್ಯಕ್ತಿ**

ಸ್ತ್ರೀತ್ವ, ಸ್ತ್ರೀಪರಿಕಲ್ಪನೆ, ಸ್ತ್ರೀಪರ ಕಾಳಜಿಗಳು ಸ್ಪಷ್ಟ ರೂಪವನ್ನು ಪಡೆದುಕೊಳ್ಳುತ್ತಿದ್ದ ಸಂದರ್ಭಕ್ಕೆ ಸ್ತ್ರೀವಾದಿ ಚಿಂತನೆ ಹಾಗೂ ಸಂವೇದನೆಗಳಿಗೆ ಅಭಿವ್ಯಕ್ತಿಯಾದವರು ವೀಣಾ ಶಾಂತೇಶ್ವರ. ಅವರ ಪಾಶ್ಚಾತ್ಯ ಸಾಹಿತ್ಯದ ಜ್ಞಾನ ಮತ್ತು ಉನ್ನತ ಶಿಕ್ಷಣದ ಪ್ರಭಾವದಲ್ಲಿ ಅನೇಕ ಕಥೆ-ಕಾದಂಬರಿಗಳು ರಚನೆಯಾದವು. ಈ ಕಾರಣದಿಂದಾಗಿ ಇಲ್ಲಿನ ಕಥಾನಾಯಕಿಯರು ಆಧುನಿಕತೆಯ ಬದುಕಿಗೆ ತಮ್ಮನ್ನು ಒಗ್ಗಿಸಿಕೊಂಡವರು. ಅಲ್ಲದೆ ಪಾಶ್ಚಾತ್ಯ ಸಂಸ್ಕೃತಿ, ನವನಾಗರಿಕತೆಯ ಪರಿಸರದಲ್ಲಿ ಬದುಕುವವರೂ ಆಗಿದ್ದಾರೆ. 'ಉದ್ಯೋಗ', 'ಮದುವೆ', 'ತಾಯ್ತನ' ಎಲ್ಲವುಗಳಲ್ಲಿ ಆಯ್ಕೆ ಸ್ವಾತಂತ್ರ್ಯವನ್ನು ಬಯಸುವ ಮತ್ತು ಪಡೆಯುವ ಸ್ತ್ರೀ ಪಾತ್ರಗಳು ಅವರ ಕಥೆಗಳಲ್ಲಿವೆ. ಗಂಡು-ಹೆಣ್ಣಿನ ಸಂಬಂಧಗಳ ವಿಶ್ಲೇಷಣೆಯನ್ನು ಒಳಗೊಂಡ ಇವರ ಕಥಾವಸ್ತು ಸಾಂಪ್ರದಾಯಿಕತೆಯಿಂದ ಭಿನ್ನವಾಗಿವೆ. ವೀಣಾ ಅವರ ಮೊದಲ ಕಥಾಸಂಕಲನ 'ಮುಳ್ಳುಗಳು' ಸಾಂಪ್ರದಾಯಿಕ ಸಂಸ್ಕೃತಿ ರೂಪಿಸಿರುವ ಸ್ತ್ರೀ ಮಾದರಿಗೆ ಅಪವಾದವಾಯಿತು. ಅಷ್ಟೇ ಏಕೆ ಮೊದಲ ಬಾರಿಗೆ ಈ ಕಥೆಗಳು ಬಂದಾಗ ಅಂದಿನ ಮಡಿವಂತ ಸಮಾಜಕ್ಕೆ ಅರಗಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಇದಕ್ಕೆ ಕಾರಣ ಗಂಡು-ಹೆಣ್ಣಿನ ಸಂಬಂಧಗಳನ್ನು ಲೈಂಗಿಕ ನೆಲೆಯಲ್ಲಿ

ವಿಶ್ಲೇಷಿಸುವಂತಹ ಪ್ರಯತ್ನ ಹಾಗೂ ದಿಟ್ಟತನವನ್ನು ವೀಣಾ ಅವರು ತಮ್ಮ ಕಥೆಗಳಲ್ಲಿ ತೋರಿದ್ದರು. ಅಂದಿನ ಸಂದರ್ಭದಲ್ಲಿ ತಮ್ಮ ಬಗ್ಗೆ ಸಮಾಜದ ಪ್ರತಿಕ್ರಿಯೆ ಕುರಿತಾಗಿ ತಮ್ಮ ಅನುಭವವನ್ನು ವೀಣಾ ಅವರು ಹೀಗೆ ಹಂಚಿಕೊಳ್ಳುತ್ತಾರೆ. "ಹೊಸ ಪೀಳಿಗೆಯ ಓದುಗರೂ ಆ ಹೊಸ ಮಾರ್ಗದ ಕಥೆಗಳನ್ನು ಮೆಚ್ಚಿಕೊಂಡರು. ಆದರೆ, ಸಾಂಪ್ರದಾಯಿಕ ಸಮಾಜದ ಒಂದು ವರ್ಗ ನನಗೆ ಬಹಿಷ್ಕಾರವನ್ನೇ ಹಾಕಿತು. ಈ ಹೆಣ್ಣು ನಾಚಿಕೆಯಿಲ್ಲದವಳು ಅಂತ ಸಾರಿಬಿಟ್ಟಿತು. ಹಿರಿಯ ಹಿತೈಷಿಗಳು ನನ್ನನ್ನು ದೂರ ಮಾಡಿದರು. ನನ್ನ ಬೆನ್ನ ಹಿಂದೆ ಅಪಶಬ್ದ-ನಿಂದೆ-ಟೀಕೆ ಸದಾ ನಡೆಯುತ್ತಲೇ ಇದ್ದವು"[೧೫] ಎಂದು ಸಂದರ್ಶನವೊಂದರಲ್ಲಿ ಹೇಳಿದ್ದಾರೆ. ವೀಣಾ ಅವರ ಈ ಅನುಭವ ಅಂದಿನ ಲೇಖಕಿಯರು ಆಧುನಿಕ ಸ್ತ್ರೀ ಸಂವೇದನೆಗಳನ್ನು ಬರಹಗಳಲ್ಲಿ ತರಲು ಎದುರಿಸಬೇಕಿದ್ದ ತಾಕಲಾಟಗಳನ್ನು ಸೂಚಿಸುತ್ತದೆ. ಅದೇ ರೀತಿ ಪ್ರತಿಯೊಂದು ಕ್ಷೇತ್ರಗಳಲ್ಲೂ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುವ ಅನಿವಾರ್ಯತೆ ಹೆಣ್ಣಿಗೆ ಇರುವುದನ್ನು ತಿಳಿಸಿಕೊಡುತ್ತದೆ. ಸಾಹಿತ್ಯ ಕ್ಷೇತ್ರವೂ ಇದರಿಂದ ಹೊರತಾಗಿಲ್ಲ. ವಸ್ತುವಿನ ಆಯ್ಕೆಯಿಂದ ಅಭಿವ್ಯಕ್ತಿ ವಿಧಾನದವರೆಗೂ ಲೇಖಕಿ ಅನೇಕ ಪ್ರತ್ಯಕ್ಷ-ಅಪ್ರತ್ಯಕ್ಷ ಹೋರಾಟಗಳನ್ನು ಎದುರಿಸಬೇಕಾಗುತ್ತದೆ ಎಂಬುದು ವೀಣಾ ಅವರ ನಿದರ್ಶನದಿಂದ ತಿಳಿದುಬರುತ್ತದೆ.

ವೀಣಾರವರ ಬರಹದ ಸಂದರ್ಭ ಮತ್ತು ಕಥಾ ಸಾಹಿತ್ಯವನ್ನು ಗ್ರಹಿಸಿ ಎಂ.ಎಸ್. ಆಶಾದೇವಿಯವರು "ವೀಣಾ ಶಾಂತೇಶ್ವರ ಅವರ ಬರಹಗಳಲ್ಲಿ ಎರಡು ಕೇಂದ್ರ ಕಾಳಜಿಗಳನ್ನು ಗುರುತಿಸಬಹುದು. ಒಂದು 'ಆತ್ಮಶೋಧ'ದ ಕೇಂದ್ರವಾದರೆ, ಮತ್ತೊಂದು 'ಬಿಡುಗಡೆ'ಯ ಕೇಂದ್ರ"[೧೬] ಎಂದು ಹೇಳುತ್ತಾರೆ. ಈ ಮಾತುಗಳು ವೀಣಾ ಅವರ ಬರವಣಿಗೆಯ ತಾತ್ವಿಕ ಸಂದರ್ಭವನ್ನು ತಿಳಿಸುತ್ತವೆ. ಸ್ತ್ರೀ ಸಂವೇದನೆ ಬದಲಾವಣೆಯನ್ನು ಕಾಣದೆ ಇರುವ ಸ್ಥಿತಿಯನ್ನೇ ಒಪ್ಪಬೇಕಾದ ಅನಿವಾರ್ಯತೆಯಿಂದ ಬಿಡುಗಡೆ ಪಡೆದು 'ಆತ್ಮಶೋಧ'ದ ಕಡೆ ನಡೆಯುವ ಹೊತ್ತಿಗೆ ವೀಣಾರವರ ಬರವಣಿಗೆ ಆರಂಭವಾಯಿತು. ಕಾರಣ ವೀಣಾ ಅವರು ತಮ್ಮ ಕಥಾ ಸಾಹಿತ್ಯದಲ್ಲಿ ಪ್ರಖರವಾದ ಸ್ತ್ರೀ ಸಂವೇದನೆ ಮತ್ತು ಸ್ತ್ರೀ ಅಸ್ತಿತ್ವದ ದ್ವಂದ್ವಗಳನ್ನು ಸೆರೆ ಹಿಡಿಯುತ್ತಾರೆ. ಅವರ ಕಥೆಗಳಲ್ಲಿ 'ಮದುವೆ' ಮತ್ತು 'ದಾಂಪತ್ಯ'ದಂತಹ ಸಂಸ್ಥೆಗಳು ತೀವ್ರ ಶೋಧನೆಗೆ ಒಳಪಡುತ್ತವೆ. ಈ ಎರಡು ಸಂಸ್ಥೆಗಳ ಮೂಲಕ ಪ್ರಧಾನ ಸಂಸ್ಕೃತಿ ಹೆಣ್ಣಿನ ಅಸ್ತಿತ್ವವನ್ನು ನಿಯಂತ್ರಣಕ್ಕೊಳಪಡಿಸುವ ಬಗೆಯನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾರೆ. ಇದರ ಮುಖೇನ ಪಿತೃ ಸಂಸ್ಕೃತಿಯ ಅಧೀನಕ್ಕೊಳಪಡುವ ಸ್ತ್ರೀ ಪಾತ್ರಗಳು 'ಆತ್ಮಶೋಧ'ಕ್ಕೆ ತೊಡಗುತ್ತವೆ. ಪರಿಣಾಮವಾಗಿ ಪುರುಷ ಅಧೀನತೆಯನ್ನು ಧಿಕ್ಕರಿಸಿ ವಿಮುಖವಾಗುವ ಮೂಲಕ 'ಬಿಡುಗಡೆ'ಯನ್ನೂ ಬಯಸುತ್ತವೆ.

ವೀಣಾ ಅವರ ಮೊದಲ ಕಥಾಸಂಕಲನದ 'ಮುಳ್ಳುಗಳು' ಕಥೆಯ ಕಥಾನಾಯಕಿ ಸಮಾನ ಮನಸ್ಥಿತಿಯಿಂದ ಪಕ್ವಗೊಂಡ ದಾಂಪತ್ಯ ಜೀವನವನ್ನು ಬಯಸುತ್ತಾಳೆ. ಆದರೆ ತನ್ನನ್ನು ನೋಡುವ, ಸುತ್ತಲಿನ ಎಲ್ಲ ಗಂಡುಗಳಲ್ಲೂ ಕಾಮುಕತೆಯನ್ನು ಗುರುತಿಸುತ್ತಾಳೆ. ಈ ಸಂದರ್ಭದಲ್ಲಿ 'ಆತ್ಮಶೋಧ'ಕ್ಕೆ ಒಳಗು ಮಾಡಿಕೊಂಡು ಅವರ ನಡೆನುಡಿಗಳಲ್ಲಿ ಕಂಡ ಅಸಂಗತಿಗಳ ಬಗ್ಗೆ ದುಃಖ ಪಡುತ್ತಾಳೆ. ಇದೇ ವೇಳೆ ತಾಯ್ತನದ ಕುರಿತಾದ ಆಯ್ಕೆ ಸ್ವಾತಂತ್ರ್ಯವನ್ನು ನಿಯಂತ್ರಿಸುವ ಪುರುಷರ ಮನೋಧೋರಣೆ ಅವರ ಕಥೆಗಳಲ್ಲಿ ಗುರುತಿಸಬಹುದಾದ ಮತ್ತೊಂದು ಪ್ರಮುಖ ಅಂಶವಾಗಿದೆ. 'ಕೊನೆಯ ದಾರಿ' ಕತೆಯ ನಾಯಕಿ 'ಲಿಲಿ' ಗಂಡನಿಂದ ಪರಿತ್ಯಕ್ತಳಾಗಿ ಸ್ವತಂತ್ರ ಜೀವನ ನಡೆಸುವಲ್ಲಿ ಅನೇಕ ಪುರುಷರ ಸಂಬಂಧಕ್ಕೆ ಒಳಗಾಗುತ್ತಾಳೆ. 'ಲಿಲಿ' ಅವರೆಲ್ಲರಲ್ಲಿ ನಿರೀಕ್ಷಿಸುವುದು, ಹಾತೊರೆಯುವುದು 'ತಾಯ್ತನ'ಕ್ಕಾಗಿ. ಆದರೆ, ಅದು ಕೌಟುಂಬಿಕ ಚೌಕಟ್ಟಿನ ಆಚೆಗೆ ನೆರವೇರದ ವಿಚಾರವಾಗುತ್ತದೆ. 'ಹೀಗೊಂದು ಕಥೆ'ಯಲ್ಲಿ 'ಲಿವಿಂಗ್ ಟು ಗೆದರ್' ಸಂಬಂಧದಲ್ಲಿ 'ತಾಯ್ತನ'ವನ್ನು ಅಪೇಕ್ಷಿಸುವ ನಾಯಕಿಯ ಆಸೆಯೂ ಈಡೇರದು. ಆಗ ಕಥಾನಾಯಕನ ಸಂಬಂಧವನ್ನೇ ತೊರೆಯುವ ನಿರ್ಧಾರ ಕೈಗೊಳ್ಳುತ್ತಾಳೆ. ಇಲ್ಲಿನ ಪುರುಷರ ಬೇಡಿಕೆ, ಪ್ರಾಮುಖ್ಯತೆ 'ದೈಹಿಕ ಕಾಮನೆ'ಗಳಿಗೆ ಹೊರತು ನಾಯಕಿಯರ ಮನೋಭಿಪ್ರಾಯಗಳಿಗೆ ಅಲ್ಲ. ಹೀಗಾಗಿ ಪ್ರೇಮಿಯ ಸಂಬಂಧವನ್ನು ನಿರಾಕರಿಸುವ ಮೂಲಕ ತಾಯ್ತನವನ್ನು ಉಳಿಸಿಕೊಳ್ಳುವ 'ಹೀಗೊಂದು ಕಥೆ'ಯ ನಾಯಕಿ, ತನ್ನ ಆಯ್ಕೆ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾಳೆ ಎಂಬುದು ವಿಶೇಷ ಸಂಗತಿಯಾಗಿದೆ.

ವೀಣಾ ಅವರ ಕಥೆಗಳಲ್ಲಿನ ಸ್ತ್ರೀಪಾತ್ರಗಳ ಮತ್ತೊಂದು ವಿಶೇಷತೆಯೆಂದರೆ "ಗಂಡಿನ ಪರಧಿಯಿಂದ ದೂರಸರಿದು ತನ್ನಿಂತಾನಾಗೇ ಜೀವನದ ಪ್ರಧಾನ ಮತ್ತು ಕೇಂದ್ರಸ್ಥಾನದಲ್ಲಿ ನಿಂತು ಜೀವನವನ್ನು ಪರಿಗ್ರಹಿಸುವ ಸಂದರ್ಭದಲ್ಲಿ ಘಟಿಸುವ ಸವಾಲುಗಳಿಗೆ ತನ್ನ ವ್ಯಕ್ತಿತ್ವವನ್ನು ರೂಢಿಸಿಕೊಳ್ಳುವ ಹೊಸ ಸಾಧ್ಯತೆಯತ್ತ ಇವರ ಕಾದಂಬರಿಗಳು ಬೆರಳು ತೋರಿಸುತ್ತವೆ."[೧೭] ಇದಕ್ಕೆ ಮಾದರಿಯಾಗಿ ಜೀವನವಿಡೀ ಗಂಡನ ದಬ್ಬಾಳಿಕೆಯನ್ನು ಸಹಿಸಿ ಆತನ ಸಾವಿನಲ್ಲಿ ಹಾಲನ್ನು ಕುಡಿದು ನಿಟ್ಟುಸಿರು ಹೊರ ಹಾಕುವ 'ಬಿಡುಗಡೆ' ಕಥೆಯ ನಾಯಕಿ, ನೈತಿಕತೆಯ ಹಂಗನ್ನು ಮೀರಿ ಬದುಕು ಕಟ್ಟಿಕೊಳ್ಳುವ 'ಕೊನೆಯ ದಾರಿ', 'ಕವಲು', 'ಗಂಡಸರು', 'ಹನುಮಾಪುರದಲ್ಲಿ ಹನುಮಜಯಂತಿ', 'ಹೀಗೊಂದು ಕಥೆ', ' ಒಂದು ರವಿವಾರ' ಕಥೆಯ ನಾಯಕಿಯರು ಕಾಣಿಸಿಕೊಳ್ಳುತ್ತಾರೆ. ಇವರೆಲ್ಲರೂ ವೀಣಾ ಅವರ ಹೊಸ ವೈಚಾರಿಕತೆ ಮತ್ತು ಚಿಂತನೆಯ ಮಾದರಿಗಳಾಗಿದ್ದಾರೆ. ಅಲ್ಲದೆ ತಮ್ಮ ಎಲ್ಲ ಕಥೆಗಳಲ್ಲಿ ಅವರು ಹೇಳುವ ವಿಚಾರವನ್ನು ನೇರವಾಗಿ ನಿಖರವಾಗಿ ಹೇಳಬಯಸುತ್ತಾರೆ. ಈ ಕುರಿತಾಗಿ "ವೀಣಾ ಅವರ ಕಥೆ–ಕಾದಂಬರಿಗಳಲ್ಲಿ

ಸ್ತ್ರೀ ಪುರುಷ ನಡುವಿನ ಆಕರ್ಷಣೆ, ದ್ವಿಸ್ತರ ಮೌಲ್ಯಗಳ ಕಾರಣದಿಂದ ವ್ಯಕ್ತಿ ವಿಶಿಷ್ಟ ಸಮಸ್ಯೆಗಳಿಂದ ಹುಟ್ಟಿಕೊಳ್ಳುವ ಸಂಘರ್ಷಗಳು ಇವುಗಳನ್ನು ಧೈರ್ಯದಿಂದ ಎದುರಿಸುವ ಸ್ತ್ರೀಯರು ಹೀಗೆ ವೈವಿಧ್ಯಮಯ ವಸ್ತುಗಳಿವೆ. ಈ ಕಥೆಗಳು ಸಮಾಜದ ತರತಮ ವ್ಯವಸ್ಥೆಯನ್ನು ನಿಷ್ಠುರವಾಗಿ ವಿಮರ್ಶಿಸುತ್ತವೆ. ಇಲ್ಲಿ ಆರೋಗ್ಯಕರ ದೃಷ್ಟಿಕೋನವಿದೆಯೇ ಹೊರತು ಪುರುಷ ದ್ವೇಷವಿಲ್ಲ"[೧೮] ಎಂದು ಎಲ್.ಸಿ.ಸುಮಿತ್ರಾರವರು ಅಭಿಪ್ರಾಯಪಡುತ್ತಾರೆ. ಈ ಅರ್ಥದಲ್ಲಿ ವೀಣಾ ಅವರ ಕಥೆಗಳಲ್ಲಿ ನಾಯಕಿಯರು ಪುರುಷ ವ್ಯವಸ್ಥೆಯ ದ್ವೇಷಿಗಳು ಎನಿಸುತ್ತಾರೆ. ಆದರೆ ಇವರ ದ್ವೇಷ, ನಿರಾಕರಣೆಗಳು ಮೌಲ್ಯರಹಿತ ಲಿಂಗತಾರತಮ್ಯವನ್ನು ತೋರುವ ಸಮಾಜದ ವಿರುದ್ಧವೇ ಹೊರತು, ಪುರುಷ ವರ್ಗದ ಮೇಲಿನದಲ್ಲ ಎಂಬುದಾಗಿದೆ.

ಮೇಲಿನ ವಿವರಣೆಗೆ ವ್ಯತಿರಿಕ್ತ ಎಂಬಂತೆಯೂ ವೀಣಾ ಅವರ ಕೆಲವು ಕಥೆಗಳನ್ನು ಗಮನಿಸಬಹುದಾಗಿದೆ. ಹೆಣ್ಣಿನ ದಾಸ್ಯ ಸಂಕೋಲೆಗಳನ್ನು ಬಿಡಿಸುವ ಬಗ್ಗೆ ಸಭೆಯಲ್ಲಿ ಮಾತನಾಡುವ 'ಅವಳ ಸ್ವಾತಂತ್ರ್ಯ'ದ ನಾಯಕಿ ವಿಮಲಾ ತನ್ನ ಮನೆಯಲ್ಲೇ ಅಸ್ತಿತ್ವವನ್ನು ಕಳೆದುಕೊಂಡವಳು. ತನ್ನ ಗಂಡನ ಶೋಷಣೆಗಳಿಂದ ಬೇಸತ್ತರೂ ಮತ್ತೆ ಗಂಡನನ್ನೇ ಬಯಸಿ ಹೋಗುವ 'ತಿರುಗಿ ಹೋದಳು' ಕಥೆಯ ಲಕ್ಷ್ಮಿಯದು ಇಲ್ಲಿ ಅಸಹಾಯಕತೆಯಾಗಿ ಕಾಣುತ್ತದೆ. ಇದಲ್ಲದೆ ಕೌಟುಂಬಿಕ, ಸಾಮಾಜಿಕ, ಔದ್ಯೋಗಿಕ ವಲಯಗಳಲ್ಲಿ ವಿವಿಧ ಬಗೆಯ ದೌರ್ಜನ್ಯಗಳಿಗೆ ಒಳಗಾಗುವ ನಾಯಕಿಯರು ವೀಣಾ ಅವರ ಕಥೆಗಳಲ್ಲಿದ್ದಾರೆ. ಉನ್ನತ ಹುದ್ದೆಗಳಲ್ಲಿದ್ದರೂ ತಮ್ಮ ಸ್ವಂತಿಕೆಯನ್ನು ಮರೆತು ವ್ಯವಸ್ಥೆಗೆ ಶರಣಾಗುವ, ಕಾವ್ಯ, ಗಾಯನ, ಭಾಷಣ ಇತ್ಯಾದಿ ಪ್ರತಿಭೆಗಳನ್ನು ಸಂಸಾರಕ್ಕಾಗಿ ತ್ಯಾಗ ಮಾಡಿ ಬದುಕುವ ಹೆಣ್ಣುಮಕ್ಕಳೂ ಇದ್ದಾರೆ.

ಈ ಎರಡೂ ಬಗೆಯ ಕಥಾ ಸರಣಿಗಳನ್ನು ಗಮನಿಸಿದಾಗ, ವೀಣಾ ಅವರು ತಮ್ಮ ಸ್ತ್ರೀಪಾತ್ರಗಳ ಕುರಿತಾಗಿ ಹೇಳಿರುವ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. "ಏಕಾಕಿಯಾಗಿ ಗಂಡಸಿನ ಹಾಗೂ ಸಮಾಜದ ಅನ್ಯಾಯಗಳ ವಿರುದ್ಧ ಹೋರಾಡುವ ಮಹಿಳೆಯ ದಾರಿ ಇನ್ನೂ ಸುಗಮವಿಲ್ಲ. ಪರಿಪೂರ್ಣ ಮಹಿಳಾ ಸ್ವಾತಂತ್ರ್ಯಕ್ಕೆ ಕಾಲವಿನ್ನೂ ಪಕ್ವವಾಗಿಲ್ಲ. ಆಕೆ ಹೊಂದಾಣಿಕೆ ಮಾಡಿಕೊಳ್ಳಬೇಕು ಅಥವಾ ತನ್ನ ತತ್ವಗಳಿಗಾಗಿ ನೋವು ಅನುಭವಿಸುತ್ತಾ ಬದುಕಿರಬೇಕು. ಹೋರಾಡಿ ಜಯಗಳಿಸಿಯೂ ಸುಖವಾಗಿರುವ ಭಾಗ್ಯ ತೀರಾ ಕಡಿಮೆ ಸಂಖ್ಯೆಯ ಮಹಿಳೆಯರಿಗಿದೆ. ಉಳಿದವರನ್ನು ಈ ಸಮಾಜ ಒತ್ತಾಯದಿಂದ ಹೊಂದಾಣಿಕೆ ಮಾಡಿಕೊಳ್ಳಲು ಹಚ್ಚುತ್ತದೆ. ಈ ಮಹಿಳೆಯರು ಅಂಜುಬುರುಕರಲ್ಲ, ಹೇಡಿಗಳಲ್ಲ, ಕಟುವಾಸ್ತವದ ಅರಿವುಳ್ಳವರು, ಇವರು ಸೋತವರಲ್ಲ, ಪಕ್ವತೆ ಹೊಂದಿದವರು."[೧೯] ಪಿತೃ ಸಂಸ್ಕೃತಿಯ ಹಿಡಿತದಲ್ಲಿ ಬದುಕುವ ಹೆಣ್ಣು ಪುರುಷನಿಗೆ ಸಮಾನವಾದ ಎಲ್ಲ ಸಾಮರ್ಥ್ಯವನ್ನು ಹೊಂದಿದ್ದಾಳೆ. ಆದರೆ

ಪಿತೃಪ್ರಧಾನತೆ ಮತ್ತು ಲಿಂಗ ರಾಜಕಾರಣಗಳು ತಮ್ಮ ನಿಯಮಗಳೊಂದಿಗೆ ಹೊಂದಿಕೊಳ್ಳುವ ಹುನ್ನಾರವನ್ನು ವ್ಯವಸ್ಥಿತವಾಗಿಯೇ ರೂಪಿಸುತ್ತಾ ಬಂದಿದೆ. ವೈಚಾರಿಕತೆಯ ಪರಿಣಾಮವಾಗಿ ಒಂದು ವೇಳೆ ಹೆಣ್ಣು ವ್ಯವಸ್ಥೆಯ ವಿರುದ್ಧ ನಿಂತಾಗ ಆಕೆಯನ್ನು ದಮನಗೊಳಿಸುವ ಪ್ರಾಬಲ್ಯವೇ ಮೇಲಾಗಿರುತ್ತದೆ. ಅದು ಹೇಗೆ? ಯಾರಿಂದ? ಪರಿಣಾಮಗಳೇನು? ಎಂಬ ಇತ್ಯಾದಿ ಪ್ರಶ್ನೆಗಳಿಗೆ ಉತ್ತರಗಳನ್ನು ದೊರಕಿಸುವಲ್ಲಿ ವೀಣಾ ಅವರ ಸ್ತ್ರೀ ಪಾತ್ರಗಳು ಸೃಷ್ಟಿಯಾಗಿವೆ.

ವೀಣಾ ಅವರ ಕಥೆಗಳಲ್ಲಿ ಗುರುತಿಸುವ ಮತ್ತೊಂದು ವಿಶೇಷತೆ ಎಂದರೆ ಭಾಷಾ ಶೈಲಿ. "ವೀಣಾರವರು ಬರೆದಿರುವುದು ಬೇರೆ ಬೇರೆ ಸನ್ನಿವೇಶಗಳಲ್ಲಿ ಬದುಕಬೇಕಾಗುವ ಒಂದೇ ಹೆಣ್ಣಿನ ಕಥೆ. ಆದ್ದರಿಂದ ಇಲ್ಲಿನ ಶೈಲಿಯಲ್ಲಿ ಹುಸಿತನವಿಲ್ಲ."[೨೦] ಹಾಗಾಗಿ ಸ್ತ್ರೀ ಸಂವೇದನೆಗಳನ್ನೇ ಕೇಂದ್ರವಾಗಿಟ್ಟುಕೊಂಡು ಅತಿ ಭಾವುಕತೆಗೆ ಒಳಗಾಗದೆ, ಒಂದು ಬಗೆಯ ಬೌದ್ಧಿಕ ಎಚ್ಚರದಲ್ಲಿ ಬರೆಯುವ ವೀಣಾ ಅವರ ರೀತಿ ಗಮನ ಸೆಳೆಯುತ್ತದೆ. ವಾಸ್ತವತೆಗೆ ಹೆಚ್ಚು ಮಹತ್ವಕೊಟ್ಟು ಬರೆದ ವೀಣಾ ಅವರು ತಮ್ಮ ಕಥೆಗಳಲ್ಲಿ ಬಳಸುವ ಬೆಳಗಾವಿ-ಧಾರವಾಡ-ಬಾಗಲಕೋಟೆಯ ಮರಾಠಿ ಸೊಗಡಿನ ಕನ್ನಡ ಆತ್ಮೀಯವೆನಿಸುತ್ತದೆ. ಹೀಗೆ ಬರೆಯುವಾಗ ಹೆಣ್ಣನ್ನು ಗಂಡಿನ ಕಣ್ಣುಗಳ ಮೂಲಕ ಚಿತ್ರಿಸದೆ, ಅವರು ಇರುವ ರೀತಿಯಲ್ಲಿಯೇ ಯಾವ ನಿರೀಕ್ಷೆಗಳಿಗೂ ಒಡಂಬಡದೆ ಚಿತ್ರಿಸಿದ್ದು ಇವರ ಬಹುದೊಡ್ಡ ಸಾಧನೆಯಾಗಿದೆ. ಎಚ್.ಎಸ್.ರಾಘವೇಂದ್ರರಾವ್ ಅವರು "ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊದಲ ಬಾರಿಗೆ ದೇಹ, ಭಾವನೆ, ವಿಚಾರಗಳು ಮತ್ತು ತಾತ್ವಿಕತೆ ಎಲ್ಲವೂ ಒಟ್ಟಾಗಿ ಇರುವ ಏಕಕಾಲದಲ್ಲಿ ಇವರು ಹೆಣ್ಣುಗಳನ್ನು ಕಟ್ಟಿಕೊಟ್ಟರು"[೨೧] ಎಂದು ವೀಣಾ ಅವರು ಸೃಷ್ಟಿಸಿದ ಸ್ತ್ರೀಪಾತ್ರಗಳ ಕುರಿತಾಗಿ ಹೇಳುತ್ತಾರೆ. ಅದುವರೆಗೂ ಹೆಣ್ಣಿನ ಭಾವನೆ, ವೈಚಾರಿಕತೆಗಳನ್ನು ಕಡೆಗಣಿಸಿ ದೇಹ ನೆಲೆಯಲ್ಲಿಯೇ ಆಕೆಯ ಅಸ್ತಿತ್ವವನ್ನು ಗುರುತಿಸುತ್ತಿದ್ದ ಧೋರಣೆಯನ್ನು ವೀಣಾ ಅವರ ಪಾತ್ರಗಳು ಪ್ರಶ್ನಿಸುತ್ತವೆ. ತಮ್ಮ ದೈಹಿಕ, ಮಾನಸಿಕ, ಬೌದ್ಧಿಕ ಸಾಮರಸ್ಯದೊಂದಿಗೆ ಅವುಗಳ ಮೇಲಿನ ತಮ್ಮದೇ ಹಕ್ಕನ್ನು ಸ್ತ್ರೀ ಪಾತ್ರಗಳು ನಿರೀಕ್ಷಿಸುತ್ತವೆ.

ಒಟ್ಟಿನಲ್ಲಿ ತಮ್ಮ ಹಲವಾರು ಕಥೆ-ಕಾದಂಬರಿಗಳ ಮೂಲಕ ವೀಣಾ ಅವರು ಮಹಿಳಾ ಸಂವೇದನೆಗೆ ಮಹತ್ವ ತಂದುಕೊಟ್ಟರು. ಹೆಣ್ಣಿನ ಖಾಸಗಿ ಬದುಕು, ಆಕೆಯ ಮಾನಸಿಕ ತೊಳಲಾಟ, ಸಮಾಜದಲ್ಲಿ ಹೆಣ್ಣಿನ ಕುರಿತಾಗಿರುವ ಸಂಕುಚಿತ ಮನೋಭಾವಗಳನ್ನು ಯಾವುದೇ ಹಿಂಜರಿಕೆಯಿಲ್ಲದೆ ಬರಹ ರೂಪಕ್ಕೆ ತಂದರು. ಇದರಿಂದಾಗಿ ಅಸ್ತಿತ್ವವಾದಿ ಸ್ತ್ರೀ ಸಂವೇದನೆಗಳು, ತಮ್ಮ ಮೇಲಿನ ದೌರ್ಜನ್ಯವನ್ನು ವಿರೋಧಿಸುವ ಗುಣ, ಜಾಗೃತ ವಿಚಾರಶಕ್ತಿ ಮುಂತಾದವು ವೀಣಾ ಅವರ ಕಥಾ ಸಾಹಿತ್ಯದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡವು.

## ೩.೪. ಗೀತಾ ನಾಗಭೂಷಣ

ಆಧುನಿಕ ಕನ್ನಡದ ಲೇಖಕಿಯರಲ್ಲಿ ದಲಿತ ಮತ್ತು ಬಂಡಾಯ ಸಾಹಿತ್ಯದ ಮೂಲಕ ಅಸಂಖ್ಯಾತ ದಲಿತ ಮಹಿಳೆಯರ ನೋವುಗಳಿಗೆ ಗಟ್ಟಿದನಿಯಾದವರು ಗೀತಾ ನಾಗಭೂಷಣ. ಸುಮಾರು ಅರವತ್ತರ ದಶಕದಲ್ಲಿ ಬರವಣಿಗೆಯನ್ನು ಆರಂಭಿಸಿದ ಗೀತಾ ಅವರು ಈಗಾಗಲೇ ಸಾಹಿತ್ಯಲೋಕದಲ್ಲಿರುವ ಇತರೆ ಲೇಖಕಿಯರಿಗಿಂತ ಭಿನ್ನ ವ್ಯಕ್ತಿತ್ವದ ಮೂಲಕ ಗುರುತಿಸಿಕೊಂಡವರು. ಕಾರಣ ಹೇಳಬೇಕೆನ್ನುವ ವಿಚಾರವನ್ನು ಯಾವುದೇ ಪೂರ್ವಾಗ್ರಹಗಳಿಲ್ಲದೆ ಮುಕ್ತವಾಗಿ ಹೊರಹಾಕುವ ಛಾತಿ ಗೀತಾ ಅವರದು.

ಗುಲಬರ್ಗಾ ಜಿಲ್ಲೆಯ ಸಾವಳಗಿ ಗ್ರಾಮದಲ್ಲಿ ೧೯೪೨ರ ಮಾರ್ಚ್ ೨೫ರಂದು ಜನಿಸಿದ ಗೀತಾ ಅವರ ತಂದೆ ಶಾಂತಪ್ಪ, ತಾಯಿ ಶರಣಮ್ಮ. ಗೀತಾ ಅವರ ಅನುಭವದಲ್ಲಿ ಅಂದಿನ ಕಾಲಕ್ಕೆ ಹೆಣ್ಣುಮಕ್ಕಳು ಶಿಕ್ಷಣ ಪಡೆಯುವುದೆಂದರೆ "ನಾನು ಅಥವಾ ನನ್ನಂಥವರು ಆ ಹೊತ್ತು ಸಾಲಿ ಕಲಿತದ್ದು ಅಂದ್ರ ಪ್ರವಾಹದ ವಿರುದ್ಧ ಈಜು ಬಿದ್ದಂಗ್ ಲೆಕ್ಕ ಅದು"[೨೨] ಎಂಬಂತೆ ಇತ್ತು. ಹೀಗಿರುವಾಗಲೂ ಬಡತನ, ಪ್ರೋತ್ಸಾಹದ ಕೊರತೆಗಳ ನಡುವೆಯೇ ತಂದೆಯ ಬೆಂಬಲದಿಂದ ಮ್ಯಾಟ್ರಿಕ್ ಶಿಕ್ಷಣದವರೆಗೂ ಓದನ್ನು ಪೂರೈಸಿದರು. ಕಾಲೇಜು ಶಿಕ್ಷಣ ಪಡೆಯುವ ಹಂಬಲದಲ್ಲಿದ್ದಾಗಲೇ ನೌಕರಿಗೆ ಹೋಗುವಂತಾಯಿತು. ಕಾಲೇಜು ಮತ್ತು ನೌಕರಿಯ ಜವಾಬ್ದಾರಿಯನ್ನು ಏಕಕಾಲಕ್ಕೆ ನಿರ್ವಹಿಸಿ ಎಂ.ಎ., ಬಿ.ಎಡ್. ಪದವಿ ಪಡೆದರು. ತಳಸಮುದಾಯದ ಹೆಣ್ಣುಮಕ್ಕಳು ಶಿಕ್ಷಣ, ಉದ್ಯೋಗದಲ್ಲಿ ತೊಡಗಿಕೊಳ್ಳುವುದು ಅಂದಿನ ದಿನಮಾನಗಳಲ್ಲಿ ಕಷ್ಟಕರ ಸನ್ನಿವೇಶವಾಗಿತ್ತು. ಒಂದು ವೇಳೆ ತೊಡಗಿಕೊಂಡರೂ ಸಮಾಜದ ವ್ಯಂಗ್ಯ, ಅವಮಾನಗಳಿಗೆ ಗುರಿಯಾಗಬೇಕಾಗಿತ್ತು. ಹಾಗಾಗಿ ಇವೆಲ್ಲವುಗಳ ಮಧ್ಯೆಯೂ ಶಿಕ್ಷಣವನ್ನು ಪಡೆದ ಗೀತಾ ಅವರದು ಮಹತ್ವದ ಸಾಧನೆಯಾಗಿದೆ.

ಗೀತಾ ಅವರು ಸಾಮಾಜಿಕವಾಗಿಯೂ ಸಾಕಷ್ಟು ಸವಾಲುಗಳನ್ನು ಎದುರಿಸುತ್ತಾ ಬೆಳೆಯಬೇಕಾಯಿತು. ತಳಸಮುದಾಯದವರೆಂಬ ಕಾರಣಕ್ಕೆ ಬಾಲ್ಯದಿಂದಲೂ ಮೇಲ್ವರ್ಗದ ಜನರಿಂದ ಅನುಭವಿಸಿದ ನೋವು, ಅವಮಾನದ ಘಟನೆಗಳು ಅವರನ್ನು ಘಾಸಿಗೊಳಿಸಿದ್ದವು. ಇದರ ಜೊತೆ ವೈವಾಹಿಕ ಬದುಕು ಸಹ ಸಾಕಷ್ಟು ಸಂಕಷ್ಟ, ನಿರಾಶೆಗಳನ್ನು ತಂದುಕೊಟ್ಟಿತು. ಆದರೆ ಈ ಎಲ್ಲವುಗಳನ್ನು ದೃಢತೆಯಿಂದ ಸ್ವೀಕರಿಸಿದ ಅವರು ತಮ್ಮ ಸಮುದಾಯದ ಹೆಣ್ಣುಮಕ್ಕಳ ನೋವುಗಳಿಗೆ ಬರಹ ರೂಪವನ್ನು ಕೊಟ್ಟರು. ಬರವಣಿಗೆಯಲ್ಲಿ ಬಂಡಾಯದ ಧೋರಣೆ, ಬದುಕಿನ ಸಂಘರ್ಷಗಳನ್ನು ದಾಖಲಿಸಿದರು. ಇಲ್ಲಿ ಪ್ರಮುಖ ವಿಚಾರವೆಂದರೆ ಗೀತಾ ಅವರು ಆರಂಭದಿಂದಲೇ ಬಂಡಾಯ ಧೋರಣೆಯೊಂದಿಗೆ ಬರೆದವರಲ್ಲ. ಕಾರಣ ಮೊದಮೊದಲು

"ಚೆಂದದ ಚೆಲುವೆಯ, ಅಂದದ ಬದುಕಿನ ಬಹು ಮಹಡಿಯ ಭವ್ಯ ಬಂಗಲೆಗಳ, ಸ್ಟಾರ್ ಹೋಟೆಲ್‌ಗಳ, ಹೋಳಿಗೆ ತುಪ್ಪ ಉಂಡು ಹೊಟ್ಟೆ ತುಂಬಿದವರ ಥಳಕು ಜೀವನದ ಬಗ್ಗೆಯೇ ಬರೆದೆ" ಎಂದು ಅವರೇ ಹೇಳಿಕೊಳ್ಳುತ್ತಾರೆ. ಇದನ್ನು ಅವರ ಬರವಣಿಗೆಯ ಆರಂಭದ ಹಂತದಲ್ಲಿ ಬಂದ 'ಬದಲಾಗುವ ಬಣ್ಣಗಳು', 'ನನ್ನ ನಿನ್ನ ನಡುವೆ', 'ಆಘಾತ', 'ಅಭಿಮಾನ', 'ಮೋಹ್ವಾ', 'ನಿನ್ನ ತೋಳುಗಳಲ್ಲಿ' ಮುಂತಾದ ಕಾದಂಬರಿಗಳು ಸಮರ್ಥಿಸುತ್ತವೆ. ಈ ಬಗ್ಗೆ "ಕಳೆದ ಶತಮಾನದ ಅರವತ್ತರ ದಶಕದಲ್ಲಿಯೇ ಬರವಣಿಗೆಗೆ ತೊಡಗಿಸಿಕೊಂಡ ಗೀತಾ ನಾಗಭೂಷಣ ಅವರು ೧೯೮೦ರವರೆಗೂ ಹೆಣ್ಣಿನ ಬದುಕನ್ನು ಸಹನಶೀಲವಾಗಿ ಕಾಣಲು ಒತ್ತಾಯಿಸುವ ಜನಪ್ರಿಯ ಕಥೆ, ಕಾದಂಬರಿಗಳನ್ನು ಬರೆದರು"[೨೩] ಎಂಬ ವಿನಯಾರವರ ಅಭಿಪ್ರಾಯವನ್ನೂ ಹೇಳಬಹುದಾಗಿದೆ. ಇದೇ ಹಿನ್ನೆಲೆಯಲ್ಲಿ ಒಂದು ಹಂತದವರೆಗಿನ ಕಾದಂಬರಿಗಳು ಗೀತಾ ಅವರಿಗೆ ಜನಪ್ರಿಯತೆ ಮತ್ತು ಬೇಡಿಕೆಯನ್ನು ತಂದುಕೊಟ್ಟಿದ್ದು ನಿಜ. ಆದರೆ, ೮೦ರ ದಶಕದ ದಲಿತ-ಬಂಡಾಯ ಸಾಹಿತ್ಯ ಸಂದರ್ಭ ಅವರ ಬರಹದಲ್ಲಿ ಮಹತ್ತರವಾದ ತಿರುವನ್ನು ತಂದಿತು.

ಗೀತಾ ಅವರಲ್ಲಿ ಸದಾಕಾಲ ಬೇರೇನೋ ನಾನು ಬರೆಯಬೇಕಿದೆ ಎಂಬ ತುಡಿತ ಇದ್ದೇ ಇತ್ತು. "ಆರಂಭದಲ್ಲಿ ನಾನು ಬರೆದ ಕಥೆ-ಕಾದಂಬರಿಗಳು ತೃಪ್ತಿ ತಂದಿರಲಿಲ್ಲ. ನನ್ನನ್ನು ನಿರಂತರ ಕಾಡುತ್ತಿದ್ದ ಬಡವರ, ನಿರ್ಗತಿಕರ, ಕೂಲಿಕಾರ್ಮಿಕರ ಕೆಳವರ್ಗದ ಜೋಪಡಿಯ ಹೆಣ್ಣುಮಕ್ಕಳ ಬದುಕಿನ ಕಟು ವಾಸ್ತವವನ್ನು ದಾಖಲಿಸು, ಉಳ್ಳವರ ಕಾಮಲಾಲಸೆ ಮತ್ತು ಮನೆಯ ಗಂಡಸರ ದಬ್ಬಾಳಿಕೆಗಳೆಂಬ ಎರಡು ಅಲುಗಿನ ಕತ್ತಿಯ ಮೇಲೆ ಬದುಕು ಸವೆಸುತ್ತಿರುವ ಹೆಣ್ಣುಗಳ ಯಾತನೆಗೆ ದನಿಯಾಗು, ಹೆಜ್ಜೆ ಹೆಜ್ಜೆಗೂ ನೀನುಂಡ ನೋವು, ಹಿಂಸೆ, ಕ್ರೌರ್ಯಗಳ ಬಗೆಗೆ ಬರೆ ಎನ್ನುವ ಮನಃಸಾಕ್ಷಿಯ ಎಚ್ಚರಿಕೆಯನ್ನು ಹೆಚ್ಚು ಕಾಲ ಧಿಕ್ಕರಿಸಲಾಗಲಿಲ್ಲ"[೨೪] ಎಂಬ ಅವರದೇ ಮಾತುಗಳು ಗೀತಾರವರು ಜನಪ್ರಿಯ ಸಾಹಿತ್ಯದಿಂದ ದಲಿತ ಬಂಡಾಯ ಸಾಹಿತ್ಯದ ಕಡೆಗೆ ಹೊರಳಿದ ಕಾರಣವನ್ನು ವಿಶ್ಲೇಷಿಸುತ್ತವೆ. ಬರವಣಿಗೆಗೆ ಪೂರಕವಾದ ಅಧ್ಯಯನ ಇಲ್ಲದಿದ್ದರೂ, ಜೀವನದಲ್ಲಿ ಕಾಡಿದ ನೋವು, ಅವಮಾನಗಳನ್ನೇ ಗಟ್ಟಿಯಾದ ಸಾಹಿತ್ಯ ಸೃಷ್ಟಿಗೆ ಮುಖಾಮುಖಿಯಾಗಿಸಿದರು. ಕೆಳಗೇರಿಯ ಹೆಣ್ಣುಮಕ್ಕಳ ಬೆತ್ತಲಸೇವೆ, ಹಿಂಸೆ, ದೌರ್ಜನ್ಯ, ದೇವದಾಸಿ ಪದ್ಧತಿಗಳನ್ನು ತಮ್ಮ ಕಥೆಗಳಲ್ಲಿ ಅನಾವರಣಗೊಳಿಸಿದರು. ಈ ಮೂಲಕವಾದರೂ ದಲಿತ, ಹಿಂದುಳಿದ ಹೆಣ್ಣುಮಕ್ಕಳ ಮೇಲಿನ ವಿವಿಧ ಬಗೆಯ ದೌರ್ಜನ್ಯಗಳ ಬಗ್ಗೆ ಗಮನ ಸೆಳೆದು, ಜಾಗೃತಿ ತರುವ ಆಶಯ ಅವರದಾಗಿತ್ತು. ಆದ್ದರಿಂದ ದಲಿತವರ್ಗದ ಜನರ ಬವಣೆ, ಬಡತನ, ಮೌಢ್ಯಗಳು, ಮಹಿಳಾ ಶೋಷಣೆಯ ವಿವಿಧ ಮಗ್ಗಲುಗಳನ್ನು ತಮ್ಮ ಬರಹ ರೂಪಕ್ಕೆ ಇಳಿಸಿದರು.

ಹೀಗೆ ಶೋಷಿತ ಸಮುದಾಯದ ಸಾವಿರಾರು ಹೆಣ್ಣುಮಕ್ಕಳ ಪ್ರತಿನಿಧಿಯಾಗಿ ಅವರ ನೋವುಗಳಿಗೆ ದನಿಯಾದರು. ಶಿಕ್ಷಣ, ನೌಕರಿ, ವೈಯಕ್ತಿಕ ಬದುಕಿನ ಬವಣೆ, ಬರವಣಿಗೆಗಳ ಮಧ್ಯೆ ಉಪನ್ಯಾಸಕಿಯಾಗಿ, ಪ್ರಾಚಾರ್ಯೆಯಾಗಿ, ಲೇಖಕಿಯಾಗಿ ಗುರುತಿಸಿಕೊಂಡರು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮೊದಲ ಮಹಿಳಾ ಅಧ್ಯಕ್ಷೆಯಾಗಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಮೊದಲ ಲೇಖಕಿಯಾಗಿ, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಗೌರವ ಪಡೆದ ಹೈದ್ರಾಬಾದ್ ಕರ್ನಾಟಕ ಭಾಗದ ಮೊದಲ ಲೇಖಕಿಯಾಗಿ ಹೀಗೆ ಹಲವು ಮೊದಲುಗಳನ್ನು ಸಾಧಿಸಿದರು. ಅಲ್ಲದೆ ವಿವಿಧ ಸಂಘ-ಸಂಸ್ಥೆ, ಸರ್ಕಾರದ ಇಲಾಖೆಗಳಿಂದ ಕೊಡಮಾಡುವ ಗೌರವಗಳಿಗೆ ಪಾತ್ರರಾಗಿರುವ ಗೀತಾ ನಾಗಭೂಷಣ ಅವರು ಸಾಧನೆಯ ಎತ್ತರಕ್ಕೆ ಬೆಳೆದು ನಿಂತ ಕನ್ನಡದ ಹೆಮ್ಮೆಯ ಲೇಖಕಿಯಾಗಿದ್ದಾರೆ.

**೩.೪.೧. ಗೀತಾ ನಾಗಭೂಷಣ: ಸಾಹಿತ್ಯಿಕ ಸೃಜನಶೀಲತೆ**

ಗೀತಾ ನಾಗಭೂಷಣ ಅವರು ತಮ್ಮ ತಲೆಮಾರಿನ ಹಲವು ಲೇಖಕಿಯರಂತೆ ಸಣ್ಣಕಥೆ ಗಳಿಗಿಂತಲೂ ಕಾದಂಬರಿ ಪ್ರಕಾರದಲ್ಲೇ ಹೆಚ್ಚು ಆಸಕ್ತಿಯಿಂದ ಬರೆದರು. ಹಾಗಾಗಿ ಅವರ ಬಹುಪಾಲು ಕಥೆಗಳು ಸಹ ಕಾದಂಬರಿಯ ಹರಹನ್ನು ಹೊಂದಿದೆ. ಗೀತಾ ಅವರು ಕನ್ನಡ ಸಾಹಿತ್ಯ ಲೋಕವನ್ನು ಪ್ರವೇಶಿಸಿ ಇದುವರೆಗೆ ಅರ್ಧಶತಮಾನ ಸಂದಿದೆ. ಈ ಅವಧಿಯಲ್ಲಿ ಸರಿ ಸುಮಾರು ಮೂವತ್ತಕ್ಕೂ ಹೆಚ್ಚು ಕಾದಂಬರಿಗಳು, ಮೂರು ಕಥಾ ಸಂಕಲನಗಳು ರಚಿಸಿರುವುದಲ್ಲದೆ, ಸಂಶೋಧನೆ, ಸಂಪಾದಿತ ಕೃತಿಗಳಲ್ಲಿಯೂ ಗೀತಾ ಅವರ ಬರವಣಿಗೆ ವಿಸ್ತಾರತೆಯನ್ನು ಕಂಡುಕೊಂಡಿದೆ. ಅವರು ರಚಿಸಿದ ಅನೇಕ ಕಥೆ-ಕಾದಂಬರಿಗಳು ನಾಟಕಗಳಾಗಿ, ಪಠ್ಯಗಳಾಗಿ, ಸಿನಿಮಾಗಳಾಗಿ ಜನಪ್ರಿಯವಾಗಿವೆ.

**ಕಾದಂಬರಿಗಳು**

- ತಾವರೆಯ ಹೂವು(೧೯೬೮)
- ಚಂದನದ ಚಿಗುರು(೧೯೬೯)
- ಮಹಾಮನೆ(೧೯೭೦)
- ಮರಳಿನ ಮನೆ(೧೯೭೧)
- ಸಪ್ತವರ್ಣದ ಸ್ವಪ್ನ(೧೯೭೩)
- ಮಾಪುರ ತಾಯಿಯ ಮಕ್ಕಳು(೧೯೭೮)

- ಹಸಿಮಾಂಸ ಮತ್ತು ಹದ್ದುಗಳು(೧೯೭೮)
- ಆಘಾತ(೧೯೮೦)
- ಅವಾಂತರ(೧೯೮೨)
- ಚಿಕ್ಕಿಯ ಹರೆಯದ ದಿನಗಳು(೧೯೮೩)
- ಪ್ರೀತಿಸಿದ್ದು ನಿನ್ನನ್ನೇ(೧೯೮೩)
- ಬದಲಾಗುವ ಬಣ್ಣಗಳು(೧೯೮೪)
- ನೀಲಗಂಗಾ(೧೯೮೬)
- ಮೋಹಾ್ವ(೧೯೮೬)
- ನಿನ್ನ ತೋಳುಗಳಲ್ಲಿ(೧೯೮೭)
- ನಿನ್ನೊಲವು ನನಗಿರಲಿ(೧೯೮೭)
- ಸವತಿ ಶ್ರೀಗಂಧ(೧೯೮೮)
- ನನ್ನ ನಿನ್ನ ನಡುವೆ(೧೯೯೨)
- ಚೈತ್ರದ ಹಾಡು(೧೯೯೩)
- ಧುಮ್ಮಸು(೧೯೯೪)
- ಏರಿಳಿತಗಳು(೧೯೯೫)
- ಆಸರೆಗಳು(೧೯೯೬)
- ನನ್ನ ಒಲವು ನಿನ್ನ ಚೆಲುವು(೧೯೯೭)
- ದಂಗೆ(೧೯೯೭)
- ಅಭಿಮಾನ(೧೯೯೮)
- ಬದುಕು(೨೦೦೧)
- ಕಾಗೆ ಮುಟ್ಟಿತು(೨೦೦೨)
- ಬಾಕಿ(೨೦೧೨)
- ಕಪ್ಪು ನೆಲ ಕೆಂಪು ಹೂವು(೨೦೧೩)

**ಕಥಾ ಸಂಕಲನಗಳು**

- ಜ್ವಲಂತ(೧೯೮೯)
- ಅವ್ವ ಮತ್ತು ಇತರೆ ಕಥೆಗಳು(೧೯೯೩)
- ಕ್ಯಾದಿಗಿ ಬನದಾಗ ಕತೆಯಾಗಿ ನಿಂತವರು(೨೦೦೬)
- ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ(ಸಮಗ್ರ ಕಥೆಗಳು ೨೦೧೨)

**ಇತರೆ**

- ದುರಗಿ-ಮುರಗಿಯರ ಸಂಸ್ಕೃತಿ(ಸಂಶೋಧನ ಕೃತಿ)
- ಖೇಮಣ್ಣ(ಜೀವನ ಪರಿಚಯ ಮತ್ತು ತತ್ವಪದ ಸಂಗ್ರಹ)

### ೩.೪.೨. ದಲಿತ ಮಹಿಳೆಯರ ಸಂವೇದನೆ

ದಲಿತ ಬಂಡಾಯ ಸಾಹಿತ್ಯದ ಸಂದರ್ಭದಲ್ಲಿ ಪ್ರಖರವಾದ ಮಹಿಳಾ ಪ್ರಜ್ಞೆಯನ್ನು ಗೀತಾ ನಾಗಭೂಷಣ ಅವರ ಬರಹಗಳಲ್ಲಿ ಕಾಣಲಾಗಿದೆ. ಸಮಾಜ ಮಾತ್ರವಲ್ಲದೆ, ಸಾಹಿತ್ಯದಲ್ಲಿಯೂ ಅವಗಣನೆಗೆ ಒಳಗಾಗಿದ್ದ ದಲಿತ ಸಮುದಾಯದ ಹೆಣ್ಣಿನ ಸಂವೇದನೆಗಳನ್ನು ಬರವಣಿಗೆಯಲ್ಲಿ ತಂದ ಪ್ರಮುಖ ಲೇಖಕಿ ಅವರು. "ಸ್ವತಂತ್ರ ಭಾರತದಲ್ಲಿ ನಡೆದ ಸಾಮಾಜಿಕ ಬದಲಾವಣೆಗಳಿಂದ ದಲಿತ ಜಗತ್ತಿನಲ್ಲೂ ಸಂಚಲನವೊಂದು ಮೂಡಿದೆ. ಶೋಷಣೆಯ ಜೊತೆ ಜೊತೆಗೆ ಶೋಷಿತ ಸಮುದಾಯದ ಜಾಗೃತಿ, ಎಚ್ಚರದ ಎಳೆಗಳನ್ನು ದಾಖಲಿಸುವ ಕೆಲಸವನ್ನು ಗೀತಾ ಮಾಡಿದ್ದಾರೆ."[೨೫] ಕಾರಣ ಶತಶತಮಾನಗಳಿಂದಲೂ ದಮನಕ್ಕೊಳ ಪಡುತ್ತಲೇ ಬಂದ ಸಮುದಾಯಗಳಲ್ಲಿ ಆಧುನಿಕ ಕಾಲಕ್ಕೆ ಹೊಸ ಎಚ್ಚರ ಮೂಡಿಬಂದಿತು. ಅಂದಿನ ಬರಹಗಾರ್ತಿಯರನ್ನೂ ತಲುಪಿದ ಈ ಬದಲಾವಣೆಗಳಿಂದ ಗೀತಾ ಅವರು ಹೊರತಾಗಿರ ಲಿಲ್ಲ. ಹೀಗಿರುವಾಗಲೇ ಸಮಾಜದ ಕೆಳಸ್ತರದಲ್ಲಿ ಜೀವಿಸುತ್ತಿದ್ದ ದಲಿತ ಹೆಣ್ಣುಮಕ್ಕಳ ನೋವುಗಳಿಗೆ ಗೀತಾ ಅವರು ದನಿಯಾದರು.

ಹೆಣ್ಣಿನ ಬದುಕಿನಲ್ಲಿ ಘಟಿಸುವ ಪ್ರತಿಯೊಂದು ವಿಚಾರಗಳನ್ನು ಸಾಮಾಜಿಕ, ರಾಜಕೀಯ, ಕಾರ್ಯ-ಕಾರಣಗಳ ಸಂಬಂಧದಲ್ಲಿ ನಿರೂಪಿಸಿದರು. ಸಮಾಜ, ಸಮುದಾಯ, ಧರ್ಮ, ಕುಟುಂಬ ಮುಂತಾದ ವ್ಯವಸ್ಥೆಗಳು ದಲಿತ ಹೆಣ್ಣುಮಕ್ಕಳನ್ನು ಹೇಗೆ ನಡೆಸಿಕೊಂಡಿವೆ ಎಂಬುದನ್ನು ಹೇಳುತ್ತಲೇ ವ್ಯಕ್ತಿಗತವಾಗಿ ತಮ್ಮೊಳಗೂ ಅಡಗಿದ್ದ ಬಂಡಾಯ, ನೋವು, ಅಪಮಾನಗಳನ್ನು ಹೊರಹಾಕಿದರು. ಇವುಗಳನ್ನೇ ವಸ್ತುವಾಗಿಸಿ ಸಾಕಷ್ಟು ಕಥೆ-ಕಾದಂಬರಿಗಳನ್ನು ಬರೆದರು. ಈ

ಮೂಲಕ ಹೆಣ್ಣಿನ ಮೇಲಾಗುವ ದೌರ್ಜನ್ಯ, ಅಪಮಾನ, ಆಕೆಯ ಅಸಹಾಯಕತೆ, ಕ್ರೂರ ವ್ಯವಸ್ಥೆಯ ವಿವಿಧ ಮುಖಗಳನ್ನು ಪರಿಚಯಿಸಿದರು.

ಗೀತಾ ಅವರ 'ಬದುಕು ನುಂಗುವ ಮಂದಿ', 'ದಾಳ' ಕಥೆಗಳಲ್ಲಿ ಅತ್ಯಾಚಾರಕ್ಕೊಳಗಾಗಿ ಬದುಕಿನ ದುರಂತ ಕಾಣುವ ಹೆಣ್ಣುಗಳ ಜೀವನ ಚಿತ್ರಣವಿದೆ. 'ಹಸಿಮಾಂಸ ಮತ್ತು ಹದ್ದುಗಳು', 'ಮಾಪುರ ತಾಯಿಯ ಮಕ್ಕಳು' ಕಾದಂಬರಿಗಳು ಧರ್ಮದ ಹೆಸರಿನಲ್ಲಿ ನಡೆಯುವ ಜೋಗತಿ, ದೇವದಾಸಿ ಪದ್ಧತಿಗಳು, ಅಸಹಾಯಕ ಹೆಣ್ಣುಮಕ್ಕಳ ಮೇಲಿನ ದೌರ್ಜನ್ಯಗಳನ್ನು ತೆರೆದಿಡುತ್ತವೆ. ಸ್ವತಃ ಇಂತಹ ಪದ್ಧತಿಗಳನ್ನು ಕಣ್ಣಾರೆ ಕಂಡ ಗೀತಾ ಅವರು ಲೈಂಗಿಕ ಮೂಲವಾದ ಹೆಣ್ಣಿನ ಶೋಷಣೆಗೆ ಧರ್ಮದ ಸೋಗುಹಾಕಿ ಈ ಪದ್ಧತಿಗಳನ್ನು ರೂಪಿಸಿರುವ ವ್ಯವಸ್ಥೆಯ ಒಳರಾಜಕಾರಣವನ್ನು ಅನಾವರಣಗೊಳಿಸಿದರು. ಬೇಸರದ ಸಂಗತಿಯೆಂದರೆ ಇವೆಲ್ಲ ಕ್ರೌರ್ಯಗಳನ್ನು ತಡೆಯುವ ಪ್ರಯತ್ನಗಳಾದರೂ ಇದಕ್ಕೆ ಅಡ್ಡಿಪಡಿಸಲು ಮೇಲ್ವರ್ಗ ಕೈಗೊಳ್ಳುವ ಅಮಾನವೀಯ ಕೃತ್ಯಗಳೂ ಇಲ್ಲಿನ ಕಾದಂಬರಿಗಳಲ್ಲಿ ಬಯಲಾಗುತ್ತವೆ. 'ಚೈತ್ರದ ಹಾಡು', 'ಮೋಹ್ವಾ', 'ದಂಗೆ', 'ಬದುಕು', 'ನೀಲಗಂಗಾ' ಮೊದಲಾದ ಕಾದಂಬರಿಗಳಲ್ಲಿ ಅಮಾಯಕ ಹೆಣ್ಣಿನ ಮೇಲಿನ ಅತ್ಯಾಚಾರ, ಲೈಂಗಿಕ ದೌರ್ಜನ್ಯಗಳು ಹಾಗೆಯೇ ಅನ್ಯಾಯಗಳನ್ನು ಪ್ರತಿಭಟಿಸಿದಾಗ ಅಸಹಾಯಕ ರನ್ನು ಕೊಲ್ಲುವ, ಹಿಂಸಿಸುವ ಮೇಲ್ ಸಮುದಾಯದ ಚಿತ್ರಣಗಳು ಕಂಡುಬರುತ್ತವೆ. ಗೀತಾ ಅವರು ಕೆಲವು ಕಡೆ ವ್ಯವಸ್ಥೆಯ ಹುನ್ನಾರ ಮತ್ತು ಅನ್ಯಾಯಗಳ ವಿರುದ್ಧ ನಿಲ್ಲುವ ನಾಯಕಿ ಯರನ್ನೂ ಕಾದಂಬರಿಗಳಲ್ಲಿ ತಂದಿದ್ದಾರೆ. ಪ್ರೀತಿಸಿದ ಮಾಲಿಕನನ್ನೇ ತಮ್ಮ ಸಮುದಾಯದ ಪರ ನಿಲ್ಲುವಂತೆ ಮಾಡುವ ಹಾಗೂ ಪ್ರಿಯತಮನ ಆಕಸ್ಮಿಕ ಮರಣದಿಂದ ಕಂಗೆಡದೆ ಮಗುವಿನ ಪಾಲನೆಗಾಗಿ ಊರಿನ ಬಹಿಷ್ಕಾರಕ್ಕೆ ಎದುರಾಗಿ ನಿಲ್ಲುವ ಕಥಾನಾಯಕಿಯರ ಚಿತ್ರಣ 'ಪ್ರೀತಿಸಿದ್ದು ನಿನ್ನನ್ನೇ' ಹಾಗೂ 'ದುಮ್ಮಸು' ಕಾದಂಬರಿಗಳಲ್ಲಿ ಇವೆ.

'ಬದುಕು' ಗೀತಾ ಅವರ ಮಹತ್ವದ ಕಾದಂಬರಿಯಾಗಿದೆ. ತಂದೆ-ತಾಯಿಗಳ ಒತ್ತಾಯಕ್ಕೆ ಮಣಿದು 'ಜೋಗಿಣಿ'ಯಾಗಿ ಪ್ರೀತಿಸಿದ ತುಕ್ಕಪ್ಪ ನಿರಾಕರಿಸಿದಾಗ ಆತ್ಮಹತ್ಯೆಗೆ ಶರಣಾಗುವ ನೀಲವ್ವನದು ದುರಂತ ಕಥೆ. ಆದರೆ ಇದೇ ಕಥೆಯಲ್ಲಿ 'ಜೋಗಿಣಿ' ಪದ್ಧತಿಗೆ ಒಳಗಾದ 'ತುಳಜಾ' ತನ್ನನ್ನು ಮೆಚ್ಚಿನ ಹುಸನಪ್ಪನನ್ನು ಮದುವೆಯಾಗಿ ಪುನಃ ಹಳ್ಳಿಗೆ ಬಂದು ಊರ ದೈವದವರ ತೀರ್ಮಾನವನ್ನು ವಿರೋಧಿಸುವ ಛಾತಿಯುಳ್ಳವಳಾಗಿ ಕಾಣಿಸುತ್ತಾಳೆ. ದಲಿತ ಹೆಣ್ಣುಗಳ ಶೋಷಣೆಗೆ ಪುರುಷವರ್ಗ ದೇವರು, ಧರ್ಮಗಳನ್ನು ಮಾಧ್ಯಮವಾಗಿ ಬಳಸಿಕೊಂಡಿರು ವುದನ್ನು ಈ ಪಾತ್ರಗಳು ನಿರೂಪಿಸುತ್ತವೆ. ಪ್ರೀತಿಯ ಅನ್ವೇಷಣೆಯಲ್ಲಿ ಹಾದರದ ಹಣೆಪಟ್ಟಿ

ಕಟ್ಟಿಸಿಕೊಳ್ಳುವ 'ಕಾಶಮ್ಮ' ಈ ಕಾದಂಬರಿಯ ಮತ್ತೊಂದು ದಿಟ್ಟ ಪಾತ್ರ. ಮನಸ್ಸು ಒಪ್ಪದ ಮದುವೆಯನ್ನು ಮುರಿದುಕೊಂಡು ತನ್ನನ್ನು ಪ್ರೀತಿಸಿದವನೊಂದಿಗೆ ಬದುಕುವ ಛಲ ಈಕೆಯದು. ಇಡೀ ಕುಟುಂಬ, ಊರು ಎದುರಾದರೂ ತನ್ನ ನಿರ್ಧಾರವನ್ನು ಬದಲಿಸದೆ ಜೀವಿಸುತ್ತಾಳೆ. ಗಾಯತ್ರಿಯವರು ಹೇಳುವಂತೆ ಈ ಕಾದಂಬರಿ "ಬದುಕಿನ ಪರಿಸ್ಥಿತಿಯ ಒತ್ತಡಗಳೊಂದಿಗೆ ಮುಖಾಮುಖಿಯಾಗುವ ಜೀವನ ಪರತೆ, ಆ ಸಂದಿಗ್ಧದಲ್ಲಿ ಹುಟ್ಟಿಕೊಳ್ಳುವ ನೈತಿಕತೆ, ಆ ನೈತಿಕತೆಯನ್ನು ಮೀರುವ ಮಾನವೀಯತೆ ಇವು ಕಾದಂಬರಿಯ ಒಟ್ಟು ಶಿಲ್ಪವಾಗಿದೆ."[೨೬] ಹಾಗಾಗಿ ಪ್ರಸ್ತುತ ಕಾದಂಬರಿಯಲ್ಲಿ ನೀಲವ್ವನ ದುರಂತವೊಂದನ್ನು ಬಿಟ್ಟರೆ, ಸಮಾಜದ ತಪ್ಪು ರೀತಿ-ರಿವಾಜುಗಳಿಂದ ಬದುಕು ಅಸಹನೀಯವಾದಾಗ ಅವುಗಳನ್ನು ಎದುರಿಸುವ ಪಾತ್ರಗಳೇ ಹೆಚ್ಚಾಗಿವೆ. ದೇಹ ಮತ್ತು ಲೈಂಗಿಕ ನೆಲೆಯಲ್ಲಿಯೇ ಹೆಣ್ಣಿನ ನೈತಿಕತೆಯನ್ನು ಗುರುತಿಸುವ ಸಮಾಜದ ಬಗ್ಗೆ ಆಕ್ಷೇಪಣೆಯಿದೆ. ಆದ್ದರಿಂದಲೇ ಗೀತಾ ಅವರು ನೈತಿಕತೆಯ ಹೆಸರಿನಲ್ಲಿ ಅನ್ಯಾಯವಾದಾಗ ಅದನ್ನು ಮೀರುವ ಗಟ್ಟಿತನವನ್ನು ಪಾತ್ರಗಳಿಗೆ ಒದಗಿಸಿದ್ದಾರೆ. ಇಲ್ಲಿ ಒಂದು ಸಮುದಾಯದಿಂದ ಮತ್ತೊಂದು ಸಮುದಾಯಕ್ಕೆ ಅವಕಾಶ ವಂಚನೆ, ಅನ್ಯಾಯಗಳು ಏರ್ಪಟ್ಟಾಗ ಹೋರಾಟ ಅನಿವಾರ್ಯ ಎಂಬುದು ಗೀತಾ ಅವರ ಮನೋಧೋರಣೆಯಾಗಿದೆ. ಕಾದಂಬರಿಗಳನ್ನು ಹೊರತುಪಡಿಸಿ 'ಗಿರವಿ', 'ಸಂಗಾತಿ', 'ಹಂಸೆ', 'ನಿತ್ಯ ನರಳುವ ಮಂದಿ', 'ಬೇಲೂ', 'ಕಪ್ಪು', 'ಕಮರಿ ಹೋಗುವ ಸಾವು', 'ದುರಂತ', 'ಗೌಡನ ಗೋರಿ', 'ಮುಂಡಿ ಪೂಜಾರಿಯಾದಾಗ', 'ಅತಿಕ್ರಮಣ', 'ಸಂಗಾತಿ', 'ಗೂಡಿನೊಳಗಿನ ಗುಟ್ಟು' ಮುಂತಾದ ಕಥೆಗಳಲ್ಲಿಯೂ ಅಸಹಾಯಕ ಹೆಣ್ಣುಮಕ್ಕಳ, ಬಡ ಕುಟುಂಬಗಳ ಬದುಕಿನ ನೋವು-ನಲಿವುಗಳು ಜೀವಂತಿಕೆಯಲ್ಲಿ ಅರಳಿನಿಂತಿವೆ.

ಗೀತಾ ಅವರ ಹತ್ತು ಹಲವು ಬಗೆಯ ಪಾತ್ರ ಸೃಷ್ಟಿಗೆ ಕಾರಣವಾದದ್ದು ಅವರು ತಮ್ಮ ಸುತ್ತ ಕಂಡು ಅನುಭವಿಸಿದ ಸನ್ನಿವೇಶಗಳೇ ಆಗಿವೆ. "ನಾನು ಸೃಜನಶೀಲ ಸಾಹಿತ್ಯದ ಆರಾಧಕಿ. ಎಲ್ಲಕ್ಕಿಂತ ಹೆಚ್ಚಾಗಿ ಬದುಕನ್ನು ಅದು ಇದ್ದ ಸ್ಥಿತಿಯಲ್ಲಿಯೇ ಗ್ರಹಿಸಬೇಕೆಂಬ ವಾಸ್ತವವಾದಿ. ನನ್ನ ಕಥೆ-ಕಾದಂಬರಿಗಳಲ್ಲಿ ಕಾಣಿಸಿಕೊಂಡ ಪಾತ್ರಗಳನ್ನು ನಾನು ಚಿತ್ರಿಸಲಿಲ್ಲ. ನನ್ನ ಅನುಭವ ವ್ಯಾಪ್ತಿಯಲ್ಲಿ ಎದುರಾದ ಗಟ್ಟಿಗಿತ್ತಿ ಮಹಿಳೆಯರು ನನ್ನನ್ನು ದಿಟ್ಟ ಲೇಖಕಿಯಾಗುವಂತೆ ರೂಪಿಸಿದರು. ದಂಗೆ ಎದ್ದ ಪಾತ್ರಗಳನ್ನು ನಾನೆಂದೂ ಕಲ್ಪಿಸಿಕೊಂಡು ಬರೆದವಳಲ್ಲ. ಅಂಥವರು ಅಸಂಖ್ಯರು ನನ್ನ ಸುತ್ತಲೂ ಇದ್ದರು"[೨೭] ಎಂಬ ಗೀತಾ ಅವರ ಮಾತುಗಳು ತಮ್ಮ ಕಥೆಗಳಲ್ಲಿ ಅವರು ತಾಳಿದ ವಾಸ್ತವವಾದಿ ನಿಲುವು, ಸ್ವ-ಅನುಭವಗಳ ಪ್ರಭಾವವನ್ನು ತಿಳಿಸಿಕೊಡುತ್ತವೆ. ಆದ್ದರಿಂದಲೇ ಇಲ್ಲಿನ ಕಾದಂಬರಿಗಳಲ್ಲಿ ತಮ್ಮ ಮೇಲಿನ ಅನ್ಯಾಯಕ್ಕೆ ಪ್ರತಿ

ರೋಧವನ್ನು ಒಡ್ಡುವಲ್ಲಿ ತಳಸಮುದಾಯದ ಮಹಿಳೆಯರು ಮೇಲ್ವರ್ಗದವರಿಗಿಂತಲೂ ಗಟ್ಟಿಗರು ಎಂದೆನಿಸುತ್ತದೆ. ಈ ವೇಳೆ ಸ್ವತಃ ಗೀತಾ ಅವರ ಬದುಕನ್ನು ಸಹ ಒಂದು ಉದಾಹರಣೆಯಾಗಿ ಪರಿಗಣಿಸಲು ಸಾಧ್ಯವಿದೆ.

ಒಟ್ಟಿನಲ್ಲಿ ಗೀತಾ ನಾಗಭೂಷಣರವರ ಕಥಾ ಸಾಹಿತ್ಯದಲ್ಲಿ ಇದುವರೆಗೆ ಸಮಾಜದ ಅವಜ್ಞೆಗೆ ಒಳಗಾದ ತಳಸಮುದಾಯದ, ವಿಶೇಷವಾಗಿ ದಲಿತ ಹೆಣ್ಣುಮಕ್ಕಳ ಬದುಕನ್ನು ದಾಖಲಿಸಲಾಗಿದೆ. ಝೋಪಡಪಟ್ಟಿಯಲ್ಲಿ ಬದುಕುವ ಜನರ ಜೀವನಾನುಭವಗಳು ಸೃಜನಶೀಲ ಅಭಿವ್ಯಕ್ತಿಯಾಗಿ ಗೀತಾ ಅವರಲ್ಲಿ ಮೂಡಿಬಂದಿವೆ. ಪ್ರಧಾನ ಸಂಸ್ಕೃತಿ ಕಟ್ಟಿಕೊಂಡ ಲೈಂಗಿಕ ರಾಜಕಾರಣವನ್ನು ಗುರುತಿಸಿ ಬರವಣಿಗೆಯಲ್ಲಿ ಅಭಿವ್ಯಕ್ತಗೊಳಿಸುವ ಸಶಕ್ತತೆ ಇದೆ. ಆದ್ದರಿಂದಲೇ "ಬಸವ ಅಂಬೇಡ್ಕರ್‌ರವರ ತಾತ್ವಿಕ ದರ್ಶನಗಳಲ್ಲಿ ಕಾಣ ಸಿಗದ ಹಲವಾರು ಸ್ತ್ರೀ ಚಿಂತನೆಯ ಹೊಳಹುಗಳು ಇವರ ಬರವಣಿಗೆಯಲ್ಲಿ ನಮಗೆ ದಕ್ಕುತ್ತವೆ"[೨೮] ಎಂದು ಗೀತಾ ಅವರನ್ನು ಕುರಿತು ಹೇಳಿರುವ ಎನ್.ಗಾಯತ್ರಿ ಅವರ ಮಾತು ಅತಿಶಯೋಕ್ತಿಯಾಗಲಾರದು.

### ೩.೪.೩. ಕಥಾಸಾಹಿತ್ಯ ಮತ್ತು ಭಾಷಾ ವಿಶೇಷತೆ

ಗೀತಾ ನಾಗಭೂಷಣರವರ ಕಥೆ-ಕಾದಂಬರಿಗಳಲ್ಲಿ ಕಂಡುಬರುವ ಪಾತ್ರ ಮತ್ತು ದಲಿತ ಸಂವೇದನೆಗಳಿಗೆ ಒಂದು ಬಗೆಯ ಗಟ್ಟಿತನ ದೊರೆತಿರುವುದು ಅವರು ಅನುಸರಿಸಿದ ಭಾಷಾ ಶೈಲಿಯಿಂದಾಗಿ. ದಲಿತ ಮಹಿಳೆಯರು ಜಾತಿ ಮತ್ತು ಲಿಂಗತಾರತಮ್ಯ, ಶೋಷಣೆಗಳನ್ನು ಎಚ್ಚೆತ್ತುಕೊಳ್ಳುವ ಹಾದಿಯಲ್ಲಿದ್ದಾರೆ. ಆಕೆಯಲ್ಲೂ ಒಂದು ಅಸ್ತಿತ್ವ ಇದೆ ಎಂಬುದನ್ನು ತಮ್ಮ ಖಡಕ್ ಭಾಷೆಯ ಮೂಲಕ ನಿರೂಪಿಸಿದರು. ಮೊದಮೊದಲು ಕನ್ನಡದ ಶಿಷ್ಟ ರೂಪದ ಬರವಣಿಗೆಗೆ ಅವರು ಹೊಂದಿಕೊಂಡಿದ್ದರು. ಆದರೆ ನಂತರದ ದಿನಗಳಲ್ಲಿ ಶೋಷಿತ ಮಹಿಳೆಯರ ಬದುಕು ಹಾಗೂ ಜನಸಂಸ್ಕೃತಿಯನ್ನು ಕುರಿತು ಬರೆಯಬೇಕೆಂದೆನಿಸಿದಾಗ ಸ್ಥಳೀಯ ಭಾಷಾ ಸೊಗಡನ್ನು ದುಡಿಸಿಕೊಳ್ಳುವ ನಿಲುವಿಗೆ ಬದ್ಧರಾದರು.

ಗೀತಾ ಅವರ ಕಥಾ ಸಾಹಿತ್ಯಕ್ಕೆ ಹೈದ್ರಾಬಾದ್ ಕರ್ನಾಟಕ ಭಾಗದ ಕಲ್ಬುರ್ಗಿ ಭಾಷೆ ನೈಜತೆ, ಸೃಜನಶೀಲತೆಗಳನ್ನು ತಂದುಕೊಟ್ಟಿದೆ. ನಿಜಾಮರ ಆಳ್ವಿಕೆಗೆ ಒಳಗಾಗಿದ್ದ ಈ ಪ್ರದೇಶದಲ್ಲಿ ಸಹಜವಾಗಿಯೇ ಉರ್ದುಪದಗಳು, ನೆರೆಯ ರಾಜ್ಯಗಳ ಮರಾಠಿ, ತೆಲುಗು ಪದಗಳು ಬೆರೆತು ಹೋಗಿವೆ. ಆದ್ದರಿಂದ ಅವರ ಕಾದಂಬರಿಗಳಲ್ಲಿ 'ಚಾವಲ್ ಪಕಾನಾ', 'ಮೀತು ಝೂ ಆಯಿ ಸರಪ ಅಪೇರೆ' ಈ ಮಾದರಿಯ ಅಸಂಖ್ಯಾತ ಅನ್ಯದೇಶೀ ಪದಗಳು ಕನ್ನಡದಷ್ಟೇ ಸಹಜವಾಗಿ ಬಳಕೆಯಾಗಿವೆ. ಮೇಲಿನ ನೋಟಕ್ಕೆ ಈ ಭಾಷೆಯ ಅರಿವಿಲ್ಲದವರಿಗೆ ಒರಟು ಎಂಬಂತೆ

ಕಾಣುವ ಕಲ್ಬುರ್ಗಿ ಕನ್ನಡದ ಸೊಗಡು ಗೀತಾ ಅವರ ಕಥೆ–ಕಾದಂಬರಿಗಳ ಮೂಲಕ ಅರಿವಿಗೆ ಬರುತ್ತದೆ. ಕೆಳವರ್ಗದ ಜನರ ಉಡುಗೆ–ತೊಡುಗೆ, ಬೈಯ್ಗಳ, ರೀತಿರಿವಾಜು, ಆಹಾರ ಪದ್ಧತಿ, ಸೌಂದರ್ಯ ಇತ್ಯಾದಿಗಳನ್ನು ಸೂಚಿಸುವ ಪದ ಪುಂಜಗಳ ವೈಶಿಷ್ಟ್ಯತೆಯೇ ಬೇರೆ ಬಗೆಯದು. ಅದರಲ್ಲೂ ಬೈಯ್ಗಳ ವಿಚಾರಕ್ಕೆ ಬಂದಾಗ ಮಡಿವಂತ ಜನರು ಕೇಳಲು ಹಿಂಜರಿಯುವಂತಹ 'ಬೋಸುಡಿ', 'ಚಿನಾಲಿ', 'ಹಲ್ಕಟ್' ಮುಂತಾದ ಪದಗಳು ಅವರ ಕಾದಂಬರಿಗಳಲ್ಲಿ ಕೋಪದ ಜೊತೆಗೆ ಆತ್ಮೀಯತೆ, ಸಲುಗೆಯನ್ನು ವ್ಯಕ್ತಪಡಿಸಲು ಬಳಕೆಯಾಗುತ್ತವೆ ಎಂಬುದು ವಿಶೇಷ. "ಗೀತಾ ಅವರು ಮಧ್ಯ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಲೇಖಕರಂತೆ ಹಳೆಯ ಅನುಭವಗಳ ಮರುಮಂಡನೆ, ಮರುವ್ಯಾಖ್ಯಾನಗಳಲ್ಲಿ ತೊಡಗಬೇಕಾಗಿರಲಿಲ್ಲ. ಏಕೆಂದರೆ ಅವರ ಬಳಿ ಇದ್ದ 'ಕಚ್ಚಾ ಮಾಲು' ಮೀಸಲು ಮುರಿಯುವ ಅನುಭವ ಪ್ರಪಂಚವಾಗಿತ್ತು"[೨೯] ಎಂದು ಎಚ್.ಎಸ್.ರಾಘವೇಂದ್ರ ರಾವ್ ಅವರು ಹೇಳುತ್ತಾರೆ. ಈಗಾಗಲೇ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡ ವಸ್ತು ವಿಷಯಗಳು, ಭಾಷಾ ಶೈಲಿಗಳನ್ನೇ ಅನುಸರಿಸುವ ಅಗತ್ಯ ಗೀತಾ ಅವರಿಗೆ ಇರಲಿಲ್ಲ. ಇವೆಲ್ಲವನ್ನೂ ಮೀರಿದ ಅನುಭವ ಜ್ಞಾನ ಮತ್ತು ಹೇಳಬೇಕಾದ ನೈಜ ವಿಚಾರಗಳು ಅವರ ಮನಸ್ಸಿನಾಳದಲ್ಲಿ ಪ್ರೇರಿತವಾಗಿದ್ದವು. ಇದನ್ನೇ ರಾಘವೇಂದ್ರರಾವ್ ಅವರು 'ಕಚ್ಚಾಮಾಲು' ಎಂದು ಕರೆದಿದ್ದಾರೆ. ಕಾರಣ ಬದುಕಿನ ದಟ್ಟ ಅನುಭವದ ಹಿನ್ನೆಲೆಯಲ್ಲಿ ಗೀತಾ ಅವರು ಒಗ್ಗಿಸಿಕೊಂಡ ಭಾಷಾ ಶೈಲಿ ವಿಶೇಷವಾಗಿತ್ತು. ಒಂದರ್ಥದಲ್ಲಿ ಇದನ್ನು 'ಜವಾರಿ ಭಾಷೆ' ಎಂದೂ ಕರೆಯಲಾಗಿದೆ.

ಗೀತಾ ಅವರ ಭಾಷಾ ಪ್ರಯೋಗ ಅಶ್ಲೀಲ, ಮುಜುಗರ ಎನಿಸುವಂತೆ ಕಂಡರೂ ಸಹ ನೈಜ ನಿರೂಪಣೆಗೆ ಬಿಗಿಯನ್ನು ಒದಗಿಸಿದೆ. ತಳವರ್ಗದ ಜನರ ನೋವು–ನಲಿವು, ಬಂಡಾಯ, ಪ್ರತಿರೋಧ, ವ್ಯಂಗ್ಯ, ವಿಡಂಬನೆ, ವರ್ಣನೆ ಇತ್ಯಾದಿ ಎಲ್ಲ ಭಾವಗಳನ್ನು ಸಮರ್ಥವಾಗಿ ನಿರೂಪಿಸುತ್ತದೆ. ಇದಕ್ಕೆ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದಾಗಿದೆ. 'ಮೈಯಾಗ ಸೊಕ್ಕ, ಹಲ್ಲಾಗ ನಾಲ್ಗಿ ಇದ್ದೂ ನಮ್ ಗಂಡಗೋಳು ಗೋರ್‍ಯಾನ ಹೆಣಗೋಳ್ಥಂಗ ಬದಕತಾವ"[೩೦] ಎಂದು 'ನೀಲಗಂಗಾ' ತಮ್ಮ ಸಮುದಾಯದ ಗಂಡುಗಳ ಬಗ್ಗೆ ಹೇಳುವ ಮಾತುಗಳು ವ್ಯಂಗ್ಯ ಮತ್ತು ಅಸಮಾಧಾನವನ್ನು ಹೊರ ಹಾಕುವ ಸಮರ್ಥ ಮಾದರಿಯಾಗಿವೆ. 'ಆಸರೆಗಳು' ಕಾದಂಬರಿಯಲ್ಲಿ ಹೆಣ್ಣಿಗೆ ಗಂಡಿನ ಆಸರೆ, ಬಳ್ಳಿಗೆ ಮರದ ಆಸರೆಯಂತೆ ಎಂದು ಸ್ವಾಮೀಜಿ ಪ್ರವಚನದಲ್ಲಿ ಹೇಳುವ ಸಂದರ್ಭ ಬರುತ್ತದೆ. ತಂದೆ, ಗಂಡ, ಮಗನ ಪ್ರೀತಿ, ಆಸರೆಗಳಿಂದ ವಂಚಿತಳಾದ ತಾಳವ್ವ ಸಿಡಿದೇಳುತ್ತಾಳೆ. "ಹೆಣ್ಣು ಹೆಂಗಸು ಒಬ್ಬಕ್ಕಿನೇ ಗಟ್ಯಾಗಿ ನಿಂತು

ಬದುಕಬಾರ್ದು ಅನ್ನೋದಕ್ಕ ಈಟೆಲ್ಲಾ ಆಟ ಹೂಡಿ, ಪುರಾಣ ಬರ್ದು ಪ್ರವಚನಾ ಹೇಳ್ತೀರೇನ್ರೋ ಸುಳ ನನ್ ಮಕ್ಕಳ್ರ್ಯಾ"[೩೧] ಎನ್ನುವ ಆಕೆಯ ಮಾತುಗಳಲ್ಲಿ ರೂಢಿಗತ ಧಾರ್ಮಿಕ ನಂಬಿಕೆಗಳನ್ನು, ಲಿಂಗರಾಜಕಾರಣವನ್ನು ವಿರೋಧಿಸುವ ಬಂಡಾಯದ ದನಿ ಇದೆ. ಈ ದನಿ ಮತ್ತಷ್ಟು ಪ್ರಬಲ ಎನ್ನಿಸುವುದು ಗೀತಾ ಅವರು ಪ್ರಯೋಗಿಸಿದ ಭಾಷಾ ಶೈಲಿಯ ಮೂಲಕವೇ ಆಗಿದೆ. "ಹಾರ್‍ರೀಗೇನು ನಮ್ಮಂಗ ಎಣ್ಣೆ ಹಚ್ಚಿ ಮಳಾ ಉದ್ದ ಹೋಳಿಗಿ ಮಾಡ್ಲಕ ಬರ್ತದಾ? ಧಮ್ಮ ಧುಸಕಾ ಅಂತ ಅಂಗೈಯೋಟು ಪಿಂಡ ಮಾಡಿ ಹಾಕ್ತಾರ. ಬರೇ ಹೂರಣ ಮುದ್ದಿನೇ ಯವ್ವಾ ಅವರ ಹೋಳಿಗೀ ಹಿಟ್ಟ ಹಚ್ಚಿ ಲಟಿಸಿ ಹಾಕ್ತಾವ ಖೋಡಿ"[೩೨]ಎಂದು 'ದಂಗೆ' ಕಾದಂಬರಿಯಲ್ಲಿ ತಮ್ಮ ಅಡುಗೆಯ ಹದವನ್ನು ವರ್ಣಿಸಿ ಜೋಗಕ್ಕ ಹೇಳುವ ಮಾತುಗಳಿವು. ಗೀತಾ ಅವರನ್ನು ಬಿಟ್ಟರೆ ಈ ಬಗೆಯ ವರ್ಣನೆ ಮತ್ತ್ಯಾವುದೇ ಲೇಖಕಿಯರಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲವೆನಿಸುತ್ತದೆ. ಹೀಗೆ ದಲಿತ ಹೆಣ್ಣುಮಕ್ಕಳ ದೈನಂದಿನ ಬದುಕಿನಿಂದ ಆರಂಭಿಸಿ ಸೂಕ್ಷ್ಮ ಸಂವೇದನೆ, ವ್ಯವಸ್ಥೆಯ ವಿರುದ್ಧವಾದ ಅಸಹಾಯಕತೆ, ಆಕ್ರೋಶಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ತಮ್ಮದೇ ಭಾಷಾ ಶೈಲಿಯಲ್ಲಿ ನಿರೂಪಿಸುತ್ತಾರೆ.

### ೩.೫. ಸಾರಾ ಅಬೂಬಕ್ಕರ್

ದಲಿತ-ಬಂಡಾಯ ಸಾಹಿತ್ಯ ಘಟ್ಟದಲ್ಲಿ ಮುಸ್ಲಿಂ ಮಹಿಳಾ ಸಂವೇದನೆಯ ವಿಶಿಷ್ಟ ಬರಹಗಾರ್ತಿಯಾಗಿ ಗುರುತಿಸಿಕೊಂಡವರು ಸಾರಾ ಅಬೂಬಕ್ಕರ್‌ರವರು. ೧೯೩೬ ಜೂನ್ ೩೦ರಂದು ಕಾಸರಗೋಡಿನಲ್ಲಿ ಜನಿಸಿದ ಸಾರಾ ಅವರ ತಂದೆ ಅಹ್ಮದ್ ಪಿ. ಹಾಗೂ ತಾಯಿ ಜೈನಾ ಬಿ. ಮುಸ್ಲಿಂ ಹೆಣ್ಣುಮಕ್ಕಳು ವಿದ್ಯಾಭ್ಯಾಸವನ್ನು ಪಡೆಯುವುದು ಕ್ಲಿಷ್ಟಕರವಾಗಿದ್ದ ಸಂದರ್ಭ ಅದಾಗಿತ್ತು. ತಮ್ಮ ಸಮುದಾಯದ ವಿರೋಧದ ನಡುವೆಯೇ ತಂದೆ ಮತ್ತು ಅಣ್ಣನ ಪ್ರೋತ್ಸಾಹದಿಂದ ಎಸ್.ಎಸ್.ಎಲ್.ಸಿ.ವರೆಗೆ ವಿದ್ಯಾಭ್ಯಾಸವನ್ನು ಪಡೆದರು. ಮೊದಲಿನಿಂದಲೂ ಮುಕ್ತ ವಾತಾವರಣದಲ್ಲಿ ಬೆಳೆದ ಸಾರಾ ಅವರಿಗೆ ಮದುವೆಯಾದ ನಂತರ ಅಲ್ಲಿನ ಕೆಲವು ಧಾರ್ಮಿಕ, ಕೌಟುಂಬಿಕ ಕಟ್ಟು ಪಾಡುಗಳಿಗೆ ಹೊಂದಿಕೊಳ್ಳಲು ಸಾಕಷ್ಟು ಕಾಲಾವಕಾಶ ಬೇಕಾಯಿತು. ಈ ಕಾರಣದಿಂದ ಬರವಣಿಗೆ ಮತ್ತು ಓದಿನ ಅವಕಾಶಕ್ಕೆ ತಾತ್ಕಾಲಿಕ ತಡೆಯಾಯಿತು. ಹೀಗಿರುವಾಗಲೂ ಅವರ ಬರವಣಿಗೆಯ ಹಂಬಲ, ಓದುವ ಆಸಕ್ತಿಗಳು ಕಡಮೆಯಾಗಲಿಲ್ಲ. ಹಲವಾರು ವರ್ಷಗಳ ನಂತರ ಬೆಂಗಳೂರು, ಪಣಂಬೂರು ಮುಂತಾದ ಕಡೆ ಪತಿಯ ವರ್ಗಾವಣೆಯಾಗಿ ಬಂದ ಮೇಲೆ ಸಾರಾ ಅವರಿಗೆ ಪುನಃ ಹೊರಜಗತ್ತಿಗೆ ತೆರೆದುಕೊಳ್ಳಲು ಸಾಧ್ಯವಾಯಿತು. ಅಲ್ಲಿಂದ ಪತ್ರಿಕೆಗಳು, ಗ್ರಂಥಾಲಯದ ಪುಸ್ತಕಗಳೊಂದಿಗೆ ಒಡನಾಟ ಆರಂಭವಾಯಿತು. ಅದುವರೆಗೂ

ತಾವು ಬರೆದ ಕಥೆಗಳನ್ನು ಮನೆಯ ಪುಟ್ಟಮಕ್ಕಳಿಗೆ ಕೇಳಿಸಿ ತೃಪ್ತರಾಗುತ್ತಿದ್ದ ಸಾರಾ ಅವರು, ಮುಂದಿನ ದಿನಮಾನಗಳಲ್ಲಿ ತಮ್ಮ ಬರಹಗಳನ್ನು ದಿನಪತ್ರಿಕೆ, ವಾರಪತ್ರಿಕೆಗಳಿಗೆ ಪ್ರಕಟಣೆಗಾಗಿ ಕಳುಹಿಸಲು ಆರಂಭಿಸಿದರು. ಆದರೆ ಮೊದಮೊದಲು ಅವುಗಳು ಪ್ರಕಟವಾಗದೆ ಹಿಂದಿರುಗುತ್ತಿದ್ದರಿಂದಾಗಿ ಸಾರಾ ಅವರಿಗೆ ಬರೆಯಬೇಕೆಂಬ ಆಸೆಯೇ ಇಂಗಿ ಹೋದಂತಾಯಿತು. ಆದರೂ ಸಹ ಛಲಬಿಡದ ಅವರು ಬರವಣಿಗೆ, ಓದುವ ಸೃಜನಶೀಲತೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡೇ ಇದ್ದರು. ಇದರ ಫಲವಾಗಿ ೧೯೮೦ರ ದಶಕದ ಅವಧಿ ಅವರ ಬದುಕು ಮತ್ತು ಬರವಣಿಗೆಯ ದೃಷ್ಟಿಯಿಂದ ಮಹತ್ವದ ತಿರುವನ್ನು ಪಡೆಯಿತು. ಲಂಕೇಶ್‌ರವರು ತಮ್ಮ 'ಲಂಕೇಶ ಪತ್ರಿಕೆ'ಯನ್ನು ಆರಂಭಿಸಿದ್ದ ದಿನಮಾನಗಳಲ್ಲಿ 'ನನ್ನ ಈ ಜನ ಒಂದಾಗಬೇಕು' ಎಂದು ಕರೆಕೊಟ್ಟಾಗ ಸಾರಾ ಅವರು ಅದಕ್ಕೊಂದು ಪ್ರತಿಕ್ರಿಯೆ ಬರೆದು ಕಳುಹಿಸಿದರು. ಈ ಪ್ರತಿಕ್ರಿಯೆ ಮರು ವಾರವೇ ಪತ್ರಿಕೆಯಲ್ಲಿ ಪ್ರಕಟವಾಯಿತು. ಮುಂದೆ ಹಲವಾರು ಲೇಖನಗಳನ್ನೊಳಗೊಂಡಂತೆ 'ಚಂದ್ರಗಿರಿ ತೀರದಲ್ಲಿ' ಕಾದಂಬರಿ, 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಎಂಬ ಆಂಶಿಕ ಆತ್ಮಕಥನಗಳು ಲಂಕೇಶ ಪತ್ರಿಕೆಯ ಮೂಲಕ ಪ್ರಕಟಣೆಗೊಂಡವು. ಅಲ್ಲಿಂದ ಸಾರಾ ಅವರು ನಿರಂತರವಾಗಿ ಬರವಣಿಗೆಯಲ್ಲಿ ತೊಡಗಿಸಿಕೊಳ್ಳುತ್ತಲೇ ಬಂದರು. ಪರಿಣಾಮವಾಗಿ ಅನೇಕ ಕಾದಂಬರಿಗಳು, ಕಥೆಗಳು, ಅನುವಾದಗಳು, ಲೇಖನಗಳು ಸೇರಿದಂತೆ ಹಲವಾರು ಕೃತಿಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯಾಗಿ ಸಂದಿವೆ.

### ೩.೫.೧. ಸಾರಾ ಅಬೂಬಕ್ಕರ್: ಸಾಹಿತ್ಯಿಕ ಸೃಜನಶೀಲತೆ

ಸಾರಾ ಅಬೂಬಕ್ಕರ್ ಅವರು ಸಾಹಿತ್ಯ ಮತ್ತು ಬದುಕನ್ನು ಭಿನ್ನವಾಗಿ ಕಂಡವರಲ್ಲ. ವಾಸ್ತವ ಜೀವನದ ಕಟುಸತ್ಯಗಳನ್ನು, ವಿವಿಧ ಮಗ್ಗಲುಗಳನ್ನು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಪರಿಚಯಿಸಿದವರು. ಕಂಡದ್ದನ್ನು ಕಂಡ ಹಾಗೆಯೇ ಹೇಳುವ ದಿಟ್ಟ ಪ್ರವೃತ್ತಿ ಅವರ ಬರವಣಿಗೆಗೆ ಮತ್ತಷ್ಟು ಸತ್ವವನ್ನು ಒದಗಿಸಿದೆ. ಈ ಬಗೆಯ ಮನೋಧರ್ಮದೊಂದಿಗೆ ಅದರಲ್ಲೂ ಒಬ್ಬ ಮುಸ್ಲಿಂ ಸಮುದಾಯದ ಲೇಖಕಿಯಾಗಿ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ ಸಾರಾ ಅವರು ಹಲವಾರು ಬಗೆಯ ಸವಾಲುಗಳನ್ನು ಎದುರಿಸಬೇಕಾಗಿ ಬಂದಿತು. ಮುಸ್ಲಿಂ ಮಹಿಳಾ ಸಂವೇದನೆ ಮತ್ತು ಬದುಕನ್ನು ತಮ್ಮ ಕಥೆ-ಕಾದಂಬರಿಗಳ ಪಾತ್ರಗಳಲ್ಲಿ ಅನಾವರಣಗೊಳಿಸಲು ಹೊರಟ ಸಾರಾ ಅವರು ಧರ್ಮವಿರೋಧಿ ಎಂಬ ಅಪವಾದವನ್ನು ತಮ್ಮದೇ ಸಮುದಾಯದಿಂದ ಹೊರಬೇಕಾಯಿತು. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯನ್ನು ಪ್ರಕಟಿಸಿದ ನಂತರ ಪುತ್ತೂರಿನ ಪ್ರಗತಿಪರ ಸಂಘಟನೆಯವರು ಆಯೋಜಿಸಿದ 'ಜನಾಂಗೀಯ ಅಧ್ಯಯನ' ಎಂಬ ವಿಚಾರ

ಸಂಕಿರಣಕ್ಕೆ ತೆರಳಿದ್ದರು. ಈ ವೇಳೆ 'ಕರಾವಳಿಯಲ್ಲಿ ಮುಸ್ಲಿಂ ಮಹಿಳೆಯರು' ಎಂಬ ವಿಷಯವನ್ನು ಕುರಿತು ಮಾತನಾಡಲು ಆರಂಭಿಸಿದಾಗ ಅಲ್ಲಿ ಪತ್ರಕರ್ತನೆಂದು ಹೇಳಿಕೊಂಡು ಕುಳಿತಿದ್ದ ವ್ಯಕ್ತಿ "ನೀವು ಬುರ್ಖಾ ಹಾಕಿಲ್ಲ. ಆದ್ದರಿಂದ ನೀವು ಮುಸ್ಲಿಮರಲ್ಲ. ಮುಸ್ಲಿಂ ಮಹಿಳೆಯ ಬಗ್ಗೆ ನೀವೇನು ಮಾತಾಡೋದು"[೩೩] ಎಂದಾಗ ದೊಡ್ಡಮಟ್ಟದ ಗಲಭೆ ಏರ್ಪಟ್ಟಿತು. ಈ ಸಂದರ್ಭದಲ್ಲಿ ಅಲ್ಲೇ ಇದ್ದ ಅವರ ಪತಿಯನ್ನೂ ನಿಂದಿಸಲಾಯಿತು. ಅದುವರೆಗೂ ಸಾರ್ವಜನಿಕವಾಗಿ ಯಾವುದೇ ಸಭೆ, ಸಮಾರಂಭಗಳಲ್ಲಿ ಕಾಣಿಸಿಕೊಳ್ಳದ ಸಾರಾ ಅವರಿಗೆ ಈ ಘಟನೆ ತೀವ್ರ ಆಘಾತ ತಂದಿತು. ನಂತರದಲ್ಲಿ 'ಸಹನಾ' ಕಾದಂಬರಿ ಬರೆದಾಗಲೂ ಅವರ ಮೇಲೆ ಆಕ್ರಮಣ ದಂತಹ ಪ್ರಸಂಗಗಳು ಎದುರಾದವು. ಆದರೂ ಈ ಸಂದರ್ಭಗಳನ್ನು ಪ್ರೇರಣೆಯಾಗಿಸಿಕೊಂಡ ಸಾರಾ ಅವರು ತಮ್ಮ ಬರವಣಿಗೆಯನ್ನು ಮುಂದುವರೆಸಿದರು. ಇಂತಹ ಸನ್ನಿವೇಶಗಳಲ್ಲಿ ಅವರಿಗೆ ಫಕೀರ್ ಮಹಮ್ಮದ್ ಕಟ್ಪಾಡಿ, ಅನುಪಮಾ ನಿರಂಜನ ಮುಂತಾದ ಸಾಹಿತಿಗಳು ಮತ್ತು ಕುಟುಂಬವರ್ಗದವರು ಬೆಂಬಲವಾಗಿ ನಿಂತದ್ದು ಮತ್ತಷ್ಟು ಮನೋಸ್ಥೈರ್ಯ ಒದಗಿಸಿತು. ಮುಂದೊಂದು ದಿನ ಸಾರಾ ಅವರ ಪತಿಯ ಮರಣದ ಸಂದರ್ಭದಲ್ಲಿ ಇಸ್ಲಾಂ ಲೇಖಕರ ಸಂಘಟನೆಯೊಂದು ಅವರನ್ನು ಜಾತಿ ಬಹಿಷ್ಕಾರ ಮಾಡಬೇಕೆಂದು ಕರಪತ್ರಗಳನ್ನು ಹಂಚಿತು. ಆದರೆ ಇದಕ್ಕೆ ಜಗ್ಗದ ಸಾರಾ ಅವರು ಮೂಲಭೂತವಾದಿಗಳ ಮುಖವಾಣಿಯಾದ ಈ ಸಂಘಟನೆಯ ಮೇಲೆ ಮಾನನಷ್ಟ ಮೊಕದ್ದಮೆ ಹೂಡಿ ಕಾನೂನು ಹೋರಾಟದಲ್ಲಿ ಜಯಗಳಿಸಿದರು.

ಸಾರಾ ಅವರ ಬರವಣಿಗೆಯನ್ನು ತಡೆಯೊಡ್ಡಲು ಕೇವಲ ಧಾರ್ಮಿಕ, ಸಾಮುದಾಯಿಕವಾಗಿ ಮಾತ್ರವಲ್ಲದೆ, ಸಾಹಿತ್ಯ ಕ್ಷೇತ್ರದಲ್ಲಿಯೂ ನಾನಾ ಬಗೆಯ ಅಡೆತಡೆಗಳು ಎದುರಾದವು. ಈ ಕುರಿತಾಗಿ ಸ್ವತಃ ಸಾರಾ ಅವರೇ ತಮ್ಮ 'ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ' ಕೃತಿಯಲ್ಲಿ ಉಲ್ಲೇಖಿಸುತ್ತಾರೆ. ಆರಂಭದಲ್ಲಿ ಹಲವಾರು ಜನರು ಅವರ ಕೃತಿಗಳನ್ನು ಕಳಪೆ ಎಂದು ಜರಿದರು. ಬೇರೆ ಲೇಖಕಿಯರಿಗೆ ಇರದ ಪ್ರಚಾರ ಇವರಿಗೇಕೆ ಎಂದರು. ಪ್ರಗತಿಪರರು, ಕ್ರಾಂತಿಕಾರಿಗಳು, ಎಡಪಂಥೀಯರು ಎನಿಸಿದ ಜನರಿಂದ ತೀವ್ರ ಟೀಕೆಗಳು ಎದುರಾದವು. ಎಷ್ಟೋ ಜನ ನಿಮ್ಮ ಹೆಸರನ್ನು ಬದಲಿಸಿಕೊಂಡು ಬರವಣಿಗೆ ಮಾಡಿ ಎಂದು ಸಲಹೆಯಿತ್ತರು. ಹೀಗೆ "ಸ್ವಂತ ಸಮುದಾಯದ್ದೇ ವಿಮರ್ಶೆಗೆ ಹೊರಟಕೂಡಲೇ ಅದೇ ಸಮುದಾಯದ ಪಿತೃಪ್ರಧಾನ ಶಕ್ತಿಗಳು ಅದನ್ನು ಸ್ವಜಾತಿ ದ್ರೋಹವೆಂದು ಬಗೆದು ವಿಶ್ವಾಸ ದ್ರೋಹ, ವಂಚನೆಗಳ ಆರೋಪವನ್ನು ಹೊರಿಸಬಲ್ಲದು"[೩೪] ಎಂಬ ಸುಮಿತ್ರಬಾಯಿ ಅವರ ಮಾತನ್ನು ಸಾರಾ ಅವರು ಎದುರಿಸಿದ ಪರಿಸ್ಥಿತಿಗಳಿಗೆ ಪೂರಕವಾಗಿ ಹೇಳಬಹುದಾಗಿದೆ. ಕಾರಣ ಇತ್ತೀಚೆಗೆ ಸಾರಾ

ಅವರಂತೆಯೇ ಸಮಾಜದ ಎಲ್ಲ ವರ್ಗದ ಮಹಿಳೆಯರು ಬರವಣಿಗೆಯಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಮೇಲ್ನೋಟಕ್ಕೆ ಕಾಣುವ ಬಡತನ, ಶ್ರೀಮಂತಿಕೆ, ಜಾತಿ, ಕುಟುಂಬ ಇತ್ಯಾದಿ ವಸ್ತುಗಳನ್ನಿಟ್ಟುಕೊಂಡು ಬರೆಯುವಲ್ಲಿ ಲೇಖಕಿಯರಿಗೆ ಸ್ವಲ್ಪ ಮಟ್ಟದ ಪ್ರೋತ್ಸಾಹವಿದೆ. ಆದರೆ ಪಿತೃ ವ್ಯವಸ್ಥೆಯ ಒಳಲೋಪಗಳನ್ನು, ಲಿಂಗರಾಜಕಾರಣಗಳನ್ನು ಶೋಧಿಸಿ, ಪ್ರಶ್ನಿಸುವ ಬರಹಗಳಲ್ಲಿ ತೊಡಗಿದಾಗ ಮಾತ್ರ ಎಲ್ಲಾ ಮೂಲಗಳಿಂದಲೂ ಅದನ್ನು ತಡೆಯುವ ಪ್ರಯತ್ನಗಳಾಗುತ್ತವೆ ಎಂಬುದಕ್ಕೆ ಸಾರಾ ಅವರ ಬದುಕು ನಿದರ್ಶನವಾಗಬಲ್ಲದು. ಹೀಗಿರುವಾಗಲೂ ಸಾರಾ ಅವರು ತಮ್ಮ ಸೃಜನಶೀಲ ಬರವಣಿಗೆಯಿಂದ ಹಿಂದೆ ಸರಿಯಲಿಲ್ಲ. ಇಲ್ಲಿಯವರೆಗೂ ಹಲವಾರು ಕಥೆ, ಕಾದಂಬರಿ, ರೇಡಿಯೋ ನಾಟಕ, ಪ್ರವಾಸ ಕಥನ, ಅನುವಾದ, ವೈಚಾರಿಕ ಲೇಖನಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾ ಬಂದಿದ್ದಾರೆ. ಇದರೊಂದಿಗೆ 'ಚಂದ್ರಗಿರಿ' ಎಂಬ ಸ್ವಂತ ಪ್ರಕಾಶನ ಸಂಸ್ಥೆಯನ್ನೂ ಕಟ್ಟಿ ಬೆಳೆಸಿದ ಸಾರಾ ಅವರ ಸಾಹಿತ್ಯ ಕೃತಿಗಳ ಪರಿಚಯ ಹೀಗಿದೆ:

**ಕಾದಂಬರಿಗಳು**

- ಚಂದ್ರಗಿರಿ ತೀರದಲ್ಲಿ(೧೯೮೪)
- ಸಹನಾ(೧೯೮೫)
- ವಜ್ರಗಳು(೧೯೮೮)
- ಕದನ ವಿರಾಮ(೧೯೯೧)
- ಸುಳಿಯಲ್ಲಿ ಸಿಕ್ಕವರು(೧೯೯೪)
- ಪ್ರವಾಹ ಸುಳಿ(೧೯೯೬)
- ತಳ ಒಡೆದ ದೋಣಿಯಲಿ(೧೯೯೭)
- ಪಂಜರ(೨೦೦೪)
- ಇಳಿಜಾರು
- ಕಾಣಿಕೆ

**ಕಥಾಸಂಕಲನಗಳು**

- ಚಪ್ಪಲಿಗಳು(೧೯೮೯)
- ಪಯಣ ಮತ್ತು ಇತರ ಕಥೆಗಳು(೧೯೯೨)

- ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು(೧೯೯೬)
- ಖೆಡ್ದಾ(೧೯೯೯)
- ಸುಮಯ್ಯಾ(೨೦೦೪)
- ಗಗನ ಸಖಿ(೨೦೦೮)
- ಚಪ್ಪಲಿಗಳು(ಸಮಗ್ರ ಕಥೆಗಳು ಭಾಗ ೧, ೨೦೧೦)

**ಬಾನುಲಿ ನಾಟಕಗಳು**

- ಕಮರಿದ ಕನಸು
- ಮಗಳು ಹುಟ್ಟಿದಳು
- ತೇಲಾಡುವ ಮೋಡಗಳು
- ತಾಳ
- ಹೀಗೂ ಒಂದು ಬದುಕು ಬದುಕಬಹುದು

**ಅನುವಾದ(ಮಲೆಯಾಳದಿಂದ ಕನ್ನಡಕ್ಕೆ)**

- ಮನೋಮಿ(೧೯೯೩)
- ಬಲೆ(೧೯೯೮)
- ನಾನಿನ್ನೂ ನಿದ್ರಿಸುವೆ(೨೦೧೦)
- ತುರ್ತು ಪರಿಸ್ಥಿತಿಯ ಕರಾಳ ಮುಖ(೨೦೦೭)
- ಧರ್ಮದ ಹೆಸರಿನಲ್ಲಿ

**ಲೇಖನ ಸಂಗ್ರಹ**

- ಲೇಖನ ಗುಚ್ಛ(೧೯೯೭)
- ಅನಾವರಣ(೨೦೦೦)
- ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ(೨೦೦೭)

ಇತರೆ

- ಐಷಾರಾಮದ ಆಳದಲ್ಲಿ(ಪ್ರವಾಸ ಕಥನ ೨೦೦೧)
- ತೇಲಾಡುವ ಮೋಡಗಳು(ಬಾನುಲಿ ನಾಟಕಗಳ ಸಂಗ್ರಹ, ೨೦೦೨)
- ಹೊತ್ತು ಕಂತುವ ಮುನ್ನ(ಆತ್ಮಚರಿತ್ರೆ ೨೦೧೦)

**೩.೫.೨. ಮುಸ್ಲಿಂ ಮಹಿಳೆಯರ ಸಂವೇದನೆ**

ಬಂಡಾಯ ಸಾಹಿತ್ಯಕ್ಕೆ ಹೊಸ ವ್ಯಾಖ್ಯಾನವನ್ನು ಕೊಟ್ಟ ಮುಸ್ಲಿಂ ಸಮುದಾಯದ ಲೇಖಕಿಯಾಗಿ ಸಾರಾ ಅಬೂಬಕ್ಕರ್ ಪ್ರಮುಖರಾದವರು. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ಮೂಲಕ ಸಾಹಿತ್ಯ ಲೋಕಕ್ಕೆ ಪರಿಚಿತರಾದ ಸಾರಾ ಅವರು ತಮ್ಮ ಮೊದಲ ಕಾದಂಬರಿಯಲ್ಲಿಯೇ ಕೌಟುಂಬಿಕ, ಧಾರ್ಮಿಕ, ಸಾಮಾಜಿಕ, ಚೌಕಟ್ಟುಗಳ ಮಧ್ಯೆ ಬದುಕುತ್ತಿರುವ ಮುಸ್ಲಿಂ ಮಹಿಳೆಯರ ಸೂಕ್ಷ್ಮ ಸಂವೇದನೆಗಳಿಗೆ ದನಿಯಾದವರು. ಕರಾವಳಿ ತೀರದ ಮುಸ್ಲಿಂ ಜನರ ಬದುಕು-ಬವಣೆಗಳನ್ನು ಅಲ್ಲಿನ ಪ್ರಾದೇಶಿಕ ಪರಿಸರವನ್ನು ಅತ್ಯಂತ ಸಹಜವಾಗಿ ಚಿತ್ರಿಸಿದರು. ಅದುವರೆಗಿನ ಕನ್ನಡ ಕಥಾ ಸಾಹಿತ್ಯದಲ್ಲಿ ಮುಸ್ಲಿಂ ಸಮುದಾಯದ ಪಾತ್ರಗಳ ಚಿತ್ರಣ ಹಲವಾರು ಪ್ರಸಿದ್ಧ ಬರಹಗಾರರಲ್ಲಿ ಮೂಡಿಬಂದಿದ್ದವು. ಆದರೆ ಸಾರಾ ಅವರ ಪಾತ್ರಗಳ ದೃಷ್ಟಿಕೋನ ಬೇರೆಯದೇ ಆಗಿತ್ತು. "ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಪಾತ್ರಗಳು ಅಲ್ಲೊಂದು ಇಲ್ಲೊಂದು ಕಾಣಿಸಿಕೊಂಡಿದ್ದರೂ ಅವುಗಳು ಜಟಕಾ ಸಾಬಿಯೋ, ವೇಶ್ಯೆಯೋ, ಮೀನು ಮಾರುವವನೋ ಆಗಿ ಕಾಣಿಸಿಕೊಂಡಿದ್ದವೋ ಹೊರತು ಸಾಮಾನ್ಯ ಮುಸ್ಲಿಂ ಸಮಾಜದ ನೈಜ ಚಿತ್ರಣ ಕನ್ನಡ ಸಾಹಿತ್ಯದಲ್ಲಿ ಮೂಡಿ ಬರಲೇ ಇಲ್ಲ. ಈ ಕೊರತೆಯನ್ನು ನನ್ನಿಂದಾದ ಮಟ್ಟಿಗೆ ತುಂಬುವುದು ಕೂಡಾ ನನ್ನ ಸಾಹಿತ್ಯ ರಚನೆಯ ಉದ್ದೇಶವಾಗಿತ್ತು."[೩೫] ಸಾರಾ ಅವರ ಈ ಮಾತುಗಳು ಪಾತ್ರ ಸೃಷ್ಟಿಯ ಬಗ್ಗೆ ಅವರಿಗಿದ್ದ ಮನೋಧರ್ಮವನ್ನು ತಿಳಿಸಿಕೊಡುತ್ತವೆ. ಸಾರಾ ಅವರ ಬರವಣಿಗೆಯ ಅಭಿವ್ಯಕ್ತಿ ಕ್ರಮವೂ ಸಹ ವಿಶಿಷ್ಟವಾದುದು. ಎಂ.ಎಸ್.ಆಶಾದೇವಿಯವರು ಅವರ ಬರವಣಿಗೆಯ ಕ್ರಮವನ್ನು ಹೀಗೆ ಗ್ರಹಿಸುತ್ತಾರೆ "ಸಾರಾ ಅವರ ಬರವಣಿಗೆಯಲ್ಲಿ ಒಂದು ಮಹಿಳಾ ಕೇಂದ್ರವಾದರೆ, ಇನ್ನೊಂದು ಬದುಕಿನ ಕೇಂದ್ರ ಈ ಎರಡರಲ್ಲಿ ಯಾವುದೋ ಒಂದನ್ನು ಮಾತ್ರ ಚರ್ಚಿಸುವುದೆಂದರೆ ಸಾರಾ ಅವರ ಬರವಣಿಗೆಗಾಗುವ ಅನ್ಯಾಯವೆಂದೇ ಅನ್ನಿಸುತ್ತದೆ."[೩೬] ಹೀಗಾಗಿ ಸಾರಾ ಅವರ ಬರಹಗಳನ್ನು ಕೇವಲ ಮುಸ್ಲಿಂ ಮಹಿಳೆಯರ ಬದುಕಿನ ಅನಾವರಣವೆಂಬಂತೆ ಕಾಣದೆ, ಅದರೊಳಗಿನ ಮುಸ್ಲಿಂ ಜನ ಸಮುದಾಯದ ಸಹಜ ಸಾಮಾನ್ಯ ಜೀವನದ ನೈಜತೆಯನ್ನೂ ಗುರುತಿಸುವ ಅವಕಾಶವೂ ಇದೆ ಎಂಬುದನ್ನು ಇವರ ಮಾತುಗಳು ತಿಳಿಸಿಕೊಡುತ್ತವೆ.

ಸಾರಾ ಅವರ ಕಥಾ ಸಾಹಿತ್ಯವನ್ನು ವಿಶ್ಲೇಷಿಸುವಾಗ ಅಲ್ಲಿನ ವಸ್ತು ವಿಷಯಗಳನ್ನು ಅನುಸರಿಸಿ ಮೂರು ಹಂತಗಳನ್ನು ಕಾಣಬಹುದಾಗಿದೆ. ಮೊದಲ ಹಂತದ ಕಥೆಗಳಲ್ಲಿ ತಮ್ಮ ಪ್ರಾದೇಶಿಕ ಪರಿಸರದ ಮುಸ್ಲಿಂ ಸಮುದಾಯದ ಬದುಕು, ಧಾರ್ಮಿಕ, ಕೌಟುಂಬಿಕ, ಸಾಮಾಜಿಕ ನೆಲೆಯಲ್ಲಿ ಹೆಣ್ಣಿನ ಮೇಲಿನ ಶೋಷಣೆಗಳನ್ನು, ಸಂವೇದನೆಗಳನ್ನು ಚಿತ್ರಿಸಿದರು. ನಂತರದ ಹಂತದಲ್ಲಿ ವೈವಾಹಿಕ ಬಿಕ್ಕಟ್ಟುಗಳು, ಲಿಂಗಾಧಾರಿತ ಅಸಮಾನತೆ, ಮುಸ್ಲಿಂ ಮಹಿಳೆಯರ ಗಂಭೀರ ಸಮಸ್ಯೆಗಳನ್ನು ಚರ್ಚೆಗೆ ಒಳಪಡಿಸುತ್ತಾರೆ. ಮೂರನೆಯ ಹಂತದಲ್ಲಿ ಸುಶಿಕ್ಷಿತ, ಆರ್ಥಿಕ ಸ್ವಾವಲಂಬನೆ ಹೊಂದಿದ ವೈಚಾರಿಕತೆಯನ್ನು ಮೈಗೂಡಿಸಿಕೊಂಡ ಮಹಿಳಾ ಪಾತ್ರಗಳು ಬರುತ್ತವೆ. ಹೆಣ್ಣಿನ ವೈಯಕ್ತಿಕ ಬದುಕನ್ನು ಧಾರ್ಮಿಕ ಕಟ್ಟುಪಾಡುಗಳು ಬಂಧಿಸುವ ಆಯಾಮಗಳು ಇವರ ಕಥೆಗಳಲ್ಲಿ ವಿಶ್ಲೇಷಣೆಗೆ ಒಳಗಾಗಿವೆ. ಮೊದಲ ಹಂತದಲ್ಲಿ ಬಂದ 'ಚಂದ್ರಗಿರಿ ತೀರದಲ್ಲಿ', 'ಸಹನಾ', 'ವಜ್ರಗಳು' ಕಾದಂಬರಿಗಳಲ್ಲಿ ಬಡತನ, ಅಸಹಾಯಕತೆಗಳಿಂದ ಕೌಟುಂಬಿಕ ಜಗತ್ತಿನ ಒಳಗೆ ಬದುಕುವ ಹೆಣ್ಣುಮಕ್ಕಳ ಚಿತ್ರಣವಿದೆ. ಇಲ್ಲಿ ಶಿಕ್ಷಣ, ಹೊರಜಗತ್ತಿನೊಂದಿಗಿನ ಒಡನಾಟ, ವೈಯಕ್ತಿಕ ಆಪೇಕ್ಷೆಗಳು, ಸಾಮಾಜಿಕ ಸ್ವಾತಂತ್ರ್ಯಗಳಿಗೆ ತೆರೆದುಕೊಳ್ಳುವ ಹೆಣ್ಣಿನ ಆಶಯಗಳನ್ನು ಅಪಚಾರವೆಂದು, ಆಕೆಯನ್ನು ಹಾಳು ಮಾಡುವ ಸಂಗತಿಗಳೆಂದು ಪುರುಷ ಸಮುದಾಯ ಭಾವಿಸುತ್ತದೆ. ಹೆಣ್ಣೆಂದರೆ ಉಪಭೋಗದ ವಸ್ತುವಾಗಿ ಪರಿಗಣಿಸಿ ಅವರನ್ನು 'ಚಪ್ಪಲಿಗಳಿಗೆ' ಹೋಲಿಸುವ ಮನೋಧರ್ಮಗಳಿವೆ. ತಮ್ಮದಲ್ಲದ ತಪ್ಪಿಗೆ ಪುರುಷ ವರ್ಗದ ಪ್ರತಿಷ್ಠೆಗೆ ಒಳಗಾಗುವ ಮುಗ್ಧ ಹೆಣ್ಣುಮಕ್ಕಳು ಕಾದಂಬರಿಗಳ ಮುಖ್ಯ ಪಾತ್ರಗಳಾಗಿವೆ. 'ತಲಾಖ್'ನಿಂದ ಬದುಕಿನ ಕಠೋರತೆಗೆ ಎದುರಾಗಿ, ಮದುಮದುವೆಯ ಅವಕಾಶವನ್ನೂ ನಿರಾಕರಿಸಿ ದುರಂತ ಅಂತ್ಯ ಕಾಣುವ ಕಥಾನಾಯಕಿಯರ ಚಿತ್ರಣವಿದೆ.

ಸಾರಾ ಅವರ 'ಧ್ವನಿಯಿಲ್ಲದ ನೋವುಗಳು', 'ಅಂಕುರ', 'ಉರಿಬಿಸಿಲು', 'ಬೇಟೆ', 'ಅರಕ್ಷಿತ', 'ಮರಿಯಮ್ಮನ ಅಳಿಯ' ಕಥೆಗಳಲ್ಲಿ ಕೊಲ್ಲಿ ರಾಷ್ಟ್ರಗಳಿಗೆ ದುಡಿಯಲು ಹೋಗುವ ಗಂಡಂದಿರ ಅನುಪಸ್ಥಿತಿಯಲ್ಲಿ ಕುಟುಂಬದ ಜವಾಬ್ದಾರಿ ಹೊರುವ ಸ್ತ್ರೀ ಪಾತ್ರಗಳಿವೆ. ಆದರೆ ವರದಕ್ಷಿಣೆಯ ಬೆಂಕಿಗೆ ಬಿದ್ದು ಬೇಯುವ, ಇಚ್ಛಾಶಕ್ತಿ, ಸೃಜನಶೀಲತೆಗಳನ್ನು ಒತ್ತೆ ಇಟ್ಟು ಬದುಕುವ ಸ್ಥಿತಿ ಈ ಪಾತ್ರಗಳದು. ಎಷ್ಟೋ ಸಲ ದೂರದ ದೇಶದಲ್ಲಿರುವ ತಮ್ಮ ಗಂಡಂದಿರೊಂದಿಗೆ ಸಂವಹನ ಸಾಧಿಸಲಾಗದೆ ಮಧ್ಯವರ್ತಿಗಳ ಹುನ್ನಾರದಿಂದ ಇಲ್ಲಿನ ಬದುಕು ದುರಂತಕ್ಕೆ ಒಳಗಾಗುವ ಹೆಣ್ಣಿನ ಚಿತ್ರಣಗಳಿವೆ. ಕಡ್ಡಾಯದ ತಾಯ್ತನದ ಮೂಲಕ ಮಕ್ಕಳನ್ನು ಹೆರುವುದೇ ಹೆಣ್ಣಿನ ಜೀವನದ ಪರಮಧರ್ಮ ಎಂದು ಶೋಷಣೆಗೊಳಗಾಗುವುದನ್ನು 'ಹುಟ್ಟು', 'ನಿಯಮ

ನಿಯಮಗಳ ನಡುವೆ' ಕಥೆಗಳಲ್ಲಿ ಕಾಣುತ್ತೇವೆ. ಮೋಸದ ಪ್ರೀತಿಗೆ ಸಿಲುಕಿ ವಿವಾಹ ಪೂರ್ವದಲ್ಲಿಯೇ ತಾಯಿಯಾದ ಕಥಾನಾಯಕಿಯ ಬಗ್ಗೆ ಸಮಾಜದ ಅನಾದರಣೆಯನ್ನು 'ಪಂಜರ' ಕಾದಂಬರಿಯಲ್ಲಿ ಸಾರಾ ಅವರು ನಿರೂಪಿಸುತ್ತಾರೆ. "ಹಸಿವೆ, ಬಡತನದ ಕಾರಣಕ್ಕಾಗಿ ಎದುರಿಸಬೇಕಾಗುವ ನೂರು ಬಗೆಯ ಅವಮಾನಗಳು ಸಾರಾ ಅವರ ಬದುಕಿನ ಶೋಧದ ಪ್ರಮುಖ ಅಂಶಗಳು. ಪರಿಹಾರವಿಲ್ಲದ ಶಾಪದಂತೆ ಕಾಡುವ ಬಡತನ ಮತ್ತು ಹಸಿವೆಗಳು ಮನುಷ್ಯನನ್ನು ಏನೆಲ್ಲ ಉಪಾಯಗಳನ್ನು ಸೃಷ್ಟಿಸಲು ಪ್ರಚೋದಿಸುತ್ತವೆ ಎನ್ನುವುದರ ಬಗೆಗೆ ಸಾರಾ ಅವರಿಗೆ ತುಂಬಾ ಕುತೂಹಲವಿದೆ ಎನಿಸುತ್ತದೆ. ಕಳ್ಳತನವೋ, ಸುಳ್ಳೋ, ಮೋಸವೋ ಈ ಎಲ್ಲವನ್ನೂ ಸಾರಾ ಅಬೂಬಕ್ಕರ್ ಅವರು ನೈತಿಕ ನೆಲೆಯಲ್ಲಿ ನೋಡಲು ಪ್ರಯತ್ನಿಸುವುದಿಲ್ಲ. ಶುದ್ಧ ಮಾನವೀಯ ನೆಲೆಯಲ್ಲಿ ಪರಿಶೀಲಿಸಿದಾಗ ಈ ಎಲ್ಲವೂ ಮನುಷ್ಯ ಸಹಜ ನಡವಳಿಕೆಗಳಾಗಿ ಅವರಿಗೆ ಕಾಣಿಸುತ್ತವೆ."[೩೭] ಎಂ.ಎಸ್.ಆಶಾದೇವಿಯವರು ಹೇಳುವ ಪ್ರಸ್ತುತ ಮಾತುಗಳು ಸಾರಾ ಅವರ ಬಹುತೇಕ ಕಥೆಗಳು ಹಸಿವು ಮತ್ತು ಬಡತನದ ನಿವಾರಣೆಗೆ ಶೋಧಿಸುವ ಪರಿಹಾರ ಹಾಗೂ ಈ ಹಾದಿಯಲ್ಲಿ ಎದುರಿಸುವ ನೋವು, ದುರಂತಗಳನ್ನು ಕಟ್ಟಿಕೊಡುತ್ತವೆ ಎಂಬ ಸಾರಾಂಶವನ್ನು ಸೂಚಿಸುತ್ತವೆ.

ಬದುಕಿನ ಕಠಿಣ ಸಂದರ್ಭಗಳಲ್ಲಿ ನೈತಿಕತೆಗಿಂತಲೂ ಹಸಿವು ಮತ್ತು ಬಡತನಗಳೇ ದೊಡ್ಡ ಪ್ರಶ್ನೆಗಳಾಗಿ ಕಾಣಿಸಿಕೊಳ್ಳುತ್ತವೆ. 'ಪಂಜರ' ಕಾದಂಬರಿ, 'ಬಿಸಿಲುಕುದುರೆಯ ಬೆನ್ನು ಹತ್ತಿ', 'ಮಸೀದಿ ಕಟ್ಟುವವರು', 'ಬಿರುಗಾಳಿ' ಮುಂತಾದ ಕಥೆಗಳು ಈ ಮಾದರಿಗೆ ಉದಾಹರಣೆಯಾಗಿವೆ. ಐಷಾರಾಮಿ ಜೀವನದ ಆಪೇಕ್ಷೆಯಿಂದ ಭೂಗತ ಜಗತ್ತಿನೊಂದಿಗೆ ವ್ಯವಹರಿಸಿ ಸಮಾಜ ಘಾತಕ ವ್ಯಕ್ತಿಯಾಗಿ ಅದೇ ಕ್ರೌರ್ಯದ ಪ್ರವಾಹದಲ್ಲಿ ಸಿಕ್ಕು ನಾಶವಾಗುವ ದುರಂತ 'ಬಿಸಿಲ್ಗುದುರೆಯ ಬೆನ್ನು ಹತ್ತಿ' ಕಥೆಯಲ್ಲಿದೆ. ಕೊಲ್ಲಿ ರಾಷ್ಟ್ರಗಳಿಗೆ ದುಡಿಯಲು ಹೋಗಿ ಅಲ್ಲಿನ ಮೋಸ, ದುರಂತಗಳಿಗೆ ಬಲಿಯಾಗುವುದನ್ನು 'ಮಸೀದಿ ಕಟ್ಟುವವರು' ಕಥೆ ಹೇಳುತ್ತದೆ. ದೂರದ ರಾಷ್ಟ್ರಗಳಲ್ಲಿ ಹೊಟ್ಟೆ ಪಾಡಿಗಾಗಿ ದುಡಿಯಲು ಹೋದ ಗಂಡ, ಮಕ್ಕಳ ಮೇಲೆ ನಿರೀಕ್ಷೆಯಿಟ್ಟು ಕಾಯುವ ಹೆಣ್ಣುಮಕ್ಕಳ ಕಾತರ, ಕಷ್ಟನಷ್ಟಗಳು, ಮಾನಸಿಕ ಅಭದ್ರತೆ 'ಬಿರುಗಾಳಿ'ಯಂತಹ ಕಥೆಗಳ ಮೂಲಕ ಓದುಗರ ಮನಕಲಕುತ್ತವೆ. ಇವೆಲ್ಲವೂ ಸಾರಾ ಅವರ ಮೊದಲ ಎರಡು ಹಂತದ ಸಂಕ್ಷಿಪ್ತ ಕಥಾ ಸಾಹಿತ್ಯದ ವಿಶ್ಲೇಷಣೆಯಾಗಿದೆ.

ಸಾರಾ ಅವರು "ಕರಾವಳಿಯ ಮುಸ್ಲಿಂ ಮಹಿಳಾ ಲೋಕದ ಅನನ್ಯ ಅನುಭವಗಳನ್ನು ಅದರ ಪ್ರತಿರೋಧದ ನೆಲೆಗಳೊಂದಿಗೆ ಗುರುತಿಸುತ್ತಲೇ ಅದರಾಚೆಗಿನ ಕಾಲ-ದೇಶ-ಧರ್ಮಗಳನ್ನು

ಮೀರಿದ ಬದುಕನ್ನೂ ಕೇಂದ್ರವಾಗಿಟ್ಟುಕೊಂಡು ಅದರ ಶೋಧಕ್ಕೂ ತೊಡಗುತ್ತಾರೆ"[೩೮] ಎಂಬ ಎಲ್.ಜಿ.ಮೀರಾ ಅವರ ಮಾತುಗಳನ್ನು ಅವರ ಮೂರನೆಯ ಹಂತದ ಬರವಣಿಗೆ ನಿರೂಪಿಸುತ್ತದೆ. ಕಾರಣ 'ನಿರ್ಧಾರ', 'ಸಲಹೆ', 'ಹಳೆಬೇರು ಹೊಸ ಚಿಗುರು', 'ಓ ರಾಮಾ...', 'ಹೊಸದಿಕ್ಕು', 'ಬೇಟೆ', 'ಧರ್ಮ ಬಲೆಬೀಸಿದಾಗ', 'ಪಯಣ', 'ಸುಮಯ್ಯಾ', 'ಹುಸುನುಲ್ ಜಮಾಲ್' ಮುಂತಾದ ಕಥೆಗಳಲ್ಲಿ ಹೆಣ್ಣಿನ ಸುಶಿಕ್ಷಿತತೆ, ಸ್ವಯಂ ನಿರ್ಧಾರಕ ಶಕ್ತಿ, ಸಾಮಾಜಿಕ ಸ್ವಾತಂತ್ರ್ಯ, ಧರ್ಮ ಹಾಗೂ ಮುಸ್ಲಿಂ ಪುರೋಹಿತಶಾಹಿಯ ವಿರುದ್ಧದ ಪ್ರತಿಭಟನೆಗಳು ಮುನ್ನೆಲೆಗೆ ಬಂದಿವೆ. ಇದನ್ನು ಸಾರಾ ಅವರ ಬವಣಿಗೆಯಲ್ಲಿ ಕಾಣಿಸಿಕೊಂಡ ಈ ಹಂತದ ಮಹತ್ವದ ಪರಿವರ್ತನೆಯಾಗಿ ಗುರುತಿಸಬಹುದಾಗಿದೆ.

ಕೊನೆಯದಾಗಿ ಸಾರಾ ಅವರ ಕಥೆಗಳು ಮುಸ್ಲಿಂ ಮಹಿಳಾ ಲೋಕದ ಅನನ್ಯತೆಯನ್ನು ಹೇಳುತ್ತದೆ ಎಂಬುದನ್ನು ಏಕಮುಖವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಕಾರಣ ಅವರ ಕಥಾ ಸಾಹಿತ್ಯದಲ್ಲಿ ಜಗತ್ತಿನ ಎಲ್ಲ ಹೆಣ್ಣುಮಕ್ಕಳಲ್ಲಿಯೂ ಇರುವ ಸಹಜ ಸ್ಥಿತಿಯ ಪರಿಚಯವಾಗುತ್ತದೆ. ಬಹುಕಾಲದಿಂದಲೂ ಎಲ್ಲ ಪ್ರದೇಶ, ಧರ್ಮ, ಸಮುದಾಯ, ವರ್ಗಗಳಲ್ಲಿಯೂ ಪಿತೃಪ್ರಧಾನತೆಯ ಬಿಗಿಮುಷ್ಟಿಯಲ್ಲಿ ಹೆಣ್ಣುಮಕ್ಕಳು ಒಂದಲ್ಲ ಒಂದು ರೀತಿಯ ಸಂಕಷ್ಟಗಳನ್ನು ಎದುರಿಸುತ್ತಲೇ ಬಂದಿರುವುದು ಇದಕ್ಕೆ ಕಾರಣವಾಗಿದೆ. ಪಿತೃಪ್ರಧಾನತೆ ಮತ್ತು ಹೆಣ್ಣಿನ ಶೋಷಣೆಯನ್ನು ಪೋಷಿಸುವ ಬಡತನ, ಅನಕ್ಷರತೆ, ಧಾರ್ಮಿಕ ನಂಬಿಕೆಗಳನ್ನು ಸಾರಾ ಅವರು ಗುರುತಿಸುತ್ತಾರೆ. ಆಯಾ ಸಮುದಾಯ, ಪ್ರದೇಶ, ಧರ್ಮ ಇತ್ಯಾದಿ ವಿಭಿನ್ನ ಪರಿಸರದಲ್ಲಿ ಬದುಕುತ್ತಿರುವ ಹೆಣ್ಣಿನ ಸಮಸ್ಯೆಗಳ ಸ್ವರೂಪ ಬೇರೆಯಾಗಿದೆ. ಆದರೆ ಅವುಗಳ ಮೂಲ ಒಂದೇ(ಪಿತೃಪ್ರಧಾನ ಸಂಸ್ಕೃತಿ) ಎಂಬುದು ಗಮನಾರ್ಹ ಸಂಗತಿಯಾಗಿದೆ. ಆದ್ದರಿಂದ ಸಾರಾ ಅವರನ್ನು ಮುಸ್ಲಿಂ ಮಹಿಳಾ ಸಂವೇದನೆಯ ಲೇಖಕಿಯಾಗಿ ಮಾತ್ರವಲ್ಲದೆ, ಮಾನವ ಸಹಜ ಸಂವೇದನೆಯ ಲೇಖಕಿಯಾಗಿ ಗುರುತಿಸುವುದು ಸರಿಯಾದ ತಿಳುವಳಿಕೆ ಎನಿಸುತ್ತದೆ.

### ೩.೬. ಬಿ.ಟಿ.ಲಲಿತಾ ನಾಯಕ್

೧೯೭೦-೮೦ರ ದಶಕದಲ್ಲಿ ಚಳುವಳಿಯ ರೂಪವನ್ನು ಪಡೆದ ದಲಿತ-ಬಂಡಾಯ ಸಾಹಿತ್ಯದಲ್ಲಿ ಪ್ರಮುಖ ಲೇಖಕಿಯಾಗಿ ಗುರುತಿಸಿಕೊಂಡವರು ಬಿ.ಟಿ.ಲಲಿತಾ ನಾಯಕ್. ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ಬಾರಿಗೆ ಬುಡಕಟ್ಟು ಸಮುದಾಯದ ಸಂವೇದನೆಗಳಿಗೆ ಬರಹದ ರೂಪವನ್ನು ಕೊಟ್ಟ ಲೇಖಕಿಯಾಗಿದ್ದಾರೆ. ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲೂಕಿನ ತಂಗಲಿ ತಾಂಡಾದಲ್ಲಿ ೪.೪.೧೯೪೫ರಲ್ಲಿ ಲಲಿತಾ ನಾಯಕ್ ಅವರು ಜನಿಸಿದರು. ತಂದೆ ಬಾಲಾಜಿ ನಾಯಕ್, ತಾಯಿ ಗಂಗೂಬಾಯಿ. ತಂದೆ-ತಾಯಿಯರ ಕಾಳಜಿಯಿಂದ ಪ್ರೌಢಶಿಕ್ಷಣದವರೆಗೆ

ವಿದ್ಯಾಭ್ಯಾಸವನ್ನು ಪೂರೈಸಿದ ಲಲಿತಾ ನಾಯಕ್ ಅವರು ಚಿಕ್ಕ ವಯಸ್ಸಿನಲ್ಲಿಯೇ ರೇಡಿಯೋ ನಾಟಕಗಳನ್ನು ರಚಿಸುವ ಮೂಲಕ ಬರವಣಿಗೆಯ ಬಗೆಗೆ ಆಸಕ್ತಿಯನ್ನು ಬೆಳೆಸಿಕೊಂಡರು. ಮುಂದಿನ ದಿನಗಳಲ್ಲಿ ತಮ್ಮದೇ ಜನಾಂಗದ ಬದುಕು-ಬವಣೆಗಳನ್ನು ಸಾಹಿತ್ಯಕ್ಕೆ ತರುವಲ್ಲಿ ಅವರ ಪತಿ ಚಂಪ್ಲಾ ನಾಯಕ್‌ರವರ ಬೆಂಬಲವೂ ದೊರೆಯಿತು. ಬಂಡಾಯ ಸಂಘಟನೆಗಳೊಂದಿಗೆ ಗುರುತಿಸಕೊಳ್ಳುವ ಮೂಲಕ ತಮ್ಮ ಬರಹದ ರೂಪುರೇಷೆಗಳನ್ನು ಸ್ಪಷ್ಟಪಡಿಸಿಕೊಂಡರು. ಇವುಗಳ ಮಧ್ಯೆ ಒದಗಿಬಂದ ಸಿದ್ಧಯ್ಯ ಪುರಾಣಿಕ, ಶಾಂತರಸ, ಚಂಪಾ, ಚೆನ್ನಣ್ಣ ವಾಲೀಕಾರ ಮುಂತಾದ ಸಾಹಿತಿಗಳ ಒಡನಾಟ ಅವರ ಬರವಣಿಗೆಗೆ ಮತ್ತಷ್ಟು ಅನುಭವಜ್ಞಾನವನ್ನು ನೀಡಿತು. ಇದೇ ಸಂದರ್ಭದಲ್ಲಿ 'ಲಂಬಾಣಿಗಳು ಮತ್ತು ಹಾರುವ ಇಂದಿರಾ'ಎಂಬ ಲೇಖನದ ಮೂಲಕ ಲಂಕೇಶ್ ಪತ್ರಿಕೆಯಲ್ಲಿ ಪತ್ರಕರ್ತೆಯಾಗಿ ಗುರುತಿಸಿಕೊಂಡರು. ಇಲ್ಲಿಂದ ಒಬ್ಬ ಲೇಖಕಿಯಾಗಿ ಮಾತ್ರವಲ್ಲದೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮುಂತಾದ ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿ ಸಾರ್ವಜನಿಕ ಸೇವಾ ವಲಯದಲ್ಲೂ ತಮ್ಮ ಬದುಕನ್ನು ವಿಸ್ತರಿಸಿಕೊಂಡರು. ಇದೇ ಜನಪ್ರಿಯತೆ ಮತ್ತು ಪ್ರಾಮಾಣಿಕ ಕಾರ್ಯವೈಖರಿಯಿಂದ ರಾಜಕೀಯ ಕ್ಷೇತ್ರಕ್ಕೂ ಪ್ರವೇಶಿಸಿದ ಲಲಿತಾ ನಾಯಕ್ ಅವರು ವಿಧಾನ ಪರಿಷತ್ ಮತ್ತು ವಿಧಾನ ಸಭೆ ಸದಸ್ಯರಾಗಿ, ಶಾಸಕರೂ, ಮಂತ್ರಿಯೂ ಆಗಿ ಸ್ಥಾನಮಾನ ಪಡೆದದ್ದು ಗಮನಾರ್ಹ ಸಂಗತಿಯಾಗಿದೆ. ಅಲೆಮಾರಿ, ಬುಡಕಟ್ಟು ಸಮುದಾಯದ ಮಹಿಳೆಯಾಗಿ ಸಾಹಿತ್ಯ, ಸಾಮಾಜಿಕ, ರಾಜಕೀಯ ಹೀಗೆ ಏಕಕಾಲಕ್ಕೆ ಹಲವಾರು ಕ್ಷೇತ್ರಗಳನ್ನು ನಿಭಾಯಿಸಿದ ಬಿ.ಟಿ.ಲಲಿತಾ ನಾಯಕ್ ಅವರ ಸಾಧನೆ ವಿಶಿಷ್ಟವಾದುದಾಗಿದೆ.

### ೩.೬.೧. ಬಿ.ಟಿ.ಲಲಿತಾ ನಾಯಕ್: ಸಾಹಿತ್ಯಿಕ ಸೃಜನಶೀಲತೆ

ಬಿ.ಟಿ.ಲಲಿತಾ ನಾಯಕ್ ಅವರು ತಮ್ಮ ಸಾಹಿತ್ಯದಲ್ಲಿ ಲಂಬಾಣಿ ಜನಾಂಗದ ಶ್ರಮ, ಸ್ವಾಭಿಮಾನ, ಸಂಸ್ಕೃತಿಯನ್ನು ನಿರೂಪಿಸುತ್ತಲೇ, ವ್ಯವಸ್ಥೆಯೊಳಗಿನ ವೈರುಧ್ಯ, ಸ್ತ್ರೀ ಶೋಷಣೆಯ ಒಳನೋಟಗಳನ್ನು ತೆರೆದಿಡುತ್ತಾರೆ. ಆರಂಭದಲ್ಲಿ ಹಲವಾರು ಸ್ತ್ರೀವಾದಿ ನೆಲೆಯ ಕವಿತೆಗಳು, ವೈಚಾರಿಕ ಲೇಖನಗಳ ಮೂಲಕ ಸಾಹಿತ್ಯ ವಲಯದಲ್ಲಿ ಗುರುತಿಸಿಕೊಂಡರು. ಮೂಲತಃ ಕವಿಯಿತ್ರಿಯಾಗಿ ಹೆಚ್ಚು ಜನಪ್ರಿಯರಾಗಿದ್ದರೂ ಸಹ ಕಾದಂಬರಿ, ಕಥಾ ಸಂಕಲನ, ಚುಟುಕುಗಳು, ನಾಟಕ, ಬುಡಕಟ್ಟು ಅಧ್ಯಯನಗಳನ್ನು ಒಳಗೊಂಡ ಪುಸ್ತಕಗಳು, ಹನಿಗವನಗಳು ಇತ್ಯಾದಿ ಪ್ರಕಾರಗಳಿಗೆ ಸಂಬಂಧಿಸಿದಂತೆ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಅವುಗಳ ಪರಿಚಯ ಹೀಗಿದೆ:

**ಕಾದಂಬರಿ**

- ನೆಲೆ-ಬೆಲೆ(೧೯೮೨)
- ಗತಿ(೧೯೯೬)

**ಕಥಾ ಸಂಕಲನ**

- ಭಟ್ಟನ ಕನಸು(ಮಕ್ಕಳ ಕಥಾ ಸಂಕಲನ, ೧೯೭೯)
- ಹಬ್ಬ ಮತ್ತು ಬಲಿ(೧೯೮೯)

**ಕವನ ಸಂಕಲನ**

- ನಂ ರೂಪ್ಲಿ(೧೯೮೩)
- ಇದೇ ಕೂಗು ಮತ್ತೆ ಮತ್ತೆ(೧೯೯೬)
- ಒಡಲ ಬೇಗೆ(ಆಯ್ದ ಕವನಗಳ ಸಂಕಲನ, ೧೯೯೬)
- ಬಿದಿರುಮಳೆ ಕಂಟಿಯಲಿ(೧೯೮೩-೧೯೯೭ರ ವರೆಗಿನ ಕವಿತೆಗಳು)
- ಸವಾ-ಸೇರು(ಕವನ-ಹನಿಗವನಗಳ ಸಂಕಲನ, ೨೦೦೫)

**ಮಕ್ಕಳ ಸಾಹಿತ್ಯ**

- ಭರವಸೆ

**ರೇಡಿಯೋ ನಾಟಕ ಸಂಕಲನ**

- ಚಂದ್ರ ಪರಾಭವ(೧೯೭೨)

**ಇತರೆ**

- ಹಬ್ಬ ಮತ್ತು ಬಲಿ ಕಥೆಯ ರಂಗ ರೂಪಾಂತರ(೨೦೦೦)
- ದೇವದುರ್ಗ ತಾಲೂಕು ದರ್ಶನ(೧೯೮೬)
- ಕೈ ಹಿಡಿದು ನಡೆಸೆನ್ನನು(ಶತಾಯುಷಿಗಳ ಸಂದರ್ಶನ, ೨೦೦೬)
- ಗಡಿ ಕನ್ನಡಿಗರ ಕಥೆ-ವ್ಯಥೆ(ಸಹ-ಸಂಪಾದನೆ, ೨೦೦೬)
- ಬಂಜಾರಾ ಹೆಜ್ಜೆ ಗುರುತುಗಳು(ಲೇಖನ ಸಂಕಲನ, ೨೦೦೯)
- ದಿನಚರಿಯ ಪುಟಗಳಿಂದ(ಪ್ರವಾಸ ಕಥನ)

### ೩.೬.೨. ಅಲೆಮಾರಿ-ಬುಡಕಟ್ಟು ಮಹಿಳೆಯರ ಬದುಕಿನ ಅಭಿವ್ಯಕ್ತಿ

ಕನ್ನಡ ಸಾಹಿತ್ಯದಲ್ಲಿ ಬುಡಕಟ್ಟು ಸಮುದಾಯದ ಬದುಕನ್ನು ಆಧರಿಸಿ ಅನೇಕ ಕಥೆ-ಕಾದಂಬರಿಗಳು ಬಂದಿವೆ. ಇವುಗಳಲ್ಲಿ ಲಂಬಾಣಿ ಜನಾಂಗದ ಜೀವನ ಕ್ರಮವನ್ನು ನಿರೂಪಿಸುವ ಮೂಲಕ ಗುರುತಿಸಿಕೊಂಡವರಲ್ಲಿ ಬಿ.ಟಿ.ಲಲಿತಾನಾಯಕ್ ಪ್ರಮುಖರು. ಇವರೊಟ್ಟಿಗೆ ಕುಂ॥ ವೀರಭದ್ರಪ್ಪ, ಜಗ್ಗು ಪ್ರಿಯದರ್ಶಿನಿ, ಗೋವಿಂದಮೂರ್ತಿ ದೇಸಾಯಿ ಮುಂತಾದವರು ಲಂಬಾಣಿ ಸಮುದಾಯದ ಜೀವನ ಚಿತ್ರಣವನ್ನು ಕಥಾಸಾಹಿತ್ಯದಲ್ಲಿ ತರುವ ಮೂಲಕ ಗಮನ ಸೆಳೆದಿದ್ದಾರೆ. ಆದರೂ ಸಹ ಸ್ವತಃ ತಾಂಡಾದ ಪರಿಸರದಲ್ಲಿ ಬೆಳೆದ ಲಲಿತಾ ನಾಯಕ್ ಅವರ ಕಥಾ ಸಾಹಿತ್ಯದಲ್ಲಿನ ಪಾತ್ರ ನಿರೂಪಣೆ, ಅನುಭವಜನ್ಯತೆ, ವೈಚಾರಿಕ ದೃಷ್ಟಿಕೋನಗಳಿಂದ ಮತ್ತಷ್ಟು ವಿಶಿಷ್ಟವೆನಿಸುತ್ತದೆ. ಬುಡಕಟ್ಟು ಜನಾಂಗದಲ್ಲಿ ಹೆಣ್ಣುಮಕ್ಕಳ ಮೇಲಾಗುವ ದೈಹಿಕ, ಮಾನಸಿಕ, ಲೈಂಗಿಕ ಶೋಷಣೆ, ಹಿಂಸೆಗಳನ್ನು ನೇರವಾಗಿ ವಿಮರ್ಶೆಗೊಳಪಡಿಸುವ ದಿಟ್ಟ ನಿಲುವು ಅವರದು.

ಲಲಿತಾನಾಯಕ್ ಅವರು ಬರೆದ 'ಗತಿ', 'ನೆಲೆ-ಬೆಲೆ' ಕಾದಂಬರಿಗಳು ಪ್ರಗತಿಪರ ಆಶಯದೊಂದಿಗೆ ಬಂದವುಗಳಾಗಿವೆ. ಪಿತೃಪ್ರಧಾನ ವ್ಯವಸ್ಥೆಯ ಒಳಗೆ ತಮ್ಮ ಅಸ್ತಿತ್ವಕ್ಕಾಗಿ ಹೊಡೆದಾಡುವ ಸ್ತ್ರೀ ಮಾದರಿ ಪಾತ್ರಗಳಿವೆ. 'ನೆಲೆ-ಬೆಲೆ' ಕಾದಂಬರಿಯಲ್ಲಿ ಜಾತಿ, ಅಂತಸ್ತು, ಪ್ರತಿಷ್ಠೆಗಳೆ ಕಾರಣವಾಗಿ ಜಯಾ ಮತ್ತು ರೇಖಾಗೆ ಒಲ್ಲದ ಗಂಡನೊಂದಿಗೆ ಲಗ್ನವಾಗುವ ಅನಿವಾರ್ಯತೆ ಎದುರಾಗುತ್ತದೆ. ಅಕಸ್ಮಾತಾಗಿ ಪಟ್ಟಣಕ್ಕೆ ಬಂದ ಜಯಾ ವಿಮೋಚನಾ ಸಂಘದ ಅಧ್ಯಕ್ಷೆ ರೇಖಾಳ ಸಹವಾಸದಿಂದ ಸ್ತ್ರೀ ಸಮಾನತೆಯನ್ನು ಅರಿತುಕೊಳ್ಳುತ್ತಾಳೆ. ಆದರೆ ಮಹಿಳಾ ವಿಮೋಚನಾ ಸಂಘದ ಅಧ್ಯಕ್ಷೆಯಾಗಿಯೂ ಗಂಡನ ದಬ್ಬಾಳಿಕೆಯಲ್ಲಿ ನರಳುವ ರೇಖಾ “ಗಂಡಿನಲ್ಲಿ ಉದಾರತೆ, ನಿಸ್ವಾರ್ಥ, ಸಭ್ಯತೆ ಇವು ಮೂರು ಮೇಳೈಸಿವೆಯೆಂದರೆ ನಾನು ನಂಬುವುದಿಲ್ಲ”[೩೯] ಎನ್ನುವ ಮಾತುಗಳನ್ನು ಹೇಳುವ ಮೂಲಕ ತನ್ನ ಸ್ಥಿತಿಯನ್ನು ಎಲ್ಲ ಹೆಣ್ಣುಮಕ್ಕಳಿಗೂ ಸಾಮಾನ್ಯೀಕರಿಸುತ್ತಾಳೆ. ಈ ಬಗ್ಗೆ ಲೇಖಕಿ ಲಲಿತಾನಾಯಕ್ ಸಹ “ಈಗಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಹೆಣ್ಣನ್ನು ಯಾವ ದೃಷ್ಟಿಯಿಂದ ನೋಡಲಾಗುತ್ತಿದೆ. ಅವಳ ಆಶೋತ್ತರಗಳಿಗೆ ಇರಬಹುದಾದ ಬೆಲೆ ಎಷ್ಟು? ಪ್ರಗತಿಯ ಹೆಜ್ಜೆಗೆ ಅಡ್ಡಿ ಆತಂಕಗಳೆಷ್ಟು, ಅವಳ ಬದುಕಿನ ಸಾರ್ಥಕತೆಯನ್ನು ವಿವಿಧ ಮನೋಭಾವದ ಜನ ಯಾವ ರೀತಿ ಮೌಲ್ಯಮಾಪನ ಮಾಡುತ್ತಾರೆ ಎಂಬುದನ್ನು ನನ್ನ ಈ ಕಾದಂಬರಿಯ ಸೀಮಿತವಾದ ಚೌಕಟ್ಟಿನಲ್ಲಿ ತೋರಿಸಲು ಯತ್ನಿಸಿದ್ದೇನೆ”[೪೦] ಎಂದು 'ನೆಲೆ-ಬೆಲೆ'ಕಾದಂಬರಿಯನ್ನು ಕುರಿತು ಹೇಳುತ್ತಾರೆ. ಇದರಿಂದಾಗಿ ಲೇಖಕಿಯ ಗಟ್ಟಿತನದ ಆಲೋಚನೆಗಳು ಪಾತ್ರ ನಿರೂಪಣೆಯಲ್ಲಿ ವ್ಯಕ್ತವಾದ ಬಗೆಯನ್ನು

ತಿಳಿಯಲು ಸಾಧ್ಯವಿದೆ. ಪ್ರಸ್ತುತ ಕಾದಂಬರಿಯಲ್ಲಿನ ರೇಖಾಳ ಪ್ರಗತಿಪರ ವಿಚಾರಗಳು ಒಂದೆಡೆಯಾದರೆ, ಮತ್ತೊಂದೆಡೆ ಆತ್ಮತೃಪ್ತಿಗೆ ಬೆಲೆಕೊಟ್ಟು ಹಳೆಯ ಪ್ರೇಮಿಯನ್ನು ಬಯಸುವ ಜಯಾ, ತನ್ನ ನಿಲುವಿಗೆ ವಿರೋಧವಾಗಿ ನಿಲ್ಲುವ ಹಲವಾರು ಅಡ್ಡಿ ಆತಂಕಗಳನ್ನು ಎದುರಿಸ ಬೇಕಾಗುತ್ತದೆ. ಕೊನೆಗೆ ಅಸಹಾಯಕತೆಯ ಪರಿಸ್ಥಿತಿ ಎದುರು ಸೋತರೂ ತನ್ನತನವನ್ನು, ಮಾನವೀಯ ಸಂಬಂಧವನ್ನೂ ಉಳಿಸಿಕೊಳ್ಳುವಲ್ಲಿ ಗೆಲ್ಲುವುದು ಕಾದಂಬರಿಯ ಸತ್ವವಾಗಿದೆ.

ಲಲಿತಾನಾಯಕ್ ಅವರ ಮತ್ತೊಂದು ಕಾದಂಬರಿಯಾದ 'ಗತಿ' ಲಂಬಾಣಿ ಜನಾಂಗದ ಮಹಿಳಾ ಲೋಕವನ್ನು ಪರಿಚಯಿಸುವ ಕಾದಂಬರಿ. ಕುಡಿತ, ಜೂಜು, ಕೊಲೆ, ಕಳ್ಳತನ, ಅನೈತಿಕ ಸಂಬಂಧಗಳಲ್ಲೇ ಕಾಲಕಳೆಯುವ ಗಂಡಂದಿರ ಕೈಗೆ ಸಿಕ್ಕು ಮಾನಸಿಕ, ದೈಹಿಕ ಹಿಂಸೆಗಳನ್ನು ಅನುಭವಿಸುವ ಸೋನಿ ಮತ್ತು ಲಚ್ಚಿ ಇಲ್ಲಿನ ಪ್ರಮುಖ ಪಾತ್ರಗಳು. ಗಂಡ ಹಾಗೂ ಮಾವನಿಂದಾಗುವ ಹಿಂಸೆಗಳಿಂದ ಬೇಸತ್ತ ಸೋನಿಗೆ, ಗಂಡ ಮರುಮದುವೆಯಾದಾಗಲೂ ಬಿಡುಗಡೆ ಪಡೆಯಲಾಗದ ಸ್ಥಿತಿ, ಅದಕ್ಕಾಗಿ ಊರಿನ ಪಂಚರಿಗೆ ಮೊರೆ ಹೋಗುವ ಸೋನಿಗೆ ಅಲ್ಲಿಯೂ ನ್ಯಾಯ ಸಿಗದಿದ್ದಾಗ, ಪಂಚರ ತೀರ್ಮಾನಕ್ಕೆ ವಿರುದ್ಧವಾಗಿ ಗಂಡನನ್ನು ನಿರಾಕರಿಸುತ್ತಾಳೆ. ಆದರೆ ಸೋನಿಯ ಮನಸ್ಥಿತಿಗೆ ವ್ಯತಿರಿಕ್ತವಾದ ಪಾತ್ರ ಲಚ್ಚಿಯದು. ಸೋನಿಯ ವಿಚಾರದಲ್ಲಿ ಉದಾಸೀನ ತೋರಿದ ಆಕೆಯ ಮಾವ ಹರಸಿಂಗ್‌ನ ಮೇಲೆ ಲಚ್ಚಿ ಹಲ್ಲೆ ಮಾಡಿದಾಗ ಆಕೆಯನ್ನು ಪಂಚರ ಮುಂದೆ ನಿಲ್ಲಿಸಲಾಗುತ್ತದೆ. ಈ ಕುರಿತು ಹರಸಿಂಗ್‌ನ ಪರವಾಗಿ ಮಾತನಾಡಿದ ಪಂಚರು ಪಂಚಾಯಿತಿಗೆ ದಂಡ ಕಟ್ಟಲು ಹೇಳುತ್ತಾರೆ. ಆಗ "ನೋಡಿ, ನಿಮ್ಮ ಕಾಲು ಬೀಳಲಿಕ್ಕೆ, ದಂಡ ತೆರಲಿಕ್ಕೆ ನಾಯೆನೂ ಮಂದಿ ಹೆಣ ಬೀಳ್ಸಿಲ್ಲ ಯಾರದ್ದಾರ ಮನಿ ಮುರ್ದಿಲ್ಲ. ನನ್ನದೇನೂ ತಪ್ಪಿಲ್ಲಂದ ಮ್ಯಾಲ ಒಂದ್ ಪೈಸಾನೂ ದಂಡ ಕೊಡುವಾಕಿಯಲ್ಲ ಅದೇನು ಮಾಡ್ಕೊಂತೀರೊ ಮಾಡ್ಕೋರಿ"[೪೧] ಎಂದು ಉತ್ತರಿಸುವ ಲಚ್ಚಿಯಲ್ಲಿ ಪ್ರತಿಭಟನೆಯ ಮೂಲಕ ವ್ಯವಸ್ಥೆಯಲ್ಲಿ ಬದಲಾವಣೆ ತರುವ ಆಶಯವಿದೆ. ಹಾಗಾಗಿ 'ನೆಲೆ-ಬೆಲೆ' ಕಾದಂಬರಿ ಗಿಂತಲೂ ಹೆಚ್ಚು ವೈಚಾರಿಕ ಪ್ರೌಢಿಮೆಯನ್ನು ಹೊಂದಿದ ಕಾದಂಬರಿ ಇದಾಗಿದೆ. ವಿಶೇಷವಾಗಿ ಮುಗ್ಧ ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ದುರುಪಯೋಗ ಪಡೆಯುವ ಪೂಜಾರಿಗಳ ಲೈಂಗಿಕ ಶೋಷಣೆಯೂ ಈ ಕಾದಂಬರಿಯಲ್ಲಿ ಅನಾವರಣಗೊಂಡಿದೆ. 'ನೆಲೆ-ಬೆಲೆ' ಕಾದಂಬರಿ ಯಲ್ಲಿ ಬದುಕಿನ ವಾಸ್ತವತೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಪಾತ್ರಗಳಿದ್ದರೆ, 'ಗತಿ' ಯಲ್ಲಿ ಸಮಾಜವನ್ನು ಬದಲಾವಣೆಯ ಕಡೆ ಕೊಂಡೊಯ್ಯುವ ದಿಟ್ಟ ಹೆಜ್ಜೆಗಳಿವೆ. ಹಾಗಾಗಿ ಲಂಬಾಣಿ ಜನಾಂಗದ ಜೀವನವನ್ನು ಯಥಾವತ್ತಾಗಿ ವಿವರಿಸುವ 'ಗತಿ' ಕಾದಂಬರಿಯನ್ನು ಡಾ.ನಾರಾಯಣ ಬಿ.ಪವಾರ ಅವರು 'ಲಂಬಾಣಿ ಜನಾಂಗದ ಆತ್ಮವಿಮರ್ಶೆ'ಎಂದು ಕರೆದಿರುವುದು ಸೂಕ್ತವೆನಿಸುತ್ತದೆ.

ಲಂಬಾಣಿ ಜನಾಂಗದ ಸಾಂಸ್ಕೃತಿಕ ವಿವರಗಳಿಗಿಂತ ಅಲ್ಲಿನ ಹಸಿವು, ಅನಕ್ಷರತೆಯಂತಹ ಸಂಗತಿಗಳನ್ನು ಅನಾವರಣಗೊಳಿಸುವ ಲಲಿತಾನಾಯಕರ 'ಹಬ್ಬ ಮತ್ತು ಬಲಿ' ಪ್ರಸಿದ್ಧ ಕಥಾ ಸಂಕಲನವಾಗಿದೆ. 'ಲೂಟಿ', 'ಉಪಚಾರ', 'ಮೌನ', 'ತಾಯಿ ಸಾಕೀಬಾಯಿ', 'ಮರುಮದುವೆ', 'ಸುದ್ದಿ' ಇಲ್ಲಿನ ಪ್ರಮುಖ ಕಥೆಗಳು. 'ಲೂಟಿ' ಕಥೆಯಲ್ಲಿ ಹೊಟ್ಟೆ ಹೊರೆಯಲು ಸೌದೆಗಾಗಿ ಕಾಡಿಗೆ ಹೋದ 'ರಾಮಿ' ಅಲ್ಲಿನ ದುಷ್ಟರಿಂದ ಲೂಟಿಗೆ ಒಳಗಾಗುತ್ತಾಳೆ. ಇಲ್ಲಿ ಲೂಟಿಯಾಗುವುದು ಕೇವಲ ಕೊಡಲಿ, ಕಟ್ಟಿಗೆ, ಗೆಜ್ಜೆಯಂತಹ ಭೌತಿಕ ವಸ್ತುಗಳು ಮಾತ್ರವಲ್ಲ. ಆಕೆಯ ಮಾನವೂ ಸಹ. ಇಲ್ಲಿ ದುಷ್ಟರ ವಿರುದ್ಧ ಆಕೆಯ ಪ್ರತಿಭಟನೆ ಸೋಲುತ್ತದೆ. ಕೊನೆಗೆ ಆಕ್ರೋಶವೊಂದೇ ಉಳಿಯುತ್ತದೆ. 'ತಾಯಿ ಸಾಕೀಬಾಯಿ' ಕಥೆಯಲ್ಲಿ ವಿಧವೆ ಸಾಕಿಬಾಯಿ ಜೀವನದ ಆಸರೆಗಾಗಿ 'ಮುನಿಯ'ನನ್ನು ಬಯಸುತ್ತಾಳೆ. ಆದರೆ, ಇದನ್ನು ಸಹಿಸದ ಸಾಕೀಬಾಯಿಯ ಮಗನೇ ಆಕೆಯನ್ನು ಕೊಲ್ಲುವ ಮೂಲಕ ಕಥೆ ದುರಂತ ಅಂತ್ಯ ಕಾಣುತ್ತದೆ. ತಾನು ಮಾತ್ರ ಅಂತರ್ ಜಾತಿಯ ವಿವಾಹಕ್ಕೆ ಒಳಗಾಗಿ, ತಾಯಿಯ ಭಾವನೆ, ಆಶಯಗಳಿಗೆ ವಿರೋಧ ಒಡ್ಡುವ ಸಾಕೀಬಾಯಿಯ ಮಗನ ಪಾತ್ರ ಸ್ತ್ರೀ ಮತ್ತು ಪುರುಷನ ನಡುವಿನ ಅಸಮಾನತೆಯನ್ನು ಪ್ರೋತ್ಸಾಹಿಸುವ ಮನಸ್ಥಿತಿಯನ್ನು ಪರಿಚಯಿಸುತ್ತದೆ. ತಾನು ಗಂಡು ಎಂಬ ಕಾರಣಕ್ಕೆ ನೈತಿಕತೆ, ಸಂಪ್ರದಾಯಗಳನ್ನು ಮೀರುವ ಸಾಕೀಬಾಯಿಯ ಮಗ ಆಕೆಯ ವಿಚಾರದಲ್ಲಿ ಉದಾರತೆಯನ್ನು ತೋರುವುದಿಲ್ಲ. ಹಾಗಾಗಿ ಹೆಣ್ಣಿಗೆ ಬದುಕಿನ ಆಯ್ಕೆಯ ವಿಚಾರದಲ್ಲಿ ವ್ಯವಸ್ಥೆಯ ಮನೋಭಾವ, ತಾರತಮ್ಯದ ನಿಲುವು ಇಲ್ಲಿ ವ್ಯಕ್ತವಾಗುತ್ತದೆ. "ಲಂಬಾಣಿ ಸಂಸ್ಕೃತಿಯೆಂಬುದು ವೈಭವೀಕರಣದ ವಸ್ತುವಲ್ಲ. ಜೊತೆಗೆ ಅವರ ಸಾಮಾಜಿಕ ಪ್ರಜ್ಞೆ ಈ ಸಂಸ್ಕೃತಿಯಲ್ಲಿ ಅಂತರ್ಗತವಾದ ಇಡೀ ಸಮಾಜದಲ್ಲಿ ಕಾಣಸಿಗುವಂಥ ವಸ್ತು ಸಂಗತಿಗಳನ್ನು ಹುಡುಕುತ್ತದೆ."[೬೨] ಎಂಬ ಬರಗೂರು ರಾಮಚಂದ್ರಪ್ಪ ಅವರ ಮಾತುಗಳು ಲಲಿತಾನಾಯಕ್ ಅವರ ಕಥೆ-ಕಾದಂಬರಿಗಳಿಗೆ ಅನ್ವಯಿಸುತ್ತವೆ. ಕಾರಣ ತಮ್ಮ ಸಮುದಾಯದ ಬದುಕು, ಸಂಸ್ಕೃತಿಗಳ ವಿವರಗಳನ್ನು ಅತಿಶಯವೆಂಬಂತೆ ತೋರದೆ, ನೈಜ ಚಿತ್ರಣಕ್ಕೆ ಲಲಿತಾನಾಯಕ್ ಅವರು ಪ್ರಯತ್ನಿಸುತ್ತಾರೆ. ಅದರಲ್ಲೂ ಇವರ ಸ್ತ್ರೀ ಪಾತ್ರಗಳು ಬದುಕಿಗಾಗಿ ನಡೆಸುವ ಹೋರಾಟ, ದಿಟ್ಟತನ, ಅಸಹಾಯಕತೆಗಳು ಎಲ್ಲ ಸಮುದಾಯ ಗಳ ಸ್ತ್ರೀಯರ ಸ್ಥಿತಿಗತಿಗಳ ನೋಟವಾಗಿಯೇ ಬಂದಿವೆ. ಇವುಗಳೊಂದಿಗೆ ಸಾಮಾಜಿಕವಾಗಿ ಕಾಣಿಸಿಕೊಳ್ಳುವ ವರ್ಗಭೇದ, ಜಾತಿಭೇದ, ಹಸಿವಿನ ಭೀಕರತೆ, ಜೀತಪದ್ಧತಿ, ಮೌಢ್ಯತೆ, ಅನಕ್ಷರತೆ ಇತ್ಯಾದಿಗಳು ಸಹ ಓದುಗರ ಗಮನ ಸೆಳೆಯುತ್ತವೆ. ಹೀಗಾಗಿ ಕಥೆ ಮತ್ತು ಕಾದಂಬರಿ ಪ್ರಕಾರಗಳು ಲಲಿತಾನಾಯಕ್ ಅವರಿಗೆ ಹೆಚ್ಚು ಸೂಕ್ತವಾಗಿ ಒದಗಿಬಂದಿರುವುದು ಅವರ ಪಾತ್ರ ನಿರೂಪಣೆಯ ಮೂಲಕ ತಿಳಿದುಬರುತ್ತದೆ. ವಿಶೇಷವಾಗಿ ಲಲಿತಾನಾಯಕ್

ಅವರು ಏಕಕಾಲಕ್ಕೆ ಸಾಹಿತ್ಯ ಕ್ಷೇತ್ರವೂ ಸೇರಿದಂತೆ ಹಲವಾರು ವಲಯಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುವ ಮೂಲಕ ಭಿನ್ನ ನೆಲೆಯಲ್ಲಿ ಗುರುತಿಸಿಕೊಂಡಿದ್ದಾರೆ.

ಒಟ್ಟಾರೆ ಪ್ರಸ್ತುತ ಅಧ್ಯಾಯದಲ್ಲಿ ಪ್ರಾತಿನಿಧಿಕ ಲೇಖಕಿಯರ ನಿರ್ವಚನವನ್ನು ಲೇಖಕಿಯರ ವ್ಯಕ್ತಿಗತ ಮತ್ತು ಸಾಹಿತ್ಯಕ ಪರಿಚಯ, ವಿಶೇಷತೆಗಳು, ಬರವಣಿಗೆಯ ಸಂದರ್ಭ ಮತ್ತು ಸವಾಲುಗಳ ಹಿನ್ನೆಲೆಯಲ್ಲಿ ಕಟ್ಟಿಕೊಡಲಾಗಿದೆ. ಲೇಖಕಿಯರ ಕಥೆ–ಕಾದಂಬರಿಗಳ ಪೂರ್ಣ ಸ್ವರೂಪದ ವಿಶ್ಲೇಷಣೆಗೆ ಹೊರಡದೆ ಸಾಂದರ್ಭಿಕವಾಗಿ ಕೆಲವೇ ಮಾದರಿಗಳನ್ನು ಉದಾಹರಿಸಲಾಗಿದೆ. ಇದೇ ವೇಳೆ ಮಹಿಳಾ ದಶಕದ ಸಂದರ್ಭದಲ್ಲಿ ವಿವಿಧ ವಲಯಗಳಲ್ಲಿ ಕಂಡುಬಂದ ಮಹತ್ವದ ಬದಲಾವಣೆ ಹಾಗೂ ಚಿಂತನೆಗಳಿಗೆ ಸ್ವಲ್ಪಮಟ್ಟದಲ್ಲಾದರೂ ಲೇಖಕಿಯರು ಸ್ಪಂದಿಸಿರುವುದು ಕಂಡುಬರುತ್ತದೆ. ಕಾರಣ ಸ್ತ್ರೀಶಿಕ್ಷಣ, ಉದ್ಯೋಗ, ಸಂಘಟನೆ, ಸ್ವಾವಲಂಬನೆಯಂತಹ ವಿಚಾರ ಗಳನ್ನು ಲೇಖಕಿಯರು ಅನುಮೋದಿಸಿರುವುದು ಇದಕ್ಕೆ ಸಮರ್ಥನೆಯನ್ನು ಒದಗಿಸುತ್ತದೆ. ಆದರೂ ಸಹ ಲೇಖಕಿಯರು ತಮ್ಮ ಕಥಾ ಸಾಹಿತ್ಯದ ಪಾತ್ರ ಸೃಷ್ಟಿಯಲ್ಲಿ ಸ್ತ್ರೀಪರ ವಿಚಾರಗಳನ್ನು ಅಭಿವ್ಯಕ್ತಿ ಗೊಳಿಸುವಲ್ಲಿ ಅನೇಕ ಬಗೆಯ ಅಡೆತಡೆಗಳು ಕುಟುಂಬ, ಸಮುದಾಯ, ಧರ್ಮ ಮುಂತಾದ ವಲಯಗಳಿಂದ ಎದುರಾಗಿವೆ. ಇವುಗಳ ಕುರಿತಾದ ವ್ಯಕ್ತಿಗತ ಅನುಭವಗಳನ್ನು ಸಹ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಮೂಲಕ ಲೇಖಕಿಯರ ನಿರ್ವಚನದಲ್ಲಿ ಕಂಡುಕೊಂಡ ಅಂಶಗಳನ್ನು ಆಧರಿಸಿ ಮಹಿಳಾ ದಶಕದ ಲೇಖಕಿಯರ ಕಥಾಸಾಹಿತ್ಯದ ವಿಶ್ಲೇಷಣೆ ಸಾಧ್ಯವಿದೆ. ಹಾಗೆಯೇ ಮುಂದಿನ ಅಧ್ಯಾಯದಲ್ಲಿ ಅವರ ಕಥಾ ಸಾಹಿತ್ಯದಲ್ಲಿನ ಸ್ತ್ರೀ ಮಾದರಿ ಪಾತ್ರಗಳ ಪ್ರತಿನಿಧೀಕರಣವನ್ನು ಸ್ಥಿರ ಮತ್ತು ಪರಿವರ್ತಿತ ಮಾದರಿಗಳಾಗಿ ವಿಭಾಗಿಸಿ ಸ್ತ್ರೀವಾದಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಡಿಟಿಪ್ಪಣಿಗಳು**

೧. ಕರೀಗೌಡ ಬೀಚನಹಳ್ಳಿ, ೨೦೧೧, ಶತಮಾನದ ಸಣ್ಣ ಕಥೆಗಳ ಸಮೀಕ್ಷೆ, ಪು.೧೭೨

೨. ಶ್ರೀಮತಿ ಎಚ್.ಎಸ್., ೨೦೦೩, ಸೇರಿಕೊಂಡ ಎಳೆಗಳು, ಪು.೨

೩. ವೈದೇಹಿ, ೨೦೦೭, ಮೇಜು ಮತ್ತು ಬಡಗಿ, ಪು.೧೩೩

೪. ಅಶೋಕ ಟಿ.ಪಿ., ೨೦೧೩, ವೈದೇಹಿ ಕಥನ, ಪು.೧೭

೫. ಸುಮಿತ್ರಬಾಯಿ ಬಿ.ಎನ್., ೨೦೦೧, ವೈದೇಹಿ, ಜಿ.ಎಸ್.ಸಿದ್ಧಲಿಂಗಯ್ಯ ಮತ್ತು ಎಂ.ಎಚ್. ಕೃಷ್ಣಯ್ಯ(ಸಂ), ಸಾಲುದೀಪಗಳು, ಪು.೫೨೦

೬. ಅದೇ, ಪು.೭೦

೭. ಕೇಶವಶರ್ಮ, ೧೯೯೩, ಸಾಹಿತ್ಯ ವಿಮರ್ಶೆ ೧೯೯೨, ರಹಮತ್ ತರೀಕೆರೆ(ಸಂ), ಪು.೯೬

೮. ವೈದೇಹಿ, ೨೦೦೬, ಅಲೆಗಳಲ್ಲಿ ಅಂತರಂಗ, ಪು.೧೧೨

೯. ಸಬಿತಾ ಬನ್ನಾಡಿ, ೨೦೧೦, ವೈದೇಹಿ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂಸ್ಕೃತಿ, ಶೈಲಜಾ ಹಿರೇಮಠ(ಸಂ), ಮಹಿಳಾ ಅಧ್ಯಯನ, ಸಂಪುಟ ೧೨, ಸಂಚಿಕೆ ೧, ಜನವರಿ–ಜೂನ್ ಪು.೬೧

೧೦. ಸುಮಿತ್ರಬಾಯಿ ಬಿ.ಎನ್., ೨೦೦೬, ಸ್ತ್ರೀವಾದ, ಪು.೮೪

೧೧. ಅಶೋಕ ಟಿ.ಪಿ, ೨೦೧೩, ವೈದೇಹಿ ಕಥನ, ಪು.೧೨೪

೧೨. ಅದೇ, ಪು.೧೨೩

೧೩. ವೈದೇಹಿ, ೨೦೦೬, ಅಲೆಗಳಲ್ಲಿ ಅಂತರಂಗ, ಪು.೩೨೦

೧೪. ವೀಣಾ ಶಾಂತೇಶ್ವರ, ೨೦೧೧, ನಡೆದದ್ದೇ ದಾರಿ, ಮುನ್ನುಡಿ

೧೫. ಆಶಾದೇವಿ ಎಂ.ಎಸ್., ೨೦೧೧, ವೀಣಾ ಶಾಂತೇಶ್ವರ ವಾಚಿಕೆ, ಪು.೧೩೩

೧೬. ಆಶಾದೇವಿ ಎಂ.ಎಸ್., ೨೦೧೧, ನಡುವೆ ಸುಳಿವ ಆತ್ಮ, ಪು.೯೨

೧೭. ಗಾಯತ್ರಿ ಸ.ನ. ಮತ್ತು ಶಶಿಕಲಾ ಎಸ್.ಡಿ(ಸಂ), ಆರ್ಯಾಂಭ ಪಟ್ಟಾಭಿ(ಪ್ರಧಾನ ಸಂಪಾದಕರು), ೨೦೦೪, ಮಹಿಳಾ ಸಾಹಿತ್ಯ ಸಮೀಕ್ಷೆ, ಪು.೧೬೧

೧೮. ಸುಮಿತ್ರಾ ಎಲ್.ಸಿ., ೨೦೦೬, ವೀಣಾ ಶಾಂತೇಶ್ವರ ನಡೆದದ್ದೇ ದಾರಿ, ಶೈಲಜಾ ಹಿರೇಮಠ(ಸಂ), ಮಹಿಳಾ ಅಧ್ಯಯನ, ಸಂಪುಟ ೮, ಸಂಚಿಕೆ ೧, ಜನವರಿ–ಜೂನ್, ಪು.೧೧೬

೧೯. ವೀಣಾ ಶಾಂತೇಶ್ವರ, ಲೇಖಲೋಕ–೨, ೨೦೧೨, ಪು.೫೦

೨೦. ರಾಘವೇಂದ್ರರಾವ್ ಎಚ್.ಎಸ್., ೨೦೧೨, ಕಣ್ಣಹನಿಗಳೆ ಕಾಣಿಕೆ, ಪು.೧೭೬

೨೧. ಅದೇ, ಪು.೧೭೦

೨೨. ಮೀನಾಕ್ಷಿ ಬಾಳಿ, ೨೦೧೦, ಗೀತಾ ನಾಗಭೂಷಣ: ಸಂದರ್ಶನ ಷರೀಫಾ ಕೆ. ಮತ್ತು ಬಸವರಾಜ ಸೂಳಿಭಾವಿ(ಸಂ), ಮಹಿಳಾ ಮಾರ್ಗ, ಪು.೯೫

೨೩. ವಿನಯಾ, ೨೦೧೦, ಗೀತಾ ನಾಗಭೂಷಣರ ಬರವಣಿಗೆ: ಮಹಿಳಾ ಸಂವೇದನೆಯ ಬಿಕಟ್ಟಿನ ರೂಪಕ, ಷರೀಫಾ ಕೆ. ಮತ್ತು ಬಸವರಾಜ ಸೂಳಿಭಾವಿ(ಸಂ), ಮಹಿಳಾ ಮಾರ್ಗ, ಪು.೩೬

೨೪. ಮಲ್ಲಿಕಾರ್ಜುನಸ್ವಾಮಿ ವಿ.ಎನ್., ೨೦೧೬, ಗೀತಾ ನಾಗಭೂಷಣ, ಸಿದ್ಧಲಿಂಗಯ್ಯ ಜಿ.ಎಸ್. ಮತ್ತು ಕೃಷ್ಣಯ್ಯ ಎಂ.ಎಚ್.(ಸಂ), ಸಾಲು ದೀಪಗಳು, ಪು.೭೯೨

೨೫. ಗಾಯತ್ರಿ ಎನ್., ೨೦೧೦, ಗೀತಾರ ಸಣ್ಣ ಕತೆಗಳು: ಅನುಭವ ಲೋಕದ ಅನಾವರಣ, ಷರೀಫಾ ಕೆ. ಮತ್ತು ಬಸವರಾಜ ಸೂಳಿಭಾವಿ(ಸಂ), ಮಹಿಳಾ ಮಾರ್ಗ, ಪು.೩೭

೨೬. ಗಾಯತ್ರಿ ಎನ್., ೨೦೦೯, ಗೀತಾ ನಾಗಭೂಷಣ, ಪ್ರಧಾನ್ ಗುರುದತ್ತ(ಸಂ), ಪು.೮೪

೨೭. ಮೀನಾಕ್ಷಿ ಬಾಳಿ, ೨೦೧೦, ಗೀತಾ ನಾಗಭೂಷಣ: ಸಂದರ್ಶನ, ಷರೀಫಾ ಕೆ. ಮತ್ತು ಬಸವರಾಜ ಸೂಳಿಭಾವಿ(ಸಂ), ಮಹಿಳಾ ಮಾರ್ಗ, ಪು.೯೩

೨೮. ಗಾಯತ್ರಿ ಎನ್., ೨೦೦೯, ಗೀತಾ ನಾಗಭೂಷಣ, ಪ್ರಧಾನ್ ಗುರುದತ್ತ(ಸಂ), ಪು.೮೫

೨೯. ರಾಘವೇಂದ್ರರಾವ್ ಎಚ್.ಎಸ್., ೨೦೧೨, ಕಣ್ಣಹನಿಗಳ ಕಾಣಿಕೆ, ಪು.೧೮೨

೩೦. ಗೀತಾ ನಾಗಭೂಷಣ, ೨೦೧೦, ನೀಲಗಂಗಾ, ಪು.೪೪

೩೧. ಗೀತಾ ನಾಗಭೂಷಣ, ೨೦೦೬, ಆಸರೆಗಳು, ಪು.೭೪

೩೨. ಗೀತಾ ನಾಗಭೂಷಣ, ೨೦೧೦, ದಂಗೆ, ಪು.೭೪

೩೩. ಸಾರಾ ಅಬೂಬಕ್ಕರ್, ೨೦೦೭, ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪು.೩೨

೩೪. ಸುಮಿತ್ರಬಾಯಿ ಬಿ.ಎನ್., ೨೦೦೬, ಸ್ತ್ರೀವಾದ, ಪು.೧೦೦

೩೫. ಸಾರಾ ಅಬೂಬಕ್ಕರ್, ೨೦೦೭, ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪು.೧೨೨

೩೬. ಆಶಾದೇವಿ ಎಂ.ಎಸ್., ೨೦೧೧, ನಡುವೆ ಸುಳಿವ ಆತ್ಮ-ಸ್ತ್ರೀಸಂಕಥನದ ಚಹರೆಗಳು, ಪು.೮೫

೩೭. ಅದೇ, ಪು.೮೮

೩೮. ಮೀರಾ ಎಲ್.ಜಿ., ೨೦೦೪, ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಪು.೧೫

೩೯. ಲಲಿತಾನಾಯಕ್ ಬಿ.ಟಿ., ೨೦೧೦, ನೆಲೆ-ಬೆಲೆ, ಪು.೭೦

೪೦. ಪುಷ್ಪ ಎಚ್.ಎಲ್., ೨೦೧೬, ಬಿ.ಟಿ.ಲಲಿತಾನಾಯಕ್, ಜಿ.ಎಸ್.ಸಿದ್ದಲಿಂಗಯ್ಯ ಮತ್ತು ಎಂ.ಎಚ್.ಕೃಷ್ಣಯ್ಯ(ಸಂ), ಸಾಲುದೀಪಗಳು, ಪು.೭೨೦

೪೧. ಲಲಿತಾನಾಯಕ ಬಿ.ಟಿ., ೨೦೧೪, ಗತಿ, ಪು.೩೧

೪೨. ಲಲಿತಾನಾಯಕ ಬಿ.ಟಿ., ೧೯೯೮, ಹಬ್ಬ ಮತ್ತು ಬಲಿ, ಮುನ್ನುಡಿ

# ಅಧ್ಯಾಯ: ನಾಲ್ಕು

## ಸ್ತ್ರೀಪ್ರತಿನಿಧೀಕರಣದ ಆನ್ವಯಿಕ ವಿಶ್ಲೇಷಣೆ: ಸ್ಥಿರ ಹಾಗೂ ಪರಿವರ್ತಿತ ಮಾದರಿ ಪಾತ್ರಗಳ ವಿವೇಚನೆ

## ಅಧ್ಯಾಯ: ನಾಲ್ಕು

# ಸ್ತ್ರೀ ಪ್ರತಿನಿಧೀಕರಣದ ಆನ್ವಯಿಕ ವಿಶ್ಲೇಷಣೆ: ಸ್ಥಿರ ಹಾಗೂ ಪರಿವರ್ತಿತ ಮಾದರಿ ಪಾತ್ರಗಳ ವಿವೇಚನೆ

### ೪.೧. ಪೀಠಿಕೆ

ಸಾಮಾಜಿಕ ವಲಯದಲ್ಲಿ ಗಂಡು ಇಲ್ಲದೆ ಹೆಣ್ಣು ತನ್ನ ಅಸ್ತಿತ್ವವನ್ನು ಊಹಿಸಿಕೊಳ್ಳಲು ಸಾಧ್ಯವಾಗದ ಸ್ಥಿತಿ ಇದ್ದು, ಗಂಡಿನ ಅಗತ್ಯವಾಗಿ ಹೆಂಡತಿ, ತಾಯಿ, ಮಗಳು ಮುಂತಾದ ಸ್ಥಿರ ಮಾದರಿಗಳಲ್ಲಿ ಗುರುತಿಸಿಕೊಂಡಿದ್ದಾಳೆ. ಪರಂಪರೆಯಿಂದ ಬಂದ ಈ ಮಾದರಿಗಳಿಗೆ ಆಧುನಿಕತೆಯ ಒತ್ತಡಗಳು ಹೊಸ ನೋಟವನ್ನು ಕಟ್ಟಿಕೊಟ್ಟವು. ತನಗರಿವಿಲ್ಲದೆ ಅಧೀನವಾಗುವ, ತನ್ನ ಇರುವಿಕೆಯನ್ನು ಸಾಬೀತು ಮಾಡುವ ಸಾಮರ್ಥ್ಯ ಹೆಣ್ಣಿಗೆ ಅನಿವಾರ್ಯವಾಯಿತು. ಈ ಮಾದರಿಗಳನ್ನು ನಿರ್ವಹಿಸುವಲ್ಲಿ ಹೆಣ್ಣು ತನ್ನತನವನ್ನು ಪಕ್ಕಕ್ಕೆ ಸರಿಸಿ ಬದುಕುವಲ್ಲಿಯೂ ಸಾರ್ಥಕತೆಯನ್ನು ಕಂಡುಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಗಾಯತ್ರಿ ನಾವಡ ಅವರು ಹೇಳುವ "ಪುರುಷ ಕೇಂದ್ರಿತ ಗ್ರಹಿಕೆಗಳು ಹೆಣ್ಣಿನ ಗುಣ ಸ್ವಭಾವವನ್ನು ನಿರ್ದೇಶಿಸಿದಂತೆ ಅಂತಹ ಗುಣ ಸ್ವಭಾವಗಳಿಗೆ ಹೊಂದಿಕೆಯಾಗುವ ಕೆಲಸಗಳನ್ನು ನಿಗದಿಪಡಿಸಿತು. ಹೆಣ್ಣಿನ ಸ್ವಭಾವಗಳು ಮನೆಗೆಲಸ ಅಪೇಕ್ಷಿಸುವ ತ್ಯಾಗ, ಸಹನೆ, ಸೂಕ್ಷ್ಮತೆ, ಮಿತವ್ಯಯ, ಸಂಚಯನ ಪ್ರವೃತ್ತಿಗಳು ಹೆಣ್ಣಿನದಾಗಿವೆ ಎಂದು ಅಂತಹ ಗುಣಗಳನ್ನು ವೈಭವೀಕರಿಸುತ್ತಲೇ ಹೆಣ್ಣನ್ನು ಖಾಸಗಿ ಜಗತ್ತಿನ ಎರಡನೇ ನೇಪಥ್ಯಕ್ಕೆ ತಳ್ಳಲಾಯಿತು"[೧] ಎಂಬ ಮಾತುಗಳನ್ನು ಪೂರಕವಾಗಿ ಉಲ್ಲೇಖಿಸಬಹುದಾಗಿದೆ. ಕಾರಣ ಪಿತೃಪ್ರಧಾನತೆ ಹೆಣ್ಣಿಗೆ ಕುಟುಂಬವೇ ಆಕೆಯ ಖಾಸಗಿ ಜಗತ್ತು ಎಂದು ನಂಬಿಸಿದೆ. ಹೆಣ್ಣನ್ನು ನಿರಂತರವಾಗಿ ದೈಹಿಕ ಕೆಲಸಗಳಲ್ಲಿ ತೊಡಗಿಸುವ ಮೂಲಕ ಆಕೆಯ ಬೌದ್ಧಿಕ ಚಿಂತನೆ ಮತ್ತು ಸೃಜನಶೀಲತೆಯನ್ನು ಹತ್ತಿಕ್ಕಲಾಗಿದೆ.

ಹಾಗೆಯೇ ಹೆಣ್ಣಿನ ವಿವಾಹ ಬಾಹಿರ ಪಾತ್ರಗಳಾಗಿ ಗುರುತಿಸಿಕೊಂಡಿರುವ ವೇಶ್ಯೆ, ದೇವದಾಸಿಯರು ಹಾಗೂ ವಿವಾಹ ಸಂಸ್ಥೆಯ ಒಳಗೆ ಅಸಹಾಯಕ ಸ್ಥಿತಿಯಲ್ಲಿ ನಿಲ್ಲುವ

ವಿಧವೆಯರು, ಅವಿವಾಹಿತೆಯರು, ಪರಿತ್ಯಕ್ತೆಯರ ಮೇಲೂ ಪ್ರಧಾನ ಸಂಸ್ಕೃತಿ ತನ್ನ ನಿಯಂತ್ರಣವನ್ನು ಸಾಧಿಸಿದೆ. ಈ ರೀತಿಯಾಗಿ ಹೆಣ್ಣು ನಿರ್ವಹಿಸುವ ಪ್ರತಿಯೊಂದು ಪಾತ್ರಗಳ ಮೇಲೆ ಪುರುಷ ವರ್ಗ ತನ್ನ ಅಧಿಕಾರವನ್ನು ಸ್ಥಾಪಿಸಿದೆ. ಇದಕ್ಕೆ ಮೂಲಭೂತ ಕಾರಣ ಗಂಡು ಹೆಣ್ಣಿನ ನಡುವಿನ ಜೈವಿಕ ವ್ಯತ್ಯಾಸವಾಗಿದೆ. ಹೆಣ್ಣು ಮತ್ತು ಗಂಡಿನ ನಡುವೆ ಜೈವಿಕ ಭಿನ್ನತೆಯಿರುವುದು ನಿಜವಾದರೂ ಉನ್ನತ-ಕನಿಷ್ಠ ಶ್ರೇಷ್ಠ-ನಿಕೃಷ್ಟ ಎಂಬುದಿಲ್ಲ. "ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು, ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ ಆಗುತ್ತಾಳೆಯೇ ವಿನಾ ಯಾರೂ 'ಹೆಣ್ಣಾಗಿ'ಯೇ ಹುಟ್ಟುವುದಿಲ್ಲ"[೨] ಎಂಬ ಸಿಮೋನ್ ದ ಬೋವಾರ ಮಾತಿನಂತೆ ಜೈವಿಕವಾಗಿರುವ ಹೆಣ್ಣನ್ನು ಸಮಾಜ ತನ್ನ ಮೌಲ್ಯ-ಸಂಪ್ರದಾಯ, ನೀತಿ-ಕಟ್ಟಳೆಗಳ ಮೂಲಕ 'ಹೆಂಗಸ'ನ್ನಾಗಿ ರೂಪಿಸುತ್ತದೆ. ಅಲ್ಲದೆ, ಆಕೆ ಪುರುಷನಿಗೆ ಅಧೀನಳು, ಅಲ್ಪಜ್ಞಾನವುಳ್ಳವಳು ಇತ್ಯಾದಿ ನಕಾರಾತ್ಮಕ ಗುಣಗಳನ್ನು ಆರೋಪಿಸುತ್ತದೆ. ಹೀಗೆ ಹೆಣ್ಣನ್ನು ತನ್ನ ಅಧೀನಕ್ಕೆ ಸೆಳೆಯುವ ಪ್ರಕ್ರಿಯೆಯಲ್ಲಿ ಆಕೆಯನ್ನು ತಾಯಿ, ಹೆಂಡತಿ, ವೇಶ್ಯೆ, ದೇವದಾಸಿ, ವಿಧವೆ, ಪತಿವ್ರತೆ ಇತ್ಯಾದಿ ಸಿದ್ಧಮಾದರಿಗಳಿಗೆ ಒಳಪಡಿಸಲಾಗುತ್ತದೆ. ಈ ರೀತಿಯ ಮಾದರಿಗಳನ್ನು ನಿರ್ವಹಿಸುತ್ತಾ ಹೆಣ್ಣು ತನ್ನೆಲ್ಲಾ ಸಹಜ ಅನುಭವಗಳನ್ನು ಆಂತರ್ಯದಲ್ಲೇ ದಮನಗೊಳಿಸಬೇಕಾಗುತ್ತದೆ. ಈ ಬಗೆಯ ದಮನದ ನಡುವೆಯೂ ಸಿದ್ಧಮಾದರಿಗಳಿಗೆ ಪ್ರತಿರೋಧ ಒಡ್ಡುವ ಪ್ರಯತ್ನಗಳಾದವು. ಹಾಗೆಯೇ ಚಳುವಳಿ, ಹೋರಾಟಗಳೊಂದಿಗೆ ಸ್ತ್ರೀಪರ ವಿಚಾರಧಾರೆಗಳು ಲೇಖಕಿಯರ ಸಾಹಿತ್ಯದಲ್ಲಿ ಪ್ರಚುರಗೊಂಡ ಪ್ರಮುಖ ಕಾಲಘಟ್ಟಗಳು ಎದುರಾದವು(ಈ ಕುರಿತು ಹಿಂದಿನ ಅಧ್ಯಾಯದಲ್ಲಿ ತಿಳಿಯಲಾಗಿದೆ). ಇಂತಹ ಕಾಲಘಟ್ಟಗಳಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿರುವುದು 'ಅಂತರಾಷ್ಟ್ರೀಯ ಮಹಿಳಾ ದಶಕ'. ಈ ಅವಧಿಯ ಆಯ್ದ ಲೇಖಕಿಯರ ಕಥನಗಳಲ್ಲಿನ ಹೆಣ್ಣಿನ ಸಿದ್ಧಮಾದರಿಯ ಮತ್ತು ಇದನ್ನು ಮೀರಿದ ಪರಿವರ್ತಿತ ಹಾಗೂ ಪ್ರಗತಿಪರ ಮಾದರಿ ಪಾತ್ರಗಳ ವಿವೇಚನೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

ಈ ವೇಳೆ ಸ್ಥಿರಮಾದರಿ ಪರಿಕಲ್ಪನೆಯ ಬೆಳವಣಿಗೆಯ ಹಂತವಾಗಿ ಪರಿವರ್ತಿತ ಮಾದರಿಯನ್ನು ಗುರುತಿಸಿಕೊಳ್ಳಲಾಗಿದೆ. ಹೀಗಾಗಿ ತಾಯಿ, ಹೆಂಡತಿ, ಅವಿವಾಹಿತೆ, ದೇವದಾಸಿ, ವೇಶ್ಯೆ, ವಿಧವೆ ಮುಂತಾದ ಸ್ಥಿರಮಾದರಿ ಪರಿಕಲ್ಪನೆಗಳು ಪ್ರಗತಿಪರತೆ ಹಾಗೂ ಸ್ತ್ರೀವಾದದ ಪ್ರಭಾವದಿಂದ ಪರ್ಯಾಯ ಮಾದರಿಗಳಾಗಿಯೂ ಲೇಖಕಿಯರ ಕಥನಗಳಲ್ಲಿ ಕಾಣಿಸಿಕೊಂಡಿವೆ. ಹಾಗಾಗಿ ಮಹಿಳಾ ದಶಕದ ಚಿಂತನೆಗಳು, ಮಹಿಳಾ ಚಳುವಳಿಗಳು, ಬದಲಾದ ಪರಿಸರ, ಸ್ಥಿತಿಗತಿಗಳ ಹಿನ್ನೆಲೆಯಾಗಿ ಸ್ಥಿರ ಮತ್ತು ಪರಿವರ್ತಿತ ಸ್ತ್ರೀ ಮಾದರಿ ಪಾತ್ರಗಳ ಆನ್ವಯಿಕ ಅಧ್ಯಯನ ಇದಾಗಿದೆ. ಈ ಮೂಲಕ ಮಹಿಳಾ ದಶಕದ ಲೇಖಕಿಯರ ವಿಭಿನ್ನ ಚಿಂತನೆ ಮತ್ತು ಗ್ರಹಿಕೆಯ ನೆಲೆಗಳನ್ನು ಕಥಾಸಾಹಿತ್ಯದಲ್ಲಿನ ಸ್ತ್ರೀಪಾತ್ರಗಳ ಪ್ರತಿನಿಧೀಕರಣದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

## ೪.೨. ತಾಯಿ–ತಾಯ್ತನ ಪರಿಕಲ್ಪನೆಯ ನಿರ್ವಚನ

ಖಾಸಗಿ ಸಂಪತ್ತಿನ ಪರಿಕಲ್ಪನೆಯ ಹುಟ್ಟಿಗೂ ಮುನ್ನ ಗಂಡು–ಹೆಣ್ಣಿನ ಕೆಲಸಗಳಿಗೆ ಸಮಾನ ಸ್ಥಾನಮಾನವಿತ್ತು. ಆದರೆ ಚರಾಚರ ಸಂಪತ್ತುಗಳು ಗಂಡಿನ ಅಧೀನಕ್ಕೆ ಒಳಪಡುತ್ತಾ ಬಂದಂತೆ ಹೆಣ್ಣು ಸಹ ಆತನ ಖಾಸಗಿ ಆಸ್ತಿಯಾಗಿ ಪರಿಗಣಿತಳಾದಳು. ಅಂದಿನಿಂದ ವಂಶ ಮತ್ತು ಉತ್ತರಾಧಿಕಾರಗಳು ಸಹ ಗಂಡಿನ ಮೂಲಕ ಗುರುತಿಸಿಕೊಳ್ಳಲು ಆರಂಭವಾಯಿತು(ಕೆಲವೇ ಸಮುದಾಯಗಳನ್ನು ಹೊರತುಪಡಿಸಿ). ಈ ಪರಂಪರೆಯ ಮುಂದುವರಿಕೆಗೆ ಅದುವರೆಗೂ ಹೆಣ್ಣಿನ ಜೈವಿಕ ಸಂಗತಿಯಾಗಿದ್ದ ತಾಯ್ತನ ಸಾಮಾಜಿಕ, ಕೌಟುಂಬಿಕ ಆಪೇಕ್ಷೆಯಾಗಿ ಹಾಗೂ ಮೌಲ್ಯವಾಗಿ ಗುರುತಿಸಿಕೊಂಡಿತು. ಅಷ್ಟೇ ಅಲ್ಲದೆ ಇದೇ ಕಾರಣವಾಗಿ ಹೆಣ್ಣು ದುರ್ಬಲಳೂ, ಅಧೀನೆಯೂ ಆಗಿ ಬದುಕಬೇಕಾದ ಸಂದರ್ಭವೂ ಎದುರಾಯಿತು. "ಸ್ತ್ರೀದಾಸ್ಯದ ಇತಿಹಾಸದ ಆರಂಭ ಮತ್ತು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ಉಗಮವನ್ನು ಏಂಗೆಲ್ಸ್ ಖಾಸಗಿ ಆಸ್ತಿಯ ಪರಿಕಲ್ಪನೆಯಲ್ಲಿ ಗುರುತಿಸಿದ್ದಾರೆ."[೩] ಸಾಮಾಜಿಕ ವ್ಯವಸ್ಥೆ ಮಾತೃಪ್ರಧಾನತೆಯಿಂದ ಪಿತೃಪ್ರಧಾನತೆಗೆ ಹೊರಳುತ್ತಲೇ ಹೆಣ್ಣನ್ನು ತನ್ನ ಅಧೀನವಾಗಿಸಿ ಶೋಷಿಸುತ್ತಲೇ ಬರಲಾಗಿದೆ. ಅಲ್ಲದೆ ಇದರ ಒಳರಾಜಕಾರಣವಾಗಿ ಮಾದರಿ ತಾಯಿ ಮತ್ತು ಆಕೆ ಹೊಂದುವ ತಾಯ್ತನವೇ ಹೆಣ್ಣಿನ ಉಳಿದೆಲ್ಲ ಬಗೆಯ ಸಾಧನೆಗಳಿಗಿಂತ ಶ್ರೇಷ್ಠ ಎಂದು ಪ್ರತಿಪಾದಿಸಲಾಗಿದೆ. ಇದರ ಹೊರತಾಗಿ ಹೆಣ್ಣು ಎಂತದ್ದೇ ಸಾಧನೆ ಮಾಡಿದರೂ ತನ್ನ ಸಹಜ ಮಾದರಿಯ 'ತಾಯಿ', 'ತಾಯ್ತನ'ವನ್ನು ಮರೆಯುವಂತಿಲ್ಲ. ಹೀಗಾಗಿ 'ತಾಯ್ತನ' ಎನ್ನುವುದು ಪಿತೃಪ್ರಧಾನ ಸಂಸ್ಕೃತಿಯ ಒಂದು ಭಾಗವಾಗಿದೆ ಮಾತ್ರವಲ್ಲದೆ, ಈ ಬಗೆಗೆ ಯಥೇಚ್ಛವಾದ ಒತ್ತಡ, ಮೌಲ್ಯಗಳನ್ನು ಹೇರಲಾಗಿದೆ. ಹಾಗೆಯೇ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಹೆಣ್ಣಿಗಾಗಿ ಕಲ್ಪಿಸಿದ ತಾಯ್ತನದ ಮಾದರಿಯನ್ನು ನಿರ್ವಹಿಸಲು ಸೂಕ್ತ ತರಬೇತಿ, ಮೌಲ್ಯಗಳ ವೈಭವೀಕರಣ ತಂತ್ರಗಳನ್ನು ಬಳಸುತ್ತಾ ಬರಲಾಗಿದೆ. ಆದ್ದರಿಂದಲೇ ಅನಿವಾರ್ಯವಾಗಿ ತಾಯ್ತನವು ಸಾಮಾಜೀಕರಣದ ಪ್ರಕ್ರಿಯೆ ಮಾತ್ರವಲ್ಲದೆ, ಭಾವನಾತ್ಮಕ ಸಂಗತಿಗಳಿಂದ ಪ್ರೇರಿತವಾಗಿದೆ.

ಈ ಕುರಿತಾಗಿ ಪ್ರಗತಿಪರ ವಿಚಾರಧಾರೆಯ ಸ್ತ್ರೀವಾದಿಗಳು "ದೈಹಿಕ ಸಾಮರ್ಥ್ಯವಾದ ತಾಯ್ತನವು ಕೇವಲ ದೇಹ ಮತ್ತು ಮನಸ್ಸುಗಳಿಗೆ ಮಾತ್ರ ಸಂಬಂಧಿಸಿಲ್ಲ. ಅದು ಸಾಮಾಜಿಕ ಸ್ಥಿತಿಯ ಮೇಲೆ ಕೂಡ ಪ್ರಭಾವವನ್ನು ಬೀರುತ್ತದೆ. ಆದ್ದರಿಂದ ತಾಯ್ತನವನ್ನು ಹೆಚ್ಚಿನ ವಿಶೇಷ ಅರ್ಹತೆಯೆಂದು ಪರಿಗಣಿಸಬೇಕು"[೪] ಎಂದಿದ್ದಾರೆ. ತಾಯ್ತನದಲ್ಲಿ ಋತುಸ್ರಾವ, ಗರ್ಭಧಾರಣೆ, ಮಗುವಿನ ಹೆರುವಿಕೆಗಳು ದೇಹಕ್ಕೆ ಸಂಬಂಧಿಸಿದ ಪ್ರಕ್ರಿಯೆಗಳಾಗಿರುತ್ತವೆ. ಹೆಣ್ಣಿಗೆ ತಾಯ್ತನ ಎನ್ನುವುದು ಮುಖ್ಯಗುಣವಾಗಿ ಮತ್ತು ಸಾಮಾಜಿಕ ಅಗತ್ಯವಾಗಿ ಗುರುತಿಸಲಾಗಿದೆ. ಆದರೆ

ತಾಯಿ-ತಾಯ್ತನವನ್ನು ಪವಿತ್ರವೆಂಬಂತೆ ವೈಭವೀಕರಿಸುತ್ತ ಬಂದಿರುವುದು ಮಾತ್ರವಲ್ಲದೆ ತಾಯಿ ಎಂಬ ಸಿದ್ಧ ಮಾದರಿಗೆ ತ್ಯಾಗ, ಸಹನಶೀಲತೆ, ವಿಧೇಯತೆ ಮುಂತಾದ ಮೌಲ್ಯಗಳನ್ನು ನಿರ್ವಚಿಸಲಾಗಿದೆ. ಈ ಮೂಲಕ ಆಕೆಯನ್ನು ಪುರುಷ ಪ್ರಧಾನತೆಯನ್ನು ಬೆಂಬಲಿಸುವ, ಪೋಷಿಸುವ ಮಾಧ್ಯಮವನ್ನಾಗಿ ರೂಪಿಸಿಕೊಂಡು ಬರಲಾಗಿದೆ. ಇದರೊಂದಿಗೆ ತಾಯ್ತನದ ಕಾರಣದಿಂದ ಹೆಣ್ಣು ಅಸಹಾಯಕಳು, ದುರ್ಬಲಳು ಎಂದು ಹೇಳುವ ಪರಿಪಾಠ ಬಂದಿದೆ. 'ತಾಯ್ತನ'ದ ಹೆಸರಿನಲ್ಲಿ ಅನೇಕ ಬಗೆಯ ಶೋಷಣೆ, ಅನ್ಯಾಯಗಳಿಗೆ ಹೆಣ್ಣನ್ನು ಒಳಪಡಿಸಲಾಗಿದೆ. ಅದರಲ್ಲೂ ಹೆಣ್ಣು ತಾಯ್ತನದ ಅನುಭವದಿಂದ ವಂಚಿತಳಾದಾಗ(ಬಂಜೆತನ) ಸಮಾಜದ ದೂಷಣೆ, ತಿರಸ್ಕಾರಗಳು ಆಕೆಯ ಮೇಲಿನ ಶೋಷಣೆಯನ್ನು ಮತ್ತಷ್ಟು ಹೆಚ್ಚಿಸುತ್ತವೆ.

ಹೀಗೆ ತಾಯಿ-ತಾಯ್ತನದ ಪಾತ್ರ ನಿರ್ವಹಣೆಯಲ್ಲಿ ಹೆಣ್ಣು ಅನುಭವಿಸುವ ಸಂಕಟಗಳು ಅನಿರ್ವಚನೀಯವಾದವು. ಇಂತಹ ನೋವು-ಸಂಕಟಗಳನ್ನು, ಮನೋಧೋರಣೆಗಳನ್ನು ಕಥಾಸಾಹಿತ್ಯದ ಪಾತ್ರಗಳಲ್ಲಿ ಅನಾವರಣಗೊಳಿಸುವ ಪ್ರಯತ್ನ ಕನ್ನಡದ ಹಲವಾರು ಲೇಖಕಿಯರಿಂದ ಆಗಿದೆ. ತಾಯಿ-ತಾಯ್ತನದ ಕುರಿತಾದ ಪಾತ್ರಗಳ ನಿರೂಪಣೆಯಲ್ಲಿ ಇವುಗಳ ಮೌಲ್ಯವನ್ನು ಪುರಸ್ಕರಿಸುವ, ವಿರೋಧಿಸುವ, ಪ್ರಶ್ನಿಸುವ, ವಿಭಿನ್ನ ದೃಷ್ಟಿಕೋನದಲ್ಲಿ ಕಾಣುವ ವೈವಿಧ್ಯಮಯ ಪಾತ್ರಗಳು ಕಂಡುಬರುತ್ತವೆ. ಈ ಬಗೆಯ ಪಾತ್ರಗಳನ್ನು ಸ್ಥಿರ ಮತ್ತು ಪರಿವರ್ತಿತ ಮಾದರಿಗಳಾಗಿ ಮುಖಾಮುಖಿಯಾಗಿಸಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡುವ ಮಹಿಳಾದಶಕದ ಪ್ರಾತಿನಿಧಿಕ ಲೇಖಕಿಯರ ಕಥಾ ಸಾಹಿತ್ಯವನ್ನು ಆಧರಿಸಿ ಸ್ತ್ರೀವಾದಿ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ.

**೪.೨.೧. ತಾಯಿ-ತಾಯ್ತನ ಮಾದರಿ ಪಾತ್ರ ವಿವೇಚನೆ**

ತಾಯ್ತನ ಎನ್ನುವುದು ಪಿತೃಪ್ರಧಾನ ಸಂಸ್ಕೃತಿಯ ಒಂದು ಭಾಗ. ಇಲ್ಲಿ ತಾಯ್ತನದ ಬಗೆಗೆ ಅಪೇಕ್ಷೆ, ಒತ್ತಡ, ಮೌಲ್ಯಗಳನ್ನು ಹೇರಲಾಗಿರುತ್ತದೆ. ಹೀಗಾಗಿ ಅನಿವಾರ್ಯವಾಗಿಯೇ 'ತಾಯ್ತನ' ಭಾವನಾತ್ಮಕ ಸಂಗತಿಗಳಿಂದ ಪ್ರೇರಿತವಾಗಿರುತ್ತದೆ. ಪಾರಂಪರಿಕ ಚಿಂತನೆಯಂತೆ ಮಕ್ಕಳನ್ನು ಹೆತ್ತಾಗ ಮಾತ್ರ ಹೆಂಗಸು ಬಿಡುಗಡೆಯ ಅನುಭವವನ್ನು ಪಡೆಯುತ್ತಾಳೆ. ಕಾರಣ ತಾಯಿಯಾಗದ ಹೊರತು ಹೆಂಡತಿಯಾಗಿ ಅವಳು ಪರಿಪೂರ್ಣಳಲ್ಲ. ಈ ಬಗೆಯ ಮನಸ್ಥಿತಿಯನ್ನು ಪೋಷಿಸುವ ಹಾಗೂ ತಾಯ್ತನದ ಪರಿಕಲ್ಪನೆಯನ್ನೇ ಪರ್ಯಾಯ ರೀತಿಯಲ್ಲಿ ಕಟ್ಟಿಕೊಡುವ ಅನೇಕ ಸ್ತ್ರೀ ಪಾತ್ರಗಳು ಮಹಿಳಾ ದಶಕದ ಲೇಖಕಿಯರ ಕಥಾ ಸಾಹಿತ್ಯದಲ್ಲಿ ಕಾಣಿಸಿಕೊಂಡಿವೆ.

ಸಾರಾ ಅಬೂಬಕ್ಕರ್ ಅವರ 'ಜನನ' ಕಥೆಯಲ್ಲಿ 'ಕದೀಜಾ' ಹದಿಮೂರನೇ ವರ್ಷಕ್ಕೆ ತನಗಿಂತ ವಯಸ್ಸಿನಲ್ಲಿ ಹಿರಿಯನಾದ, ಭಾವನಾಶೂನ್ಯನಾದ ವ್ಯಕ್ತಿಯನ್ನು ಕೈಹಿಡಿಯುತ್ತಾಳೆ.

ಆತನ ಒರಟುತನದ ಬಗ್ಗೆ ತನಗಾದ ನೋವನ್ನು ತಾಯಿಯ ಬಳಿ ಹೇಳಿಕೊಂಡಾಗ "ಗಂಡಸರೆಂದರೆ ಹಾಗೇ ಮಗು ಒರಟೊರಟು ನಿನ್ನ ಗಂಡನಿಗೆ ಪ್ರಾಯ ಕೊಂಚ ಜಾಸ್ತಿಯಾದರೇನಂತೆ? ಊಟ, ಉಡುಗೆಗಂತೂ ಏನೂ ಕಮ್ಮಿಯಾಗಲಾರದು. ಹೆಂಗಸರಿಗೆ ಅದು ತಾನೇ ಮುಖ್ಯ?"[೫] ಎಂದು ಹೇಳುವಲ್ಲಿ ಹೆಣ್ಣಿನ ಭೌತಿಕ ನಿರೀಕ್ಷೆಗಳನ್ನು ಪೂರೈಸುವಲ್ಲಿ ಮಾತ್ರ ಮದುವೆ, ಗಂಡನ ಅಗತ್ಯತೆ ಇದೆ ಎನ್ನುವ ಪಿತೃಪ್ರಧಾನ ಸಮಾಜದ ಸ್ಥಿರ ಮಾದರಿಯ ರೂಪಕವಾಗಿ ಕದೀಜಾಳ ತಾಯಿ ಕಾಣಿಸುತ್ತಾಳೆ. ಮದುವೆಯಾಗಿ ಮೂರು ವರ್ಷಗಳಾದರೂ ಮಕ್ಕಳಾಗದಿದ್ದಾಗ ಇದನ್ನೇ ಕಾರಣವಾಗಿಟ್ಟುಕೊಂಡು ಕದೀಜಾಳ ಗಂಡನಿಗೆ ಮತ್ತೊಂದು ಮದುವೆಯೂ ಆಗುತ್ತದೆ. ಆದರೆ ಗಂಡನ ಮರುಮದುವೆಯಾದ ಎರಡೇ ವರ್ಷಕ್ಕೆ ಕದೀಜಾಳು ಸಹ ತಾಯಿಯಾದಾಗ, ಇನ್ನೂ ಎರಡು ವರ್ಷ ತನ್ನವರು ಕಾದಿದ್ದರೆ? ಎಂಬ ನೋವು ಆಕೆಯನ್ನು ಕಾಡುತ್ತದೆ. ಮುಂದೆ ಗಂಡನ ದುರಾಸೆ ಕಾರಣದಿಂದ ತವರಿನ ಸಂಬಂಧವನ್ನು ಮುರಿದುಕೊಂಡ ಕದೀಜಾ ನಾಲ್ಕನೆ ಹೆರಿಗೆಯ ಸಂದರ್ಭದಲ್ಲಿ ಸಾಯುವ ಸ್ಥಿತಿಯನ್ನು ತಲುಪುತ್ತಾಳೆ. ಆಗ ಹತ್ತು ವರ್ಷದ ತನ್ನ ಮಗಳನ್ನು ಕರೆದು "ಮಗೂ ನನ್ನಲ್ಲಿನ್ನು ಮಗು ಹುಟ್ಟುವುದಿಲ್ಲ ಏನೂ ಹುಟ್ಟುವುದಿಲ್ಲ... ತುಂಬಾ ಓದಿ ವಿದ್ಯಾವಂತಳಾಗು, ಬುದ್ಧಿವಂತಳಾಗು. ನಿನ್ನ ಅನ್ನವನ್ನು ನೀನೇ ಸಂಪಾದಿಸು. ನನ್ನಲ್ಲಿ ಹುಟ್ಟದು ನಿನ್ನಲ್ಲಿ ಹುಟ್ಟಲಿ"[೬] ಎಂದು ಹೇಳುತ್ತಾಳೆ. ಈ ಮೂಲಕ ಲೇಖಕಿ ಹೆಣ್ಣಿನ ಶಿಕ್ಷಣ, ಆರ್ಥಿಕ ಸ್ವಾವಲಂಬನೆಯಂತಹ ಮಹಿಳಾ ದಶಕದ ಚಿಂತನೆಗಳನ್ನು ಕದೀಜಾ ಪಾತ್ರದ ಮೂಲಕ ಪ್ರತಿಪಾದಿಸುತ್ತಿದ್ದಾರೆ.

ಇದೇ ರೀತಿ ಸಾರಾ ಅವರ 'ಸಹನಾ' ಕಾದಂಬರಿಯಲ್ಲಿ ಮನೆಗೆಲಸದ ಒತ್ತಡ, ಮೇಲಿಂದ ಮೇಲೆ ಹೆರುವಿಕೆ ಹಾಗೂ ಮಗಳ ಸಾವಿನಿಂದ ದೈಹಿಕ ದುರ್ಬಲತೆ ಮತ್ತು ಮಾನಸಿಕ ವೇದನೆಗೆ 'ನಸೀಮಾ' ಗುರಿಯಾಗುತ್ತಾಳೆ. ಪರಿಣಾಮವಾಗಿ ಆಕೆಯನ್ನು ಕ್ಷಯ ರೋಗ ಆವರಿಸಿಕೊಂಡಾಗ ಇದನ್ನೇ ನೆಪವಾಗಿಸಿ ಗಂಡ ಪಾಷಾ ಮತ್ತೊಂದು ಮದುವೆ ಯಾಗುತ್ತಾನೆ. ಇಲ್ಲಿ ಇಂತಹ ಕಾರಣಗಳನ್ನು ಮುಂದಿಟ್ಟುಕೊಂಡು ಮದುವೆಯಾಗುವ ಗಂಡಿಗೆ ಮರುಮದುವೆ ನೈತಿಕ ಪ್ರಶ್ನೆಯಾಗಿ ಕಾಡುವುದೇ ಇಲ್ಲವೆನಿಸುತ್ತದೆ. ಬದಲಾಗಿ ನಿರಂತರ ತಾಯ್ತನವೇ ನಸೀಮಾಳ ದುರಂತ ಬದುಕಿಗೆ ಕಾರಣವಾಗುತ್ತದೆ.

'ವಜ್ರಗಳು' ಕಾದಂಬರಿಯ 'ನಫೀಜ' ಇಬ್ಬರು ಗಂಡಂದಿರಿಂದ 'ತಲಾಖ್' ಪಡೆದು, ಮಕ್ಕಳಿಂದ ದೂರವಾಗುತ್ತಾಳೆ. ಅದುವರೆಗೂ ಎರಡು ಕುಟುಂಬಗಳಿಗಾಗಿ ಆಕೆ ಮಾಡಿದ ದುಡಿಮೆ ಹಾಗೂ ತ್ಯಾಗಗಳಿಗೆ ಬೆಲೆ ಸಿಗದೆ ತವರಿನ ಆಶ್ರಯವೂ ಇಲ್ಲದೆ ಅತಂತ್ರಳಾಗುತ್ತಾಳೆ. ಆಗ ಅನೈತಿಕ ಸಂಬಂಧಕ್ಕೆ ಹುಟ್ಟಿದ ಅನಾಥ ಮಗುವನ್ನು ದತ್ತು ಪಡೆದು ಮತ್ತೊಮ್ಮೆ 'ತಾಯ್ತನ'ದ ಮೂಲಕ ನೆಮ್ಮದಿ ಕಾಣುತ್ತಾಳೆ. ಅನಾಥ ಮಗುವೊಂದು ನೀಡುವ ತಾಯ್ತನದ

ಸುಖ ಆಕೆಗೆ ಹೊಸಬದುಕನ್ನು ರೂಪಿಸುತ್ತದೆ. ಅಷ್ಟೇ ಅಲ್ಲದೆ ಜೀವನೋಪಾಯಕ್ಕಾಗಿ ಹೈನುಗಾರಿಕೆಯ ಸ್ವಉದ್ಯೋಗವನ್ನು ಮಾಡಿಕೊಂಡು ಆರ್ಥಿಕ ಸ್ವಾವಲಂಬಿಯಾಗುವುದು ಪ್ರಗತಿಪರ ನಿಲುವಾಗಿ ಕಾಣಿಸುತ್ತದೆ.

ವೀಣಾ ಶಾಂತೇಶ್ವರರ 'ಕೊನೆಯದಾರಿ' ಕಥೆಯ ನಾಯಕಿ 'ಲೀಲಾ' ವಿಚ್ಛೇದಿತೆ. ತನ್ನ ಗಂಡನಲ್ಲಿ ಸಿಗದ 'ತಾಯ್ತನ'ದ ಬಯಕೆಯನ್ನು ವಿನಯ ಸಾಳಕರ, ಗೋವಿಂದಮೂರ್ತಿ, ವಿಲಿಯಮ್ಸ್, ಆಫೀಸಿನ ಬಾಸ್ ಇವರಲ್ಲಿ ಯಾರಿಂದಲಾದರೂ ನೆರವೇರಿಸಿಕೊಳ್ಳಲು ಬಯಸುತ್ತಾಳೆ. ಗೋವಿಂದ ಮೂರ್ತಿಯಂದ "ಲಿಲಿ exuse me ನನ್ನನ್ನು ಅಂಥ ಜಂಜಾಟದೊಳಗೆ ಸಿಗಿಸಬೇಡ. ನಾನೇನು ಮನುಷ್ಯನಲ್ಲವೆ? ನೀನು ನನಗೆ ಬಂಧನ ಹಾಕದಿದ್ದರೂ ನನ್ನಿಂದ ನಿನಗೆ ಹುಟ್ಟಿದ ಮಗು ಬಗ್ಗೆ ತಾನಾಗಿಯೇ ನನ್ನಲ್ಲಿ ಪ್ರೀತಿ-ಗೀತಿ ಹುಟ್ಟಿದರೆ? ಆಗ?"[೭] ಎಂಬ ಉತ್ತರ ಲೀಲಾಗೆ ಸಿಗುತ್ತದೆ. ಆಕೆಯ ಸಂಬಂಧಕ್ಕೆ ಬರುವ ಎಲ್ಲ ಗಂಡಸರೂ ಅಪೇಕ್ಷಿಸುತ್ತಿರುವುದು ದೇಹ ಸುಖವನ್ನೇ ಹೊರತು ತನ್ನ ನಿರೀಕ್ಷೆಯ ಹಿಂದಿರುವ ತಾಯ್ತನದ ಬಯಕೆಯನ್ನು ಅಲ್ಲವೆಂಬುದು ಲೀಲಾಗೆ ಮನವರಿಕೆಯಾಗುತ್ತದೆ. ಹೀಗಾಗಿ ಕೊನೆಗೆ ತನ್ನ ತಂದೆಯ ವಯಸ್ಸಿನ ಶಂಕರೇಗೌಡರಲ್ಲಿ ತಾಯ್ತನವನ್ನು ಸಾಧಿಸಿಕೊಳ್ಳಲು ನಿರ್ಧರಿಸುತ್ತಾಳೆ.

'ಹೀಗೊಂದು ಕಥೆ'ಯಲ್ಲಿ ಕಥಾನಾಯಕಿ ಹಾಗೂ ನಾಯಕನದು 'ಲಿವಿಂಗ್ ಟು ಗೆದರ್' ಸಂಬಂಧ. ಮದುವೆಯಿಲ್ಲದಿದ್ದರೂ ಹತ್ತುವರ್ಷ ಸಹಬಾಳ್ವೆ ನಡೆಸಿದವರು. ಮುಂದೊಂದು ದಿನ ಆಕೆ ತಾಯಿಯಾದಾಗ "ಮಗು ಹೆರಲು ನಮಗೆ ಅಧಿಕಾರವಿಲ್ಲ. ಕಾನೂನು ಪ್ರಕಾರ ನಾವು ಗಂಡ ಹೆಂಡತಿ ಅಲ್ಲವಲ್ಲ, ನಿನಗಿಷ್ಟು ತಿಳಿಯಬಾರದೆ"[೮] ಎನ್ನುವ ಅವನ ಅಧಿಕಾರವಾಣಿಯ ಉತ್ತರದಿಂದ ಆಕೆಯಲ್ಲಿ ನಿರಾಸೆಯ ಜೊತೆ ಕೋಪವೂ ಸೇರುತ್ತದೆ. ಮಗುವಿನ ತಾಯಿ ಯಾಗಬೇಕಾದರೆ ನೀನು ಮೊದಲು ಮದುವೆಯಾಗಬೇಕಲ್ಲವೆ ಎಂಬ ಅಕ್ಷೇಪಕ್ಕೆ "ಛೇ ಅದಕ್ಕೂ-ಇದಕ್ಕೂ ಏನು ಸಂಬಂಧ" ಎಂದು ಹೇಳುವ ಕಥಾನಾಯಕಿ ಕೊನೆಯಲ್ಲಿ ಜೊತೆಗಾರನ ಸಂಬಂಧವನ್ನೇ ತೊರೆದು ತಾಯ್ತನವನ್ನು ಉಳಿಸಿಕೊಂಡು ಸ್ವತಂತ್ರವಾಗಿ ಬದುಕುವ ನಿರ್ಧಾರಕ್ಕೆ ಬರುತ್ತಾಳೆ. ಈ ಎರಡೂ ಕಥೆಗಳನ್ನು ಗಮನಿಸಿದಾಗ "ವೀಣಾ 'ಮದುವೆ' ಮತ್ತು 'ವಿವಾಹ ಬಾಹಿರ' ಸಂಬಂಧಗಳ ನಡುವಿನ ಸೂಕ್ಷ್ಮ ಅಂತರಗಳನ್ನು ಹುಡುಕುತ್ತಾರೆ. ಅವರು ಸೃಷ್ಟಿಸುವ ಗಂಡು ಪಾತ್ರಗಳಲ್ಲಿ ಅನೇಕರಿಗೆ 'ಮದುವೆಯಾದ ಹೆಂಡತಿ' ಮತ್ತು ಅದಕ್ಕಿಂತ ಹೆಚ್ಚಾಗಿ ಆ ಚೌಕಟ್ಟಿನಲ್ಲಿ ಹುಟ್ಟಿದ ಮಕ್ಕಳು ಮುಖ್ಯ"[೯] ಎಂದು ರಾಘವೇಂದ್ರರಾವ್ ಅವರು ವೀಣಾ ಅವರ ಕಥೆಗಳನ್ನು ಕುರಿತು ಹೇಳಿರುವ ಮಾತುಗಳು ಈ ಎರಡೂ ಕಥೆಗಳಿಗೆ ಮತ್ತಷ್ಟು ಸಮರ್ಥನೆ ಒದಗಿಸುತ್ತದೆ.

ಇದೇ ಮಾದರಿಯ ಗೀತಾ ಅವರ ಕಾದಂಬರಿ 'ಧುಮ್ಮಸು'ವಿನಲ್ಲಿ ಕಥಾನಾಯಕಿ 'ಸೋನಿ' 'ಮಲ್ಲೇಶಿ'ಯನ್ನು ಪ್ರೀತಿಸಿ ಮದುವೆಯಾಗುವಷ್ಟರಲ್ಲಿ ಆತನ ಸಾವು ಸಂಭವಿಸುತ್ತದೆ. ಆ ವೇಳೆಗೆ ಗರ್ಭಿಣಿಯಾಗಿದ್ದ ಸೋನಿ ಪಂಚರ ತೀರ್ಮಾನ ಎದುರಿಸಿ ತನ್ನ ತಾಯ್ತನ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾಳೆ. ಊರು ತೊರೆದು ಮಗುವಿನೊಂದಿಗೆ ಹೊಸ ಬದುಕು ಕಟ್ಟಿಕೊಳ್ಳುವ ಸೋನಿ "ಜನದ ಮುಂದ ಆಟೀ ಮದಿ ಆಗಿರಲಿಲ್ಲ. ನಾನೂ ಅವನೂ ಗಂಡಾ ಹೆಣ್ತಿ ಆಗಿ ಭಾಳ ದಿನಾ ಆಗಿತ್ತು. ಅದಕ್ಕೆ ನನ್ನ ಹೊಟ್ಟಾಗಿರಾ ಈ ಕೂಸು ನನ್ ಗಂಡಂದು, ಹಾದರದ್ದಲ್ಲ. ನಾ ಈ ಹೊಟ್ಟಿ ಬೀಳಸ್ಕೊಂಡು ನನ್ನ ಕೂಸಿಗಿ, ಸತ್ತ ನನ್ನ್ ಮಲ್ಲೂಗ ದೋಕಾ... ಮಾಡಂಗಿಲ್ರಿ ಯಪ್ಪಾ... ಇದೀಟೆ ನಾ ಹೇಳಾದು"[೧೦] ಎಂದು ಹೇಳುವ ಮೂಲಕ ಅವಿವಾಹಿತೆಯಾದರೂ ತಾಯ್ತನದ ಹಕ್ಕನ್ನು ಚಲಾಯಿಸುವ ರೀತಿ ಇಲ್ಲಿ ಮುಖ್ಯವಾಗುತ್ತದೆ. ಹೆಣ್ಣಿನ ಆಪೇಕ್ಷೆಯಾಗಿ ತಾಯ್ತನವನ್ನು ಸಾಧಿಸಿಕೊಳ್ಳಲು ವಿವಾಹದ ವಿಧಿಯೊಂದೇ ಮಾನದಂಡವಲ್ಲ ಎಂಬ ಪ್ರಗತಿಪರ ನಿಲುವನ್ನು ಲೇಖಕಿ ಸೋನಿಯ ಮೂಲಕ ವ್ಯಕ್ತಪಡಿಸುತ್ತಾರೆ.

ಈಗಾಗಲೇ ಪಾಶ್ಚಿಮಾತ್ಯ ಸಂಸ್ಕೃತಿಗಳು ಅವಿವಾಹಿತ, ವಿವಾಹಬಾಹಿರ ತಾಯ್ತನದ ಪರಿಕಲ್ಪನೆಯನ್ನು ಒಪ್ಪಿಕೊಂಡಿವೆ. ಆದರೆ ಭಾರತೀಯ ಸಮಾಜದಲ್ಲಿ ಈ ನಿರ್ಧಾರವನ್ನು ಸಮಾಜಬಾಹಿರವಾದ ಕಾರ್ಯವಾಗಿ ಪರಿಗಣಿಸಲಾಗಿದೆ. ವಿಪರ್ಯಾಸವೆಂದರೆ ಇಲ್ಲಿ ಅವಿವಾಹಿತ ತಾಯಿಯಾದ ಹೆಣ್ಣನ್ನು ಸಮಾಜ ದೂಷಿಸುತ್ತದೆಯೇ ಹೊರತು, ಅದರಲ್ಲಿ ಸಮಭಾಗಿಯಾದ ಗಂಡನ್ನು ಅಲ್ಲ. ಇಂತಹ ಪರಿಸರದಲ್ಲಿಯೂ ಅಂದಿನ ಕಾಲಮಾನಕ್ಕೆ 'ಅವಿವಾಹಿತ' 'ವಿವಾಹೇತರ' ತಾಯ್ತನವನ್ನು ಸಮರ್ಥಿಸಿಕೊಳ್ಳುವ ಪಾತ್ರಗಳನ್ನು ಸೃಷ್ಟಿಸಿರುವ ಲೇಖಕಿಯರ ವೈಚಾರಿಕತೆ "ತನ್ನ ದೇಹ ತನ್ನ ಹಕ್ಕು" ಎಂಬ ಮಹಿಳಾ ದಶಕದ ಚಿಂತನೆಯನ್ನು ಪುಷ್ಟೀಕರಿಸುತ್ತದೆ.

ವೀಣಾ ಅವರ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯ 'ಪೂರ್ಣಿಮಾ' ಉನ್ನತ ಹುದ್ದೆಯ ಶ್ರೀಮಂತ, ವಿದ್ಯಾವಂತ ಭಾಸ್ಕರ್ ಸಿಂಗ್‌ನನ್ನು ಮದುವೆಯಾಗುತ್ತಾಳೆ. ಮತ್ತೆ ಮತ್ತೆ ಬಸಿರಾಗುವುದು ತಾಯಿಯಾಗುವುದು ಆಕೆಗೆ ಇಷ್ಟವಿಲ್ಲದ ವಿಚಾರಗಳು. ಇದರೊಟ್ಟಿಗೆ ಆಕೆಯ ಕವಿತೆ ರಚನೆಯ ಪ್ರತಿಭೆಗೆ ಭಾಸ್ಕರ್‌ಸಿಂಗ್ ವಿಧಿಸಿರುವ ನಿರ್ಬಂಧ ಸಹ ಪೂರ್ಣಿಮಾಳನ್ನು ಮತ್ತಷ್ಟು ಮಂಕಾಗಿಸುತ್ತದೆ. ನಿರಂತರ ತಾಯ್ತನದಿಂದ ಪೂರ್ಣಿಮಾಳ ಆರೋಗ್ಯ ಹದಗೆಟ್ಟಾಗ "ಹೆಂಗಸಾಗಿ ಪ್ರೆಗ್ನೆನ್ಸಿ ಬೇರ್ ಮಾಡೋ ಶಕ್ತಿ ಇಲ್ಲ ಅಂದ್ರ ಏನ್ರೀ ಡಾಕ್ಟರ್"[೧೧] ಎಂದು ನಿರ್ಲಕ್ಷ್ಯದಿಂದ ಮಾತನಾಡುವ ಭಾಸ್ಕರ್‌ನ ಮಾತುಗಳಿಗೆ ಬೆದರಿ ಪೂರ್ಣಿಮಾ ಆತನನ್ನು ಹಿಂಬಾಲಿಸುತ್ತಾಳೆ. ಪೂರ್ಣಿಮಾ ವಿದ್ಯಾವಂತೆ, ಬರವಣಿಗೆಯಂತಹ ಸೃಜನಶಕ್ತಿ ಹೊಂದಿರುವವಳು. ಆದರೆ ತಾಯ್ತನದ ಹೆಸರಿನಲ್ಲಿ ಗಂಡನಿಂದ ನಿಯಂತ್ರಿಸಲ್ಪಡುವ ರೀತಿ, ಆತನ ಮಾತು–ನಡವಳಿಕೆಗಳಿಗೆ ಅಧೀನಳಾಗಿ ನಡೆಯುವುದು ಪುರುಷ ಪ್ರಧಾನತೆ ಹೆಣ್ಣಿನ ದೈಹಿಕ, ಮಾನಸಿಕ,

ಬೌದ್ಧಿಕ ಕ್ರಿಯೆಗಳ ಮೇಲೆ ಸಾಧಿಸಿರುವ ನಿಯಂತ್ರಣದ ರೂಪಕವಾಗಿದೆ. ಗರ್ಭಧರಿಸುವ, ಹೆರುವ ಪ್ರಕ್ರಿಯೆಗಳೆಲ್ಲವೂ ಹೆಣ್ಣಿನ ದೇಹಕ್ಕೆ ಸಂಬಂಧಿಸಿದ್ದರೂ ಅದರಾಚೆ ಆಕೆಗೆ ತನ್ನದೇ ಆದ ಭಾವನಾತ್ಮಕ ಲೋಕ, ಅನುಭವ, ಪ್ರತಿಭೆ, ಸೃಜನಶೀಲತೆಗಳಿವೆ. ಆದರೆ, ದೇಹ ಮತ್ತು ತಾಯ್ತನದ ಕಾರಣದಿಂದ ಹೆಣ್ಣನ್ನು ತಿರಸ್ಕಾರದಿಂದ ಕಾಣುವ ಅಧಿಕಾರಶಾಹಿ ನಿಲುವನ್ನು ಪಿತೃ ಸಂಸ್ಕೃತಿ ತಳೆದಿದೆ.

ಗೀತಾ ಅವರ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿ ಅನಾಥೆ 'ಲಚ್ಚಿ' ಕುಲಕರ್ಣಿಯ ಕಾರಣದಿಂದ ಜೈಲು ಸೇರಿ ಪೊಲೀಸರಿಂದ ಅತ್ಯಾಚಾರಕ್ಕೆ ಒಳಗಾಗಿ ಸ್ತ್ರೀ ನಿಕೇತನಕ್ಕೆ ಸೇರುತ್ತಾಳೆ. ಆದರೆ ಅಲ್ಲಿಯೂ ವೇಶ್ಯಾವಾಟಿಕೆಯ ಜಾಲಕ್ಕೆ ಸಿಕ್ಕು ಬದುಕು ಮತ್ತಷ್ಟು ದುರಂತವಾಗುತ್ತದೆ. ಈ ವೇಳೆ ಆಕೆಯನ್ನು ಅಲ್ಲೇ ಕೆಲಸ ಮಾಡುತ್ತಿದ್ದ ಬಸಣ್ಣಿ ಅನಾಥಳೆಂದು ತಿಳಿದು ಮದುವೆಯಾಗುತ್ತಾನೆ. ಮುಂದೆ ಲಚ್ಚಿಯ ಪೂರ್ವಾಪರ ತಿಳಿದ ಬಸಣ್ಣಿ ಗರ್ಭಿಣಿಯಾಗಿದ್ದ ಆಕೆಯನ್ನು ಮನೆಯಿಂದ ಹೊರಹಾಕುತ್ತಾನೆ. ಗಂಡುಮಗುವನ್ನು ಹೆತ್ತು ಬಸಣ್ಣಿಯ ಆಶ್ರಯ ಕೇಳಿ ಪುನಃ ಬಂದಾಗ ಲಚ್ಚಿ ಆತನಿಂದ ಮತ್ತೆ ತಿರಸ್ಕಾರವನ್ನು ಎದುರಿಸಬೇಕಾಗುತ್ತದೆ. ಆಗ ಅಕೆಗೆ ತನ್ನ ಮಗು ಪುರುಷ ಕ್ರೌರ್ಯದ ಪ್ರತೀಕಾರವಾಗಿ ಕಾಣಿಸುತ್ತದೆ. ಪರಿಣಾಮ ಮಗುವಿನೊಂದಿಗೆ ಕೋಟೆಯ ಕಂದಕ ಏರಿ ನೀರಿಗೆ ಹಾರಿದಾಗ, ಮಗು ಸತ್ತು ಲಚ್ಚಿ ಬದುಕಿ ಪುನಃ ಜೈಲು ಸೇರುತ್ತಾಳೆ. ಆಗ ಕೋರ್ಟಿನಲ್ಲಿ ಕೇಳುವ ಪ್ರಶ್ನೆಗೆ ಲಚ್ಚಿ "ಅದರ ಅಪ್ಪ ಅದಕ ತಂದೆಂತ ತಗೋಲಿಲ್ರೀ... ಮ್ಯಾಲಾಗಿ ಅದು ಗಂಡಸ ಮಗಾ ಇತ್ತು ನಾಳಿಗಿ ದೊಡ್ಡದಾಗಿ ಸಾವಿರ ಹೆಂಗಸರ ಬಾಳ್ಯಾ ಹಾಳ ಮಾಡಿ ಅವರ ಬದುಕಿಗೆ ಬೆಂಕಿ ಹಚ್ಚಾ ಗಂಡ ಮಗಾ... ಅದಕ... ಅದಕ್ಕನೂ ಕೊಲ್ಲಿ ನಾನು ಸಾಯ್ಬೇಕಂತ ಮಾಡಿದ್ದಿನ್ರೀ"[೧೨] ಎಂದು ಉತ್ತರಿಸುತ್ತಾಳೆ. ಕಥೆಯಲ್ಲಿ "ಮಗುವನ್ನು ಕೊಲ್ಲುವ ಮೂಲಕ ಗಂಡುಕುಲಕ್ಕೆ ಆಕೆ ಸಲ್ಲಿಸುವ ಪ್ರತಿಭಟನೆ ರಚನಾತ್ಮಕವಾದುದಲ್ಲವಾದರೂ ಅದರ ಹಿಂದಿರುವ ನೋವು ಮತ್ತು ಶೋಷಣೆಯ ಅನಂತ ಮುಖಗಳನ್ನು ತೆರೆದಿಡುವ ಶಕ್ತ ಅಭಿವ್ಯಕ್ತಿಯಾಗುತ್ತದೆ."[೧೩] ಲಚ್ಚಿಗೆ 'ತಾಯ್ತನ'ದ ಭಾವನಾತ್ಮಕ ಸಂಗತಿಗಳಿಗಿಂತಲೂ ತನ್ನ ಬದುಕಿನಲ್ಲಿ ಬಂದ ಎಲ್ಲ ಕ್ರೂರ ಗಂಡಸರ ಪ್ರತಿನಿಧಿ ಎಂಬಂತೆ ಮಗು ಕಾಣಿಸುವುದು 'ತಾಯ್ತನ'ದ ಪರ್ಯಾಯ ವ್ಯಾಖ್ಯಾನ ನೀಡುವಂತಿದೆ.

ಗೀತಾ ಅವರ 'ಅವ್ವ' ಕಥೆಯಲ್ಲಿ 'ಗಂಗಾ' ತನ್ನ ರೋಗಿಷ್ಟ ಮಗುವಿನ ಚಿಕಿತ್ಸೆಗಾಗಿ ದವಾಖಾನೆಗೆ ಬರುತ್ತಾಳೆ. ಈ ವೇಳೆಗೆ ಕುಕ್ಕಣ್ಣಿಯ ಮೋಸದಿಂದ ಅಪರಾಧಿಯಾಗಿ ಗಂಡ ಮೈಲಾರಿ ಜೈಲು ಸೇರಿರುತ್ತಾನೆ. "ನೀ ಜೇಲಿನಿಂದ ಬರೂತನಕ ನಿನ್ ಮನಿ ಖರ್ಚಾ ಎಲ್ಲಾ

ನಾ ನಡೆಸ್ತಿನೋ ಮೈಲಾರಿ... ನಿನ್ನ ಹೆಣ್ತಿ ಅಂದ್ರ ನನ್ ಮಗಳಿದ್ದಂಗ... ನೀ ಏನೂ ಚಿಂತಿ ಮಾಡಬ್ಯಾಡ ಹೋಗಿ ಬಾ..."[೧೪] ಅಂದಿದ್ದ ಕುಕ್ಕಣ್ಣಿ ಗಂಗಾಳಿಗೆ ಸಹಾಯ ಮಾಡಲು ಆಶ್ವಾಸನೆ ಇತ್ತಿದ್ದು ದುರುದ್ದೇಶಕ್ಕೆ ಎಂದು ತಿಳಿದು ಪ್ರತಿಭಟಿಸುತ್ತಾಳೆ. ಈ ಕಾರಣದಿಂದಲೇ ಮೈಲಾರಿ ಖಾಯಂ ಜೈಲುಪಾಲಾಗುವಂತಾಗುತ್ತದೆ. ಇದೇ ವೇಳೆ ಖಾಯಿಲೆಗೆ ಬಿದ್ದ ಮಗುವಿಗೆ ಚಿಕಿತ್ಸೆ ಕೊಡಿಸಲು ಯಾರ ಆಶ್ರಯವೂ ಆಕೆಗೆ ಇಲ್ಲ. ಹೀಗಿರುವಾಗ ನಗರದ ಸರ್ಕಾರಿ ದವಾಖಾನಿಯಲ್ಲಿ ಪುಕ್ಕಟೆ ಔಷಧ ಸಿಗುವುದೆಂದು ಬಂದ ಗಂಗಾಳಿಗೆ ಅಲ್ಲಿ ಭ್ರಷ್ಟತೆಯ ಸತ್ಯದರ್ಶನವಾಗಿತ್ತು. ಮಗು ಸಾಯುವ ಸ್ಥಿತಿ ತಲುಪಿ ಔಷಧಿ ತರಲು ಕಾಸಿಲ್ಲದೆ ಅಸಹಾಯಕಳಾಗುತ್ತಾಳೆ. ಆಗ ಶ್ರೀಮಂತ ಆಗಂತುಕನೊಬ್ಬ ಆಕೆಯ ಮಾನಕ್ಕೆ ಬದಲಾಗಿ ಹಣ ತೆರಲು ಬಂದಾಗ, ಆಕೆಯ 'ತಾಯ್ತನ'ದ ಹಲುಬು ಇದಕ್ಕೆಲ್ಲ ಒಪ್ಪಿಗೆ ನೀಡುತ್ತದೆ. ಆತನಿಂದ ಹಣ ಪಡೆದು ಮಗುವಿನ ಬಳಿ ಔಷಧಿಯೊಂದಿಗೆ ಬಂದಾಗ ಯಾವ ಉಪಯೋಗವೂ ಆಗದೇ ಮಗು ಪ್ರಾಣಬಿಟ್ಟಿತು. ಮಗುವಿನ ಸಾವಿನಿಂದ ಅರೆಹುಚ್ಚಿಯಾದ ಗಂಗಾ ಸಿರಿವಂತರ ವಾಹನಗಳ ಮೇಲೆ ಕಲ್ಲು ತೂರಿ, ಪುನಃ ಕಾಮದಾಸೆಗೆ ತನ್ನ ಬಳಿ ಬಂದ ಆಗಂತುಕನ ಮೇಲೆಯೂ ಹಲ್ಲೆ ಮಾಡುತ್ತಾಳೆ. ಕಥೆಯಲ್ಲಿ ಗಂಗಾಳಿಗೆ ತನ್ನ ಮಾನಕ್ಕಿಂತಲೂ ತಾಯ್ತನದ ಉಳಿವು ಮುಖ್ಯವಾಗುತ್ತದೆ. ಕೊನೆಗೆ ಅದೇ ತಾಯ್ತನವನ್ನು ಉಳಿಸಿಕೊಳ್ಳಲು ಸಾಧ್ಯವಾಗದಿದ್ದಾಗ ತನ್ನ ಈ ಆವಸ್ಥೆಗೆ ಕಾರಣವಾದ ಉಳ್ಳವರ ವಿರುದ್ಧ ಆಕ್ರೋಶ ತಾಳುತ್ತಾಳೆ. ಇದೇ ರೀತಿಯ ಕಥಾವಸ್ತು ಗೀತಾ ಅವರ 'ಮಠದವ್ವ' ಕಥೆಯಲ್ಲಿದೆ. ಇಲ್ಲಿಯೂ ಮಗುವಿಗಾಗಿ ತನ್ನ ಮೈಮಾರಿಕೊಳ್ಳುವ ಕಥಾನಾಯಕಿ ಪುನಃ ತನ್ನನ್ನು ದುರುಪಯೋಗ ಪಡೆಯಲು ಮುಂದಾದ 'ಡ್ರೈವರ್'ನನ್ನು ಕೊಲ್ಲುತ್ತಾಳೆ.

ವೈದೇಹಿ ಅವರ ಪ್ರಸಿದ್ಧ ಕಥೆ 'ಅಕ್ಕು'ವಿನಲ್ಲಿ ವಿವಾಹದ ದಿಕ್ಕರಣೆ ಇದ್ದರೂ 'ತಾಯ್ತನ'ದ ಅಪೇಕ್ಷೆ ಇದೆ. ವೀಣಾ ಅವರು ಪಾಶ್ಚಾತ್ಯ ಸಾಹಿತ್ಯ ಚಿಂತನೆಗಳ ಪ್ರಭಾವದಿಂದಾಗಿ ವಿವಾಹ ಚೌಕಟ್ಟಿನ ಸಂಬಂಧದ ಆಚೆಗೆ 'ತಾಯ್ತನ'ದ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಆದರೆ, ವೈದೇಹಿ 'ಅಕ್ಕು' ಕಥೆಯ ಮೂಲಕ ಅಮೂರ್ತ ನೆಲೆಯಲ್ಲಿ ತಾಯ್ತನವನ್ನು ಚಿತ್ರಿಸುತ್ತಾರೆ. ಅಕ್ಕು ಕುಟುಂಬ ಅಧಿಕಾರದ ಒಂದು ಶ್ರೇಣೀಕೃತ ವ್ಯವಸ್ಥೆಯಲ್ಲಿ ಬದುಕುತ್ತಿದ್ದರೂ ಸಹ ಆಕೆಗೆ ಮಾತ್ರ ಸ್ವತಂತ್ರವಿದೆ. ಇದಕ್ಕೆ ಕಾರಣ ಅಕ್ಕುವಿನ ಹುಚ್ಚು. ಮನೆಯ ಒಳ-ಹೊರಗೆ ಎಷ್ಟೇ ತಾತ್ಸಾರ ತಿರಸ್ಕಾರಗಳಿದ್ದರೂ ತನ್ನಷ್ಟಕ್ಕೆ ತಾನು ಬದುಕುವಾಕೆ, ಆಕೆ ಹುಚ್ಚಿಯಾದರೂ ವಾಸ್ತವ ಮತ್ತು ಭ್ರಮೆ ಎರಡರಲ್ಲೂ ಜೀವಿಸುವವಳು. 'ಅಕ್ಕು'ವಿನ ಗಂಡ ಸಂನ್ಯಾಸಿಯ ಹಿಂದೆ ಓಡಿಹೋದಾಗಿನಿಂದ ಬಸುರಿ ಪಾರ್ಟು ಮಾಡುತ್ತ, ಎಲ್ಲಿಂದಲೋ ಬಂದ 'ಟವಾಲ'ನ್ನು ಕೈಯಲ್ಲಿ ಹಿಡಿದು ಅದರ

ಸಮೇತವೇ ಸವಾರಿ ಹೊರಡುವಳು. ಬಸುರಿ-ಬಯಕೆಯ ಊಟ, ನಾಮಕರಣದ ಸಮಾರಂಭಗಳಿಗೆ ಕರೆಯದೇ ಹೋಗುವ ಅತಿಥಿ. ಹೀಗೆ ಹೊರಟ ಅಕ್ಕು ಬಸುರಿಯ ಹತ್ತಿರದಿಂದ, ತೊಟ್ಟಿಲ ಕೂಸಿನಿಂದ ಆಚೆ-ಈಚೆ ಸರಿಯುವವಳಲ್ಲ. ಜೊತೆಗೆ ಲಾಲಿ ಹಾಡನ್ನೂ ಹಾಡುವವಳು. ಆಕೆಯ ವರ್ತನೆಗಳು ಭ್ರಮೆಯಾದರೂ ವಾಸ್ತವದಲ್ಲಿ ಗಂಡನಿಂದ ದೂರವಾದ ಅಕ್ಕು ತನ್ನ ತಾಯ್ತನದ ಹಂಬಲವನ್ನು ಅದುಮಿಟ್ಟುಕೊಂಡು ಬದುಕುವ ಹೆಣ್ಣಾಗಿ ನಿರೂಪಿತವಾಗಿದ್ದಾಳೆ. ತನ್ನದಲ್ಲದ ತಪ್ಪಿಗೆ 'ತಾಯ್ತನ' ಹಾಗೂ 'ದಾಂಪತ್ಯ' ಸುಖದಿಂದಾದ ವಂಚನೆ ಮತ್ತು ಆಕೆಯ ಕುರಿತಾಗಿ ಸುತ್ತಲಿನವರ ಲೇವಡಿ, ತಿರಸ್ಕಾರದ ಮಾತುಗಳು ಅಕ್ಕುವನ್ನು ಹುಚ್ಚಿಯಾಗಿಸಿವೆ. ಯಾರಾದರೂ "ಕಡೆಗೆ ಎಂತದ ಅಕ್ಕು? ನಿನ್ ಗಂಡ ಸಿಕ್ಕಿದ್ನ ಎಂತ ಕತೆ" ಎಂದು ಕೇಳಿದರೆ "ಅವ್ನ ಹೂಳಿ ಬಂದೆ" ಎನ್ನುವವಳು. ತನಗೆ ಒದಗಿದ ಈ ಸ್ಥಿತಿಗೆ ಕಾರಣನಾದ ಗಂಡನ ಬಗ್ಗೆ ಅಕ್ಕುವಿಗೆ ತಿರಸ್ಕಾರ ಹುಚ್ಚಿನ ಮಾತುಗಳ ಮೂಲಕವೇ ವ್ಯವಸ್ಥೆಗೆ ತಕ್ಕ ಉತ್ತರ ಕೊಡುವ ಛಾತಿ ಇದೆ.

ಹೀಗೆ ಹೆಣ್ಣಿನ ಲೈಂಗಿಕತೆ, ತಾಯ್ತನದ ಸಾಮರ್ಥ್ಯಗಳನ್ನು ನಿಯಂತ್ರಿಸುವ ಮೂಲಕ ಪುರುಷ ಪ್ರಧಾನ ಸಂಸ್ಕೃತಿ ತನ್ನ ಅಧಿಕಾರ ಸಂಬಂಧವನ್ನು ಸ್ಥಾಪಿಸುತ್ತಲೇ ಬಂದಿದೆ. ಆದರೆ 'ಹೀಗೊಂದು ಕಥೆ', 'ಸಹನಾ', 'ವಜ್ರಗಳು' ಕಥೆಗಳಲ್ಲಿ ಈ ಅಧಿಕಾರ ಸಂಬಂಧ ಹಾಗೂ ವೈವಾಹಿಕ ಬದುಕನ್ನು ತೊರೆದು ಸ್ವಾವಲಂಬಿ ಬದುಕನ್ನು ಕಂಡುಕೊಳ್ಳುವ ಪಾತ್ರಗಳಾಗಿ ಸ್ತ್ರೀ ಮಾದರಿಗಳಿವೆ. ಹೆತ್ತ ಮಗುವನ್ನು ಪುರುಷ ಶೋಷಣೆಯ ಪ್ರತಿನಿಧಿಯಾಗಿ ಭಾವಿಸಿ ಕೊಲ್ಲುವ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿ ಮತ್ತು ಭ್ರಮೆಯ ಮಾತುಗಳ ಮೂಲಕವೇ ವ್ಯವಸ್ಥೆಯನ್ನು ವಿರೋಧಿಸುವ 'ಅಕ್ಕು' ಕಥೆಯ ನಾಯಕಿಯರದು ಪರಿವರ್ತಿತ ಮಾದರಿಯ ಪಾತ್ರಗಳಾಗಿವೆ. ಹಾಗೆಯೇ ತಾಯ್ತನದ ಹೆಸರಿನಲ್ಲಿ ಆಗುವ ಎಲ್ಲ ಶೋಷಣೆಗಳನ್ನು ಸಹಿಸಿ ದುರಂತ ಅಂತ್ಯ ಕಾಣುವ ಮತ್ತು ವ್ಯವಸ್ಥೆಗೆ ಹೊಂದಿಕೊಳ್ಳುವ ಸ್ಥಿರ ಮಾದರಿ ಪಾತ್ರಗಳು 'ಜನನ', 'ಕೊನೆಯದಾರಿ' ಕಥೆಗಳಲ್ಲಿವೆ. ದುರಂತದಲ್ಲೂ ಪ್ರಗತಿಪರ ಸಂದೇಶವನ್ನು ನೀಡುವ ಈ ಪಾತ್ರಗಳು ಲೇಖಕಿಯರ ಹೊಸ ಮಾದರಿಯ ಚಿಂತನೆಗಳನ್ನು ಪ್ರತಿನಿಧಿಸುತ್ತವೆ. 'ತಾಯ್ತನ'ದ ಪರಿಕಲ್ಪನೆಗೆ ಸಂಬಂಧಿಸಿದಂತೆ ಮತ್ತೊಂದು ಭಾಗವಾಗಿ ಕಾಣಿಸುವುದು 'ಬಂಜೆತನ' ಹಾಗೂ 'ಲಿಂಗತಾರತಮ್ಯ'ದ ವಿಚಾರಗಳು. 'ತಾಯ್ತನ'ದ ಹೆಸರಿನಲ್ಲಿ ಹೆಣ್ಣು ಅನುಭವಿಸುವ ನೋವು, ಸಂಕಷ್ಟಗಳು ಒಂದು ಬಗೆಯಾದರೆ, 'ಬಂಜೆತನ' ಹಾಗೂ 'ಲಿಂಗತಾರತಮ್ಯ'ದ ಮೂಲಕ ಆಕೆಗಾಗುವ ಶೋಷಣೆ, ಅವಮಾನಗಳು ಮತ್ತೊಂದು ಬಗೆಯವು. ಇದೇ ವಿಚಾರಗಳನ್ನು ಮುಖ್ಯವಾಗಿಟ್ಟುಕೊಂಡು ಬಂದ ಹಲವಾರು ಕಥೆ-ಕಾದಂಬರಿಗಳನ್ನು ಸಹ ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ.

## ೪.೨.೨. ಬಂಜೆತನ

ಸಾಮಾಜಿಕ ವ್ಯವಸ್ಥೆ ರೂಪಿಸಿದ ವಿವಾಹ ಸಂಸ್ಥೆಯ ಮೂಲ ಆಶಯಗಳಲ್ಲಿ 'ತಾಯ್ತನ'ದ ನಿರೀಕ್ಷೆಯೂ ಒಂದು. ಆದ್ದರಿಂದ ತಾಯ್ತನ ಎನ್ನುವುದು ಸಾಮಾಜಿಕ ಅಗತ್ಯವೂ ಆಗಿದೆ. "ಉಳಿದೆಲ್ಲಾ ಸಂಬಂಧಗಳಿಗಿಂತ ತಾನು ಒಬ್ಬ 'ತಾಯಿ'ಯಾಗುವುದು ಹೆಣ್ಣನ್ನು ಅತ್ಯಂತ ಎತ್ತರದ ನೆಲೆಯಲ್ಲಿ ಸ್ಥಾಪಿಸುವ ಸೌಕರ್ಯ ಈ ವ್ಯವಸ್ಥೆ ನೀಡಿದೆ. ಆದ್ದರಿಂದ ಬೇರೆ ಯಾವುದೇ ಮಾನವೀಯ ಸಂಬಂಧದಿಂದಲೂ ಆಕೆ ಪಡೆದುಕೊಳ್ಳಲು ಸಾಧ್ಯವಾಗದಂಥ ವಿಶಿಷ್ಟವಾದ ಗುರಿ/ಅರ್ಥ ಹೆಣ್ಣಿಗೆ ಸಿಗುವುದಾದರೆ ಅವಳು ತಾಯಿಯಾದಾಗಲೇ ಎಂಬ ನಂಬಿಕೆ ಸರ್ವವ್ಯಾಪ್ತಿಯಾಗಿ ಬೇರೂರಿದೆ.'[೧೫] ಈ ನಂಬಿಕೆಯನ್ನು ಉಳಿಸಿಕೊಳ್ಳುವಲ್ಲಿ ಹೆಣ್ಣು ವಿಫಲಳಾಗಿ ಸಾಮಾಜಿಕ ಹಾಗೂ ಕೌಟುಂಬಿಕ ನಿರೀಕ್ಷೆಯಾದ 'ತಾಯ್ತನ' ಸಾಧ್ಯವಾಗದಿದ್ದಾಗ ಹೆಣ್ಣಿಗೆ 'ಬಂಜೆ' ಎನ್ನುವ ಪಟ್ಟ ಕಟ್ಟಲಾಗುತ್ತದೆ. ಬಂಜೆತನದ ಹೆಸರಿನಲ್ಲಿ ಹೆಣ್ಣು ಅನುಭವಿಸುವ ಮಾನಸಿಕ, ಭಾವನಾತ್ಮಕ ವ್ಯಥೆಗಳು, ತಾಯ್ತನದ ಈಡೇರಿಕೆಗಾಗಿ ಕಂಡುಕೊಳ್ಳುವ ಪರ್ಯಾಯ ಮಾರ್ಗಗಳು, ದಿಟ್ಟತನದ ನಿರ್ಧಾರಗಳು ಮಹಿಳಾ ದಶಕದ ಲೇಖಕಿಯರ ಕಥಾಸಾಹಿತ್ಯದಲ್ಲಿ ವಿಭಿನ್ನವಾಗಿ ಮೂಡಿಬಂದಿರುವುದೇ ಅಲ್ಲದೆ, ಹೊಸ ಬಗೆಯ ಚರ್ಚೆಯನ್ನು ಹುಟ್ಟುಹಾಕುತ್ತವೆ.

ಗೀತಾ ನಾಗಭೂಷಣ ಅವರ 'ಬಂಜೆಂಬ ಶಬುದ ಹೊರಲಾರೆ' ಕಥೆಯಲ್ಲಿ ಊರಗೌಡನ ಮಗಳು ಪಾರ್ವತಿಗೆ ಪ್ರಭುಲಿಂಗನೊಂದಿಗೆ ಮದುವೆಯಾಗಿ ನಾಲ್ಕು ವರ್ಷಗಳಾಗುತ್ತದೆ. ಇನ್ನೂ ಮಕ್ಕಳಾಗಲಿಲ್ಲವೆಂದು ಅತ್ತೆಯ ಕಾಟ, ಗಂಡನ ದೌರ್ಜನ್ಯ, ಜನರ ಮೂದಲಿಕೆಯಿಂದ ನಲುಗಿ ಹೋಗುತ್ತಾಳೆ. "ಹೆಣ್ಣಾದ ಬಳಿಕ ಒಂದು ಕೂಸಿಗಿ ಹಡೀಲಿಲ್ಲಂದ್ರ ಆಕಿನ ಬಣ್ಣ ಚೆಲುವಿಕಿ ತಗೊಂಡೇನು ಮಣ್ಣ ಹಾಯ್ಕೊಬೇಕೇನು ಬಾಯಾಗ"[೧೬] ಎಂಬ ಅತ್ತೆಯ ಮಾತುಗಳು ಹಾಗೂ ಗಂಡನ ಮರುಮದುವೆಯ ಸಿದ್ಧತೆಗಳು ಆಳುಮಗ ಚೆನ್ನಣ್ಣನನ್ನು ಕೂಡಿ ತಾಯಿಯಾಗಲು ಪ್ರಚೋದನೆ ನೀಡುತ್ತವೆ. ಮಗು ಹುಟ್ಟಿದರೂ ಈ ಕಟುಸತ್ಯವನ್ನು ಅರಗಿಸಿಕೊಳ್ಳಲಾರದೆ ಪಾರ್ವತಿ ದಿನೇ ದಿನೇ ಖಿನ್ನಳಾಗಿ ಸಾಯುವ ಹಂತಕ್ಕೆ ತಲುಪುತ್ತಾಳೆ. ಕೊನೆಯ ಕ್ಷಣದಲ್ಲಿ ಗಂಡನ ಮುಂದೆ ಸತ್ಯ ಹೇಳಲು ಹೊರಟಾಗ "ನನಗೆಲ್ಲಾ ಗೊತ್ತದಾ ಪಾರೂ... ನನ್ ಬಳಿ ಮಕ್ಕಳು ಹುಟ್ಸೋ ತಾಕತ್ತೇ ಇಲ್ಲಂತ ನಾಕೊರ್ಸಿನ ಹಿಂದೆ ನನ್ನ ತಪಾಸನೆ ಮಾಡಿದ್ದ ದೊಡ್ಡ ಡಾಕ್ಟರ್ ಸಾಬ ಹೇಳ್ಯಾರ"[೧೭] ಎಂದು ಮಕ್ಕಳಾಗದಿರಲು ತನ್ನ ದೌರ್ಬಲ್ಯವೇ ಕಾರಣವೆಂದು ಆಕೆಯ ಗಂಡ ಒಪ್ಪಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ಮಗುವನ್ನು ತನ್ನದೆಂದು ಸಾಕುವುದಾಗಿಯೂ ಭರವಸೆ ನೀಡುತ್ತಾನೆ. ಆದರೆ ಪಾರ್ವತಿ ಮಾತ್ರ ಇದನ್ನೆಲ್ಲ ಕೇಳುವಾಗ ತನ್ನ ಕಣ್ಣುಗಳಲ್ಲಿ ಬೆದರಿಕೆಯನ್ನು ತುಂಬಿಕೊಂಡೇ ಉಸಿರು ನಿಲ್ಲಿಸುತ್ತಾಳೆ.

ವೀಣಾ ಅವರ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯಲ್ಲಿ ಪೂರ್ಣಿಮಾ ನಿರಂತರ ತಾಯ್ತನದಿಂದ ಅನಾರೋಗ್ಯಕ್ಕೆ ತುತ್ತಾಗುತ್ತಾಳೆ. ವೈದ್ಯರು ಗಂಡನಾದ ಭಾಸ್ಕರ್‌ಸಿಂಗ್‌ಗೆ ಕುಟುಂಬ ಯೋಜನೆ ಅಳವಡಿಸಿಕೊಳ್ಳುವಂತೆ ಸಲಹೆ ನೀಡುತ್ತಾರೆ. ಆದರೆ "ಅದೆಲ್ಲಾ ನನ್ನ ಟೆಂಪರ್‌ಮೆಂಟ್‌ಗೆ ಸೂಟ ಆಗೋದಿಲ್ಲ. ಆಪರೇಷನ್ನು ಸುಡುಗಾಡು ಏನು ಮಣ್ಣಿದ್ರೂ ಆಕಿಗೇ ಮಾಡ್ರಿ, ನನಗೆ ಅದಕ್ಕೆಲ್ಲಾ ಟೈಮಿಲ್ಲಾ"[೧೮] ಎಂದು ನಿರ್ದಾಕ್ಷಿಣ್ಯವಾಗಿ ಉತ್ತರಿಸುತ್ತಾನೆ. ಮೇಲಿನ ಎರಡೂ ಕಥೆಗಳ ವೈರುಧ್ಯ ಗಂಭೀರವಾದುದು. ಒಂದು ಕಡೆ ತನ್ನ ದೋಷ ತಿಳಿದಿದ್ದೂ ಮರುಮದುವೆಗೆ ತಯಾರಾಗಿ ಸಮಾಜದಲ್ಲಿ ಹೆಂಡತಿಗೆ ಬಂಜೆ ಪಟ್ಟ ಕಟ್ಟಿ ಸಾವಿಗೆ ಕಾರಣನಾಗುವ ಹಾಗೂ ಆಕೆಗೆ ಅಗತ್ಯವಿಲ್ಲದಿದ್ದರೂ ನಿರಂತರ ಹೆರುವ ಕೆಲಸವನ್ನು ವಹಿಸಿ ಸಾವಿನಂಚಿಗೆ ತರುವ ಹೀಗೆ ಎರಡು ಬಗೆಯ ಗಂಡಿನ ಮನಸ್ಥಿತಿಗಳು ಕಾಣಿಸಿಕೊಳ್ಳುತ್ತವೆ. ಆದರೆ ಈ ವೈರುಧ್ಯಗಳ ನಡುವೆ ದುರಂತ ಕಾಣುವುದು ಹೆಣ್ಣಿನ ಬದುಕು ಮಾತ್ರ.

ಗೀತಾ ಅವರ 'ಕೆಂಪಾದವೋ ಎಲ್ಲ ಕೆಂಪಾದವೋ' ಕಥೆಯಲ್ಲಿ ಹಾಲಪ್ಪಗೌಡನಿಗೆ ಹೆಂಡತಿ ಚಂದವ್ವಳಲ್ಲಿ ತನ್ನಿಂದ ಮಕ್ಕಳಾಗದು ಎಂಬ ಸತ್ಯ ತಿಳಿದಿದೆ. 'ಬಂಜೆತನ'ದಿಂದ ನೊಂದ ಚಂದವ್ವ ತನ್ನ ಮಾವನ ಅಕ್ರಮ ಸಂತಾನವಾದ ಆಳು ಸರದಾರನಿಂದ ಮಗುವನ್ನು ಪಡೆಯುವ ಇಂಗಿತ ವ್ಯಕ್ತಪಡಿಸುತ್ತಾಳೆ. ಇದಕ್ಕೆ ಒಪ್ಪಿದ ಹಾಲಪ್ಪಗೌಡ "ಹೊಯಿಂದು ಚಂದೂ.. ಹಿಂದಕ್ಕೆಲ್ಲಾ ಹಿಂತಾದ್ದು ಭಾಳ ನಡ್ದು ಹೋಗ್ಯಾದ ಅದರ ಒಂದು ಮಾತಾದಾ ನೀ ಮಾತರ ಸರದಾರಗ ಇದೆಲ್ಲ ಹೇಳಬಾರದ್ದು; ನೀ ಅಂವಗ ಪಿರೀತಿ ಮಾಡೋ ಹಂಗ ಮಾಡೀ ಬಸುರಾಗ್ಬೇಕು ಖರೇ, ಆದರ ನೀ ಬಸರಾಗಿದ್ದು ಖಾತ್ರಿ ಆಯ್ತು ಅಂದ್ರ ಮುಗೀತು ಮತ್ತ ನೀ ಸರದಾರನಲಿಂದ ಪೂರಾ ದೂರಿರ್ಬೇಕು"[೧೯] ಎಂದು ಆಜ್ಞೆ ಮಾಡುತ್ತಾನೆ. ಆದರೆ ಸರದಾರನಿಂದ ಎರಡು ಮಕ್ಕಳು ಪಡೆಯುವ ವೇಳೆಗೆ ಚಂದವ್ವ ಸರದಾರನಲ್ಲಿ ಅನುರಕ್ತಳಾದ ವಿಚಾರ ತಿಳಿದ ಗೌಡ ಆತನನ್ನು ಕೊಲ್ಲಿಸುತ್ತಾನೆ. ಮತ್ತೊಂದು ಕಥೆಯಾದ 'ಗೌಡನ ಗೋರಿ'ಯಲ್ಲಿಯೂ ಸಂಗಪ್ಪಗೌಡನ ಹೆಂಡತಿ ನೀಲಗಂಗಾಳು 'ಬಂಜೆತನ'ದ ಅಪವಾದದಲ್ಲಿ ನರಳಿದವಳು. ಊರಿಗೆ ಬಂದ ಪುರಾಣಿಕನೊಂದಿಗೆ ಕೂಡಿ ಗಂಡು ಮಗುವೊಂದನ್ನು ಹೆರುತ್ತಾಳೆ. ಆದರೆ ಈ ವಿಷಯ ತಿಳಿದಿದ್ದ ಗೌಡ ಸಾಯುವ ಸಂದರ್ಭದಲ್ಲಿ "ನೀನನಗ ದೋಕಾ ಮಾಡ್ದಿ... ನಿನ್ನ ಮಗ ನನ್ನ ಬೀಜ ಅಲ್ಲ ಆದರನೂ ವಂಶ ಬೆಳೀಲಿಕೆ ಒಬ್ಬ ಮಗ ಬೇಕಾಗಿತ್ತು... ನಾನೇ ಪುರಾಣಿಕನನ್ನು ಕೊಂದೆ"[೨೦] ಎಂದು ಹೇಳಿ ಪ್ರಾಣ ಬಿಡುತ್ತಾನೆ.

ಹೀಗೆ ಬಂಜೆತನಕ್ಕೆ ಪಿತೃಪ್ರಧಾನ ವ್ಯವಸ್ಥೆ ಹೆಣ್ಣನ್ನೇ ಹೊಣೆಯಾಗಿಸುತ್ತಾ ಬಂದಿದೆ. ಸಂತಾನಹೀನತೆಗೆ ಗಂಡಿನ ದೋಷವೇ ಕಾರಣವಾದರೂ ಅದನ್ನು ಮರೆಮಾಚಿ ಪುರುಷತ್ವವನ್ನು

ಸಾಬೀತು ಮಾಡಲು ಅನೇಕ ಒಳದಾರಿಗಳನ್ನು ಹೇಗೆ ಕಂಡುಕೊಳ್ಳುತ್ತದೆಂಬುದನ್ನು ಪ್ರಸ್ತುತ ಕಥೆಗಳು ನಿರೂಪಿಸುತ್ತವೆ. ಅದೇ ರೀತಿ ಮೇಲ್ವರ್ಗದ ಹೆಣ್ಣುಮಕ್ಕಳು ತಾಯ್ತನಕ್ಕಾಗಿ ಕೆಳವರ್ಗದ ಪುರುಷರೊಂದಿಗೆ ಹೊಂದುವ ಸಂಬಂಧಗಳು ತಂದೊಡ್ಡುವ ದುರಂತಗಳನ್ನೂ ಸಹ ಸಾಕ್ಷೀಕರಿಸುತ್ತವೆ.

ಬಂಜೆತನದ ಕಾರಣಕ್ಕೆ ಎದುರಿಸುವ ಅವಮಾನ, ಶೋಷಣೆಗಳು, ಗಂಡಂದಿರ ಮರು ಮದುವೆಯ ಸಂದರ್ಭಗಳು ಸಹ ಹೆಣ್ಣನ್ನು ಭಾವನಾತ್ಮಕವಾಗಿ ಅಸ್ವಸ್ಥಳನ್ನಾಗಿಸುತ್ತವೆ. ಲಲಿತಾ ನಾಯಕ್ ಅವರ 'ನೆಲೆ-ಬೆಲೆ' ಕಾದಂಬರಿಯಲ್ಲಿ ಜಯಾಗೆ ಮಕ್ಕಳಾಗದಿದ್ದಾಗ ಆಕೆಯ ಗಂಡ ಶಿವಮಲ್ಲುವಿಗೆ ಮತ್ತೊಂದು ಮದುವೆ ಮಾಡಲಾಗುತ್ತದೆ. ಮಕ್ಕಳಾಗದ ಕಾರಣಕ್ಕೆ ಅತ್ತೆಯಿಂದ ಜಯಾಳ ಮೇಲೆ ದೈಹಿಕ ಹಲ್ಲೆಯೂ ಆಗುತ್ತದೆ. ಕಾಂತಯ್ಯನ ಮನೆಗೆ ಹೋದಾಗ "ಮಕ್ಕಳ ಮಮತೆ ಏನೂಂತ ಗೊತ್ತಿರಲಾರದ ಹೆಂಗಸರ ಹಣೆಬರಹವೆಲ್ಲಾ ಇಷ್ಟೇ ನೋಡಿ. ಮಕ್ಳು ಅಂದ್ರೇನು ಮರಗಿಡದಲ್ಲಿ ಬೆಳೆಯುತ್ತಾ? ಬಿಡಿಸಿಕೊಂಡು ಬರೋಣ ಅನ್ನೋಕೆ..."[೨೧] ಎನ್ನುವ ಶಾಂತಮ್ಮಳ ಚುಚ್ಚು ಮಾತುಗಳು ಜಯಾಳನ್ನು ಮತ್ತಷ್ಟು ಖಿನ್ನಳಾಗಿಸುತ್ತವೆ. ಲಲಿತಾನಾಯಕ್ ಅವರ ಮತ್ತೊಂದು ಕಥೆಯಾದ 'ಮರು ಮದುವೆ'ಯಲ್ಲಿಯೂ ಗೌರಿಯ ಮನಸ್ಸಿನ ತುಂಬ ಭಾವೀ ಸವತಿಯ ಚಿಂತೆ ಆಂತರ್ಯವನ್ನು ಕೊರೆಯುತ್ತಿರುತ್ತದೆ. ಮದುವೆಯಾದ ಮೂರು ವರ್ಷದ ನಂತರ ಹೆಣ್ಣು ಮಗುವಿನ ತಾಯಿಯಾದ ಗೌರಿಗೆ ಗಂಡು ಸಂತಾನವಾಗಲಿಲ್ಲವೆಂದು ಕಿರುಕುಳ ಆರಂಭವಾಗುತ್ತದೆ. ಇದನ್ನೇ ನೆಪವಾಗಿಟ್ಟುಕೊಂಡು ಗಂಡ ರಾಮಣ್ಣ ಮರುಮದುವೆ ಯಾಗುತ್ತಿರುವುದು ಆತಂಕ ಸೃಷ್ಟಿಸುತ್ತದೆ. ಈ ವೇಳೆಗೆ ಗೌರಿಯ ಅತ್ತೆ ಸಹ "ಗಂಡ ಶುಭಕಾರ್ಯಕ್ಕೆ ಕೈ ಹಚ್ಚಿದಾಗ ಹೆಂಡ್ತಿಯಾದವಳು ಹಿಂಗ್ ಕಣ್ಣೀರು ಹಾಕೋದಾ?! ಸಿವ ನಿನಗೊಬ್ಬ ಮಗನ್ನ ಕೊಟ್ಟಿದ್ರೆ ಅವನ್ಯಾಕೆ ಮತ್ತೊಂದು ಹೆಣ್ಣಿಗೆ ತಾಳಿ ಕಟ್ತಿದ್ದ? ದೊಡ್ಡ ಮನಸ್ಸು ಮಾಡು..."[೨೨] ಎಂದು ಆಕೆಯನ್ನು ಓಲೈಸುವ ಮೂಲಕ ರಾಮಣ್ಣನ ಮರುಮದುವೆಗೆ ಗೌರಿ ಒಪ್ಪುವಂತಾಗುತ್ತದೆ.

ಸಾರಾ ಅಬೂಬಕ್ಕರ್ ಅವರ 'ಜನನ' ಕಥೆಯಲ್ಲಿ ಕದೀಜಾಗೆ ಮದುವೆಯಾಗಿ ಎರಡು ವರ್ಷಗಳಾದರೂ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕೆ ಆಕೆಯ ಗಂಡ "ಏನು ನಿನ್ನ ಹೊಟ್ಟೆಯಲ್ಲಿ ಎಂದಾದರೂ ಮಗು ಹುಟ್ಟುವ ಸಾಧ್ಯತೆ ಇದೆಯೇ?" ಎಂದು ವ್ಯಂಗ್ಯವಾಡುತ್ತಾನೆ. ಆದರೆ ಕದೀಜಾ "ಅದು ನನ್ನ ತಪ್ಪೆ?" ಎಂದು ನಿರ್ಭಿಡೆಯಿಂದ ಉತ್ತರಿಸುತ್ತಾಳೆ. ಆದರೆ ಇದೇ ನೆಪದಲ್ಲಿ ಗಂಡ ಮರುಮದುವೆಯಾಗುವುದನ್ನು ತಡೆಯುವಲ್ಲಿ ವಿಫಲವಾಗುತ್ತಾಳೆ. ತನ್ನ ಮೇಲಿನ ಅನ್ಯಾಯ, ಅಪಮಾನವನ್ನು ಪ್ರಶ್ನಿಸುವಷ್ಟು ಮುಂದುವರೆಯುವ ಕದೀಜಾಳನ್ನು ವ್ಯವಸ್ಥೆ ಹೇಗೆ ತನ್ನ ಹಿಡಿತಕ್ಕೆ ಒಳಪಡಿಸಿಕೊಳ್ಳುತ್ತದೆಯೆಂಬುದನ್ನು ಲೇಖಕಿ ಇಲ್ಲಿನ ಪಾತ್ರದಲ್ಲಿ ಪ್ರತಿನಿಧೀಕರಿಸುತ್ತಾರೆ.

ಈ ಮೇಲಿನ ಕಥೆಗಳಲ್ಲಿ ಮತ್ತೊಂದು ಪ್ರಮುಖ ಅಂಶವನ್ನು ಗ್ರಹಿಸಲಾಗಿದೆ. ಬಂಜೆತನದ ನೆಪವೊಡ್ಡಿ ಮರುಮದುವೆಯಾಗುವ ಜಯಾಳ ಗಂಡ ಶಿವಮಲ್ಲು, ಗೌರಿಯ ಗಂಡ ರಾಮಣ್ಣ ಹಾಗೂ ಕದೀಜಾಳ ಗಂಡನಿಗಾಗಲೀ ದಾಂಪತ್ಯ ನಿಷ್ಠೆಯ ಪ್ರಶ್ನೆ ಕಾಡುವುದೇ ಇಲ್ಲ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಗೀತಾ ಅವರ 'ಬಂಜೆಂಬ ಶಬುದ ಹೊರಲಾರೆ', 'ಕೆಂಪಾದವೋ ಎಲ್ಲ ಕೆಂಪಾದವೊ' ಕಥೆಗಳಲ್ಲಿ ಕಥಾನಾಯಕಿಯರು ತಾಯ್ತನಕ್ಕಾಗಿ ದಾಂಪತ್ಯನಿಷ್ಠೆ ಮೀರುತ್ತಾರೆ. ಈ ಬಗ್ಗೆ ಗಂಡಂದಿರಿಗೆ ಆಕ್ಷೇಪಣೆ ಇಲ್ಲ. ಕಾರಣ ತಮ್ಮ ದೌರ್ಬಲ್ಯವನ್ನು ಮರೆಮಾಚಲಿಕ್ಕಾಗಿ ಹೆಂಡತಿಯರ ಈ ನಡೆಯ ಬಗ್ಗೆ ಸಮರ್ಥನೆ ತೋರುತ್ತಾರೆ. ಈ ಎಲ್ಲ ರೀತಿಯ ಸಂದರ್ಭಗಳ್ಲೂ ದಾಂಪತ್ಯ ನಿಷ್ಠೆ, ಹೆಣ್ಣಿನ ತಾಯ್ತನಗಳ ಮೇಲಿನ ಅಧಿಕಾರ, ನಿಯಂತ್ರವಿರುವುದು ಗಂಡಿಗೆ ಮಾತ್ರ ಎಂಬುದನ್ನು ಇಲ್ಲಿ ಅರ್ಥೈಸಲಾಗಿದೆ.

ಹೀಗೆ ಹೆಣ್ಣು ಗಂಡಿಗೆ ಅಧೀನಳಾಗುವ ಸಂದರ್ಭಗಳಲ್ಲಿ ತಾಯ್ತನವನ್ನು ವೈಭವೀಕರಿಸುತ್ತಾ ಸಮಾಜ ಹೆಣ್ಣಿನಲ್ಲಿ ನಿರೀಕ್ಷಿಸುವ ಅತ್ಯಗತ್ಯ ಮೌಲ್ಯವೆಂದು ಹೇಳುತ್ತಾ ಬರಲಾಗಿದೆ. ಆದ್ದರಿಂದ ಪರ್ಯಾಯ ಮಾದರಿಗಳ ಹೊರತಾಗಿ ಇಂತಹ ಪ್ರಕ್ರಿಯೆಯನ್ನು ಪೋಷಿಸುವ, ಪ್ರಧಾನ ಸಂಸ್ಕೃತಿಗೆ ನಿಷ್ಠವಾಗಿರುವ ಸಿದ್ಧ ಮಾದರಿ ಪಾತ್ರಗಳಾಗಿ ಸಹ ಇಲ್ಲಿನ ಕೆಲವು ಕಥಾನಾಯಕಿಯರು, ಅತ್ತೆ, ಗೌಡತಿಯಂತಹ ಸ್ತ್ರೀಪೋಷಕ ಪಾತ್ರಗಳು ಕಾಣಿಸುತ್ತವೆ.

### ೪.೨.೩. ಲಿಂಗತಾರತಮ್ಯ

ಲಿಂಗಾಧಾರಿತ ತಾರತಮ್ಯ ಅತ್ಯಂತ ಸಂಕೀರ್ಣವಾದುದು. ಸ್ತ್ರೀ ಮತ್ತು ಪುರುಷ ಎಂಬುದು ಸಾಮಾಜಿಕ ತಾರತಮ್ಯ ವ್ಯವಸ್ಥೆಯಲ್ಲಿ ಮೊಟ್ಟಮೊದಲು ಅಸ್ತಿತ್ವಕ್ಕೆ ಬಂದ ಶ್ರೇಣೀಕರಣವಾಗಿದೆ. ಕೌಟುಂಬಿಕ ನೆಲೆಯಲ್ಲಿ ಹೆಣ್ಣಿನ ವಿವಾಹ, ತಾಯ್ತನ, ಲೈಂಗಿಕತೆಗಳಂತಹ ಖಾಸಗಿ ವಿಚಾರಗಳಿಂದ ಆರಂಭಿಸಿ ಉದ್ಯೋಗ, ಶಿಕ್ಷಣ, ಧರ್ಮ, ಆರ್ಥಿಕ ಇತ್ಯಾದಿ ಎಲ್ಲ ಕ್ಷೇತ್ರಗಳಿಗೂ ವ್ಯಾಪಿಸಿದೆ. ಜೈವಿಕವಾಗಿ ಅಸ್ತಿತ್ವಕ್ಕೆ ಬಂದಿರುವ ಸ್ತ್ರೀ–ಪುರುಷ ಲಿಂಗಭೇದ ವೈಶಿಷ್ಟ್ಯಗಳು ಸಾಮಾಜಿಕ ಲಿಂಗತಾರತಮ್ಯ ನೀತಿಗೆ ಕಾರಣವಾಗುತ್ತವೆ. ವಿವಾಹ ಸಂಸ್ಥೆ ಲಿಂಗತಾರತಮ್ಯ ಪೋಷಣೆಯ ಮೂಲವಾಗಿದೆ. ಕಾರಣ ಲಿಂಗತಾರತಮ್ಯದ ಚಿಂತನೆಗಳಿಗೆ ಸ್ಪಷ್ಟ ಆಕಾರ ಸ್ವರೂಪ ಪ್ರಾಪ್ತವಾಗುವುದು ವಿವಾಹ ಸಂಸ್ಥೆಯ ಮೂಲಕವೇ ಆಗಿದೆ. ಮಗಳು, ಹೆಂಡತಿ, ತಾಯಿಯಾಗಿ ಗಂಡಿನ ಅಸರೆಯಲ್ಲಿ ಬದುಕುವ ಹೆಣ್ಣಿನ ಮಾದರಿಗಳ ಮೂಲಕ ಲಿಂಗತಾರತಮ್ಯವನ್ನು ಕಾಣುತ್ತಾ ಬರಲಾಗಿದೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ದಶಕದ ಲೇಖಕಿಯರು ಲಿಂಗತಾರತಮ್ಯವನ್ನು ಪಾತ್ರಗಳಲ್ಲಿ ಪ್ರತಿನಿಧೀಕರಿಸಿದ ಬಗೆಯನ್ನು ಪ್ರಾತಿನಿಧಿಕ ಕಥೆ–ಕಾದಂಬರಿಗಳ ಮೂಲಕ ವಿಶ್ಲೇಷಿಸಲಾಗಿದೆ.

ಲಿಂಗಾಧಾರಿತ ನೆಲೆಯಲ್ಲಿ ಹೆಣ್ಣಿನ ಮೇಲೆ ನಡೆಯುವ ಶೋಷಣೆ ಭ್ರೂಣದಿಂದಲೇ ಆರಂಭವಾಗುತ್ತದೆ ಎಂಬುದನ್ನು ಸಾರಾ ಅವರ 'ವಿಜ್ಞಾನ ಭವಿಷ್ಯ ನುಡಿದಾಗ' ಕಥೆ ತಿಳಿಸಿಕೊಡುತ್ತದೆ. ಕಥಾನಾಯಕಿ 'ಮಾಲಿನಿ'ಗೆ ಈಗಾಗಲೇ ಎರಡು ಹೆಣ್ಣುಮಕ್ಕಳಿದ್ದು, ಮೂರನೆಯದು ಗಂಡು ಮಗುವೇ ಆಗಬೇಕೆಂಬ ನಿರೀಕ್ಷೆ ಆಕೆಯ ಗಂಡನಿಗಿದೆ. ಈ ನಿರೀಕ್ಷೆ ಮಾಲಿನಿಯ ಆತಂಕಕ್ಕೆ ಕಾರಣವಾಗುತ್ತದೆ. ಆಗ ಮಧುಕರ ಪ್ರಸವಪೂರ್ವದಲ್ಲಿಯೇ ಭ್ರೂಣಲಿಂಗವನ್ನು ಪತ್ತೆ ಮಾಡಿಸಿ ಹೆಣ್ಣೆಂದು ತಿಳಿದು ಒತ್ತಾಯದಿಂದ ಗರ್ಭಪಾತ ಮಾಡಿಸುತ್ತಾನೆ. ಆದರೆ ಭ್ರೂಣಹತ್ಯೆಯಾದ ಮಗು ಗಂಡಾಗಿತ್ತು ಎಂಬ ಸತ್ಯ ತಿಳಿದಾಗ ಆಘಾತಗೊಂಡ ಮಾಲಿನಿ ಖಿನ್ನತೆಗೆ ಒಳಗಾಗುತ್ತಾಳೆ. ಕೊನೆಗೆ ಇಷ್ಟಾದರೂ ಗಂಡು ಮಗುವಿನ ನಿರೀಕ್ಷೆಯಿಂದ ದೂರ ಸರಿಯದ ಗಂಡನ ಬಗ್ಗೆ ಜಿಗುಪ್ಸೆ ಮೂಡುತ್ತದೆ. ಲಿಂಗತಾರತಮ್ಯದ ನೆಲೆಯಲ್ಲಿ ಇಂತಹದೊಂದು ಗಂಭೀರ ಸಮಸ್ಯೆಯನ್ನು ಅಂದಿನ ಕಾಲಮಾನದಲ್ಲಿಯೇ ಕಥೆಯ ವಸ್ತುವಾಗಿಸಿದ ಸಾರಾ ಅವರ ಚಿಂತನೆ ಪ್ರಗತಿಪರವಾದುದು. ಮಹತ್ವದ ಸಂಗತಿಯೆಂದರೆ ಪ್ರಸವಪೂರ್ವ ಭ್ರೂಣಲಿಂಗ ಪತ್ತೆ ನಿಷೇಧ ೧೯೯೪ರ ಕಾಯ್ದೆ ಜನವರಿ ೧, ೧೯೯೬ರಲ್ಲಿ ಜಾರಿಗೆ ತರಲಾಗಿದೆ. ಕಾನೂನಿನ ತಡೆಯಿದ್ದರೂ ಹಿಂದಿನ ಕಾಲಮಾನದಿಂದ ಇತ್ತೀಚಿನ ದಿನಮಾನಗಳಲ್ಲೂ ಹೆಣ್ಣು ಭ್ರೂಣಹತ್ಯೆ ಸಮಸ್ಯೆಯಾಗಿಯೇ ಮುಂದುವರೆದಿದೆ. ಈ ಮೂಲಕ ಲಿಂಗತಾರತಮ್ಯ ಇನ್ನೂ ಸಹ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಾಧ್ಯವಾಗಿದೆ.

ಸಾರಾ ಅವರ 'ಸಹನಾ' ಕಾದಂಬರಿಯಲ್ಲಿ ಸಕೀನಳ ಮಕ್ಕಳಾದ 'ರೋಶಿ ಮತ್ತು ಇಕ್ಬಾಲ್'ನ ನಡುವೆ ಆರೈಕೆ, ಪೋಷಣೆ, ಪ್ರೀತಿ ಎಲ್ಲವುಗಳಲ್ಲೂ ಆಕೆಯ ಅತ್ತೆ ಖತೀಜಮ್ಮ ತಾರತಮ್ಯ ಮಾಡುತ್ತಾಳೆ. ನಸೀಮಳಿಗೆ ಎರಡನೆಯ ಮಗುವು ಹೆಣ್ಣಾದಾಗ "ಯಾಕಮ್ಮ ನೀನು ಹೆಣ್ಣಾಗಿ ಹುಟ್ಟಿದೆ ಗಂಡಾಗಿದ್ದರೆ ಸರಿಯಾದ ಆಹಾರ, ಔಷಧಿಯಾದರೂ ದೊರೆತು ಬದುಕುತ್ತಿದ್ದೆ"[೨೩] ಎಂದು ನಸೀಮ ಹೇಳುವ ಮಾತುಗಳ ಮೂಲಕ ಈ ತಾರತಮ್ಯ ಗ್ರಹಿಕೆಗೆ ಬರುತ್ತದೆ. ಮುಂದೊಂದು ದಿನ ಇದೇ ಮಗು ಅರೈಕೆಯಿಲ್ಲದೆ ಖಾಯಿಲೆಗೆ ತುತ್ತಾಗಿ ಗಂಡ, ಅತ್ತೆಯರ ನಿಷ್ಕಾಳಜಿಯಿಂದ ಸಾವನ್ನಪ್ಪುತ್ತದೆ. ಈ ಘಟನೆ ನಸೀಮಳನ್ನು ಅಧೀರಳನ್ನಾಗಿಸುತ್ತದೆ. ನಸೀಮ ಗಂಡನಿಂದ ದೂರವಾಗಿ ತವರು ಸೇರಿದಾಗಲೂ ಇಕ್ಬಾಲ್‌ನನ್ನು ಗಂಡು ಮಗು ಎಂಬ ಕಾರಣಕ್ಕೆ ತನ್ನೊಂದಿಗೆ ಉಳಿಸಿಕೊಂಡ ಖದೀಜಮ್ಮ ರೋಶಿಯನ್ನು ಮಾತ್ರ ನಸೀಮಳೊಂದಿಗೆ ಕಳುಹಿಸುತ್ತಾಳೆ. ಮತ್ತೊಂದು ಕಡೆ ನಸೀಮ ಮತ್ತು ಅವಳ ನಾದಿನಿಯ ಮಗ ನೂರುದ್ದೀನ್ ಒಂದೇ ವಯಸ್ಸಿನವರಾದರೂ ನಸೀಮ ಬೀಡಿಕಟ್ಟುವ ಮೂಲಕ ದುಡಿಮೆಯ ಹೊಣೆ ಹೊತ್ತರೆ, ಗಂಡು ಎಂಬ ಕಾರಣಕ್ಕೆ ನೂರುದ್ದೀನ್ ಕೆಲಸವಿಲ್ಲದೆ ಓಡಾಡಿಕೊಂಡಿರುತ್ತಾನೆ. ಸಾರಾ ಅವರ 'ವಜ್ರಗಳು' ಕಾದಂಬರಿಯಲ್ಲಿಯೂ ಗಂಡನಿಂದ ವಿಚ್ಛೇದಿತಳಾಗಿ ನಫೀಜಾ ತನ್ನ ಮಗುವಿನೊಂದಿಗೆ

ತವರು ಸೇರುತ್ತಾಳೆ. ಬದ್ರುದ್ದೀನ್‌ಗೆ ಎರಡನೆಯ ಮದುವೆಯಾಗಿ ಆಕೆಯಲ್ಲಿ ಗಂಡು ಸಂತಾನ ವಾಗದಿದ್ದಾಗ ವಿದ್ಯಾಭ್ಯಾಸದ ನೆಪದಲ್ಲಿ ಆತನ ಮನೆಯವರು ನಫೀಜಾಳ ಬಳಿ ಇದ್ದ ಆಕೆಯ ಗಂಡು ಮಗುವನ್ನು ಕರೆದೊಯ್ಯುತ್ತಾರೆ. ಆಗ "ನೀನು ಹೆಣ್ಣಾಗಿಯಾದರೂ ಹುಟ್ಟಿದರೆ ನನಗೆ ದಕ್ಕುತ್ತಿದ್ದೆ, ನೀನು ಗಂಡಾಗಿ ನಾನು ಹಾಳಾದೆ"[೨೪] ಎಂದು ದುಃಖಿಸುತ್ತಾಳೆ.

ಲಲಿತಾನಾಯಕ್ ಅವರ 'ನೆಲೆ-ಬೆಲೆ' ಕಾದಂಬರಿಯಲ್ಲಿ ಜಯಾ ತನ್ನ ಗೆಳತಿ 'ಕನಕ'ಳ ಸಾವಿನ ನಂತರ ಆಕೆಯ ಹೆಣ್ಣುಮಗುವನ್ನು ಊರಿಗೆ ಕರೆತಂದು ಪೋಷಿಸುತ್ತಾಳೆ. ಗಂಡನ ಮನೆಯಲ್ಲಿ ಜಯಾಳ ಈ ನಡವಳಿಕೆ ಇಷ್ಟವಾಗದ ವಿಚಾರವಾಯಿತು. ಆಕೆಯ ಅತ್ತೆ ತಾಯವ್ವ ಮಗುವಿನ ವಿಷಯದಲ್ಲಿ ತಾತ್ಸಾರ ತೋರಿದಾಗ "ಯಾಕತ್ತೆ ಹೆಣ್ಣುಮಕ್ಕಳನ್ನ ಕಂಡ್ರೆ ಇಷ್ಟೊಂದು ಉರಿದು ಬೀಳ್ತೀರಲ್ಲ... ನಿನ್ನನ್ನು ಹೆತ್ತೋಳೂ ಒಬ್ಬ ಹೆಣ್ಣೇ ಅಲ್ವಾ?"[೨೫] ಎಂದು ಕೇಳುವುದರೊಂದಿಗೆ ಅತ್ತೆಯ ಲಿಂಗತಾರತಮ್ಯ ಭಾವನೆಯನ್ನು ಪ್ರಶ್ನಿಸುತ್ತಾಳೆ.

ವೈದೇಹಿಯವರ 'ಅಂತರಂಗದ ಪುಟಗಳು' ಕಥೆಯಲ್ಲಿ ಸರಿತಾ ವಿದ್ಯೆ ಕಲಿಯುವ ಆಸೆಯಿದ್ದರೂ ಪರಿಸ್ಥಿತಿಗೆ ಕಟ್ಟುಬಿದ್ದು ಶ್ರೀಮಂತನೊಬ್ಬನನ್ನು ಮದುವೆಯಾಗುತ್ತಾಳೆ. ಆದರೆ ಮೂರು ಹೆಣ್ಣಮಕ್ಕಳನ್ನು ಹೆತ್ತಳು, ಗಂಡು ಮಗುವಾಗಲಿಲ್ಲ ಎಂಬ ಕಾರಣಕ್ಕೆ ವಿದೇಶಕ್ಕೆ ಹೋದ ಗಂಡ ಮರಳುವುದೇ ಇಲ್ಲ. ಆದರೂ ಆತನ ನಿರೀಕ್ಷೆಯಲ್ಲಿಯೇ ಆಕೆಯ ಬದುಕು ಸಾಗುತ್ತದೆ.

ಗೀತಾ ನಾಗಭೂಷಣ ಅವರ 'ಬದುಕು' ಕಾದಂಬರಿಯ ಸಾಬವ್ವನ ಗಂಡ ಹನುಮಪ್ಪ ಗಂಡು ಸಂತಾನವಾಗಲಿಲ್ಲ ಎಂಬ ಕಾರಣಕ್ಕೆ ವಿಚ್ಛೇದನ ನೀಡಿ ಮರುಮದುವೆಯಾಗುತ್ತಾನೆ. ಇವರ ಮತ್ತೊಂದು ಕತೆಯಾದ 'ಕಳ್ಳುಬಳ್ಳಿಯ ಕುಡಿಗಳು' ಲಿಂಗತಾರತಮ್ಯದ ಕ್ರೂರತೆಯನ್ನು ಪರಿಚಯಿಸುತ್ತದೆ. ಕಥೆಯಲ್ಲಿ ಕಳ್ಳಭಟ್ಟಿ ತಯಾರಿಸಿ ತಿಂಗಳಿಗೊಮ್ಮೆ ಜೈಲು ಸೇರುವ ತುಳಸೀರಾಮನ ಆದಾಯವೆಲ್ಲ ಆತನ ಕುಡಿತಕ್ಕೆ ಸರಿಹೋಗುತ್ತದೆ. ಹುಟ್ಟಿದ ನಾಲ್ಕು ಹೆಣ್ಣುಮಕ್ಕಳನ್ನೂ ಸಾಕುವ ಜವಾಬ್ದಾರಿ ಹೆಂಡತಿ ರೂಪ್ಲಿಯದು. ಇದರೊಂದಿಗೆ ರೂಪ್ಲಿ ತುಳಸೀರಾಮನಿಂದ ಗಂಡು ಸಂತಾನವಾಗಲಿಲ್ಲ ಎಂಬ ಕಿರುಕುಳಕ್ಕೂ ಒಳಗಾಗುತ್ತಾಳೆ. ಐದನೆಯ ಮಗುವೂ ಹೆಣ್ಣಾದಾಗ ತುಳಸೀರಾಮ ಕುಡಿತದ ಕಾಸಿಗಾಗಿ ಮಗುವನ್ನೇ ಮಾರುತ್ತಾನೆ. ತಾಯ್ತನದ ವೇದನೆಯಿಂದ ರೂಪ್ಲಿ ಕೆರಳುತ್ತಾಳೆ. "ಹೊಟ್ಟೀಲಿ ಹುಟ್ಟಿದ ಕಳ್ಳುಬಳ್ಳಿ ಕುಡಿಗೋಳಿಗೆ ರೊಕ್ಕಾರುಪೈಗಿ ಮಾರ್ಕೋ ಮಾದಂದ್ರೇನು? ನನ್ ಮಕ್ಕಳಿಗಿ ನಾ ಗಂಜಿ ಅಂಬಲಿಯರೆ ಕುಡ್ಸಿ ಬೆಳೆಸ್ತೀನಿ ಖರೇ ಆದರ ಮಾರ್ಕೋಮಂಗಿಲ್ಲ"[೨೬] ಎಂದು ಮುಂದಿನ ತಾಯ್ತನವನ್ನು ಧಿಕ್ಕರಿಸುತ್ತಾಳೆ.

ಹೀಗೆ ಹೆಣ್ಣು ಎಂಬ ಕಾರಣಕ್ಕೆ ಆಕೆಯ ನಡೆ-ನುಡಿ, ಮಾತು, ದೇಹ, ಮನಸ್ಸು, ಪ್ರತಿಯೊಂದರ ಮೇಲೂ ಪ್ರಧಾನ ಸಂಸ್ಕೃತಿ ತನ್ನ ನಿಯಂತ್ರಣವನ್ನು ಸಾಧಿಸುತ್ತಾ ಬಂದಿದೆ. "ಗಂಡು ಮಗುವಿಗೆ ತಾಯಿಯಾದವಳು ಪಡೆವ ಖಚಿತವಾದ ಅಂಕಿತ, ಅಸ್ಮಿತೆ, ಬದುಕಿನ ಗೊತ್ತು ಗುರಿಗಳಿಂದಾಗಿ ಬೇರಾವ ಮಾನವ ಸಂಬಂಧಕ್ಕಿಂತ ಹೆಚ್ಚು ಬಲಿಷ್ಠ ಸಂಬಂಧವೆಂದರೆ ತಾಯಿ ಮಗನ ಸಂಬಂಧವೇ ಆಗಿಬಿಟ್ಟಿದೆ"[೨೭]. ಈ ಕಾರಣಕ್ಕೆ ಹೆಣ್ಣು ಎಲ್ಲಿಯವರೆಗೆ ತನ್ನ ಕುಟುಂಬಕ್ಕೆ ವಾರಸುದಾರನೆನ್ನಿಸುವ ಒಬ್ಬ ಮಗನನ್ನು ಕೊಡಲು ವಿಫಲಳಾಗುತ್ತಾಳೋ ಅಲ್ಲಿಯವರೆಗೆ ಆಕೆಗೆ ಆಭದ್ರತೆ, ಅವಮಾನ ತಪ್ಪಿದ್ದಲ್ಲ. ಹಾಗಾಗಿ ಎಚ್.ಎಸ್.ಶ್ರೀಮತಿ ಅವರು ಮಹಿಳಾ ಶಕ್ತಿ ಕೇಂದ್ರವಾದ "ಗರ್ಭಾಶಯದ ಪ್ರಕರತೆಯನ್ನು ಪುರುಷನು ಸಹಜವಾಗಿ ಒಪ್ಪಿ ನಡೆದುಕೊಂಡರೆ ಸಮಸ್ಯೆಯೇ ಇಲ್ಲ. ಪ್ರತಿಯೊಂದು ಜೀವವೂ ಗರ್ಭಾಶಯದ ಶಕ್ತಿಯ ಕಾರಣವಾಗಿಯೇ ಸಾಕಾರಗೊಂಡದ್ದು ಎಂಬ ಸತ್ಯವನ್ನಂತೂ ನಿರಾಕರಿಸಲಾಗದು. ಈ ಸತ್ಯವನ್ನು ಮನ್ನಿಸಿ ಗೌರವಿಸುವುದು ಸಹಜಧರ್ಮದ ಭಾಗವಾಗಬೇಕು. ಸ್ತ್ರೀಶಕ್ತಿ ಕೇಂದ್ರವು ಮಾನವ ಜನಾಂಗದ ರಕ್ಷಣೆ ಸಂಗೋಪನೆಯನ್ನು ವಹಿಸಿಕೊಂಡಿರುವ ಪ್ರೀತಿಯ ಕೇಂದ್ರ, ಹಕ್ಕು, ಒಡೆತನ ನಿಯಂತ್ರಣಗಳ ದಬ್ಬಾಳಿಕೆಯ ಆಶಯಗಳಿಗೆ ಈ ಕೇಂದ್ರದಲ್ಲಿ ಸ್ಥಾನವೇ ಇಲ್ಲ. ತನ್ನ ಶಕ್ತಿಯನ್ನು ಒಂದು ಜೀವಕ್ಕೆ ಧಾರೆಯೆರೆದ ಮೇಲೂ ಮೂಲ ಶಕ್ತಿಯಲ್ಲಿ ವ್ಯತ್ಯಯವಾಗದ ಧಾರಣ ಶಕ್ತಿ ಅದಕ್ಕಿದೆ. ಆದರೆ ಸಮಾಜ ವ್ಯವಸ್ಥೆಯನ್ನು ಕಟ್ಟಿಕೊಂಡ ಪುರುಷನಿಗೆ ಮಾತ್ರ ಈ ಶಕ್ತಿಕೇಂದ್ರವನ್ನು ವಶಪಡಿಸಿಕೊಂಡು ಆಳಬೇಕು ಎನ್ನುವ ದುರ್ದಮ್ಯ ಹಂಬಲ ವ್ಯಾಪಿಸಿಬಿಟ್ಟಿದೆ"[೨೮] ಎಂದು ಉಲ್ಲೇಖಿಸುತ್ತಾರೆ. ಈ ಅರ್ಥದಲ್ಲಿ 'ಹೆರುವಿಕೆ' 'ತಾಯ್ತನ'ಗಳು ಹೆಣ್ಣಿನ ದೌರ್ಬಲ್ಯಗಳಲ್ಲ, ಬದಲಾಗಿ ಆಕೆಗೆ ವಿಶಿಷ್ಟ ಅಸ್ಮಿತೆಯನ್ನು ತಂದುಕೊಡುವ ಪ್ರಕ್ರಿಯೆಗಳು. ದುರಂತವೆಂದರೆ ಗರ್ಭಧರಿಸುವ, ಹೆರುವ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಗಂಡುಮಗುವನ್ನು ಹೆರುವ ಹೆಣ್ಣಿನ ಬದುಕು ನಿರಾಳವಾದರೆ, ಒಂದು ವೇಳೆ ಹುಟ್ಟುವ ಮಗು ಹೆಣ್ಣಾದರೆ ಆಕೆಯ ಜೀವಂತಿಕೆಯೇ ಕುಸಿಯುತ್ತದೆ. ಅಲ್ಲದೆ ಆಕೆಯನ್ನು ಕಾಣುವ ನಡೆಸಿಕೊಳ್ಳುವ ರೀತಿಯೂ ಬದಲಾಗುತ್ತದೆ. ಹೀಗಾಗಿ ಹೆಣ್ಣುಭ್ರೂಣ ಹತ್ಯೆ, ವರದಕ್ಷಿಣೆ, ಬಾಲ್ಯವಿವಾಹ, ಕೌಟುಂಬಿಕ, ಲೈಂಗಿಕ ದೌರ್ಜನ್ಯ ಇತ್ಯಾದಿಗಳು ಲಿಂಗತಾರತಮ್ಯ ನೆಲೆಯಲ್ಲಿ ಮಹಿಳೆಯರು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳಾಗಿವೆ. ಇವುಗಳ ವಿರುದ್ಧ ಜರುಗಿದ ಹೋರಾಟಗಳ ಮೂಲಕ ಮಹಿಳಾ ದಶಕದ ಅವಧಿಯಲ್ಲಿ ಹಾಗೂ ಆಸುಪಾಸಿನ ಸಂದರ್ಭದಲ್ಲಿ ಅನೇಕ ಕಾನೂನುಗಳು ಜಾರಿಯಾಗಿವೆ. ಅದರಲ್ಲೂ ವಿಶೇಷವಾಗಿ ಪ್ರಸ್ತುತ ಕಥೆಗಳಲ್ಲಿ ಮುಖ್ಯ ವಿಚಾರಗಳಾಗಿ ಚರ್ಚೆಯಾದ ಹೆಣ್ಣಿನ ಪೌಷ್ಟಿಕತೆ, ಆರೋಗ್ಯ ಸೌಲಭ್ಯಗಳ ವಿಸ್ತರಣೆ, ಹೆಣ್ಣು ಶಿಶುಗಳ ಮರಣ ಪ್ರಮಾಣವನ್ನು ತಗ್ಗಿಸುವ ದೃಷ್ಟಿಯಿಂದ ಹಲವಾರು ಮಹತ್ವದ ಯೋಜನೆಗಳನ್ನು ಮಹಿಳಾ ದಶಕದಲ್ಲಿ ಆಚರಣೆಗೆ ತರಲಾಯಿತು. ಈ

ಯೋಜನೆಗಳನ್ನು ಯಶಸ್ವಿಗೊಳಿಸಲು ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಕುಟುಂಬ ಯೋಜನಾ ಕೇಂದ್ರಗಳಿಂದ ಆರಂಭವಾಗಿ ರಾಷ್ಟ್ರೀಯ, ಅಂತಾರಾಷ್ಟ್ರೀಯ ಸಂಘಟನೆ, ಸಂಸ್ಥೆಗಳು ಸಹ ಅತ್ಯಂತ ಕ್ರಿಯಾಶೀಲವಾಗಿ ಪಾಲ್ಗೊಂಡವು. ಇವುಗಳೊಂದಿಗೆ ೧೯೫೪ರಲ್ಲಿ ವಿಶೇಷ ವಿವಾಹ ಕಾಯ್ದೆ ಮತ್ತು ಕುಟುಂಬ ನ್ಯಾಯಾಲಯ ಕಾಯ್ದೆ, ೧೯೫೫-೫೬ರಲ್ಲಿ ಹಿಂದೂ ವಿವಾಹ ಕಾಯ್ದೆ, ೧೯೬೧ರಲ್ಲಿ ವರದಕ್ಷಿಣೆ ಕಾಯ್ದೆ ಅನುಷ್ಠಾನಗೊಂಡಿವೆ. ಅದರಲ್ಲೂ ವರದಕ್ಷಿಣೆಗೆ ಸಂಬಂಧಿಸಿದಂತೆ ವಿಶ್ವದಲ್ಲಿ ಇರುವ ಅತ್ಯಂತ ಹಳೆಯ ಕಾಯ್ದೆ ನಮ್ಮ ದೇಶದ್ದಾಗಿದೆ. ಅದೇ ರೀತಿ ತೀರಾ ಇತ್ತೀಚೆಗೆ ೨೦೦೬ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯ್ದೆ, ೨೦೦೫ ಮತ್ತು ೨೦೦೬ರಲ್ಲಿ ಕೌಟುಂಬಿಕ ದೌರ್ಜನ್ಯದಿಂದ ಮಹಿಳಾ ಸಂರಕ್ಷಣಾ ಕಾಯ್ದೆಯ ಅಧಿನಿಯಮ ಇತ್ಯಾದಿಗಳು ಜಾರಿಯಾಗಿವೆ. ಆದರೆ ಈ ಎಲ್ಲ ಕಾಯ್ದೆಗಳ ಜಾರಿಗಾಗಿ ಒತ್ತಾಸೆ ಹಾಗೂ ಹೋರಾಟಗಳ ಮೂಲವನ್ನು ಮಹಿಳಾ ದಶಕದ ಅವಧಿಯಲ್ಲಿಯೇ ಗುರುತಿಸಲಾಗಿದೆ. ಆದರೆ ಆಡಳಿತಾತ್ಮಕ ವೈಫಲ್ಯ, ಭ್ರಷ್ಟತೆ, ಸ್ವಹಿತಾಸಕ್ತಿ, ತಾರತಮ್ಯ ಮುಂತಾದ ಕಾರಣಗಳಿಂದ ಇಲ್ಲಿಯ ವರೆಗೂ ಇವುಗಳ ಪರಿಣಾಮಕಾರಿ ಅನುಷ್ಠಾನ ಸಾಧ್ಯವಾಗಿಲ್ಲ.

### ೪.೩. ಹೆಂಡತಿ-ಗೃಹಿಣಿ ಪರಿಕಲ್ಪನೆಯ ನಿರ್ವಚನ

ವಿವಾಹವು ಮೂಲಭೂತವಾಗಿ ಸ್ತ್ರೀ ಮತ್ತು ಪುರುಷನ ನಡುವೆ ಏರ್ಪಡುವ ಸಾಮಾಜಿಕ ಸಂಬಂಧ. ತನ್ನದೇ ಆದ ನೀತಿ-ನಿಯಮಗಳು, ಆಚರಣೆ, ಸಂಪ್ರದಾಯಗಳ ಮೂಲಕ ಸಾಮಾಜಿಕ ಸಂಸ್ಥೆಯ ಒಂದು ಭಾಗವಾಗಿ 'ವಿವಾಹ ವ್ಯವಸ್ಥೆ' ಗುರುತಿಸಿಕೊಂಡಿದೆ. ಈ ವಿವಾಹ ವ್ಯವಸ್ಥೆಯ ಮೂಲಕ ಸ್ತ್ರೀಯು ಪುರುಷನೊಂದಿಗೆ 'ಹೆಂಡತಿ'ಯ ಸಂಬಂಧದೊಂದಿಗೆ ಕೌಟುಂಬಿಕವಾಗಿ 'ಗೃಹಿಣಿ'ಯ ಪರಿಕಲ್ಪನೆಯಲ್ಲಿ ಗುರುತಿಸಲ್ಪಡುತ್ತಾಳೆ. ಪುರುಷ ಪ್ರಧಾನತೆ ವೈವಾಹಿಕ ಚೌಕಟ್ಟಿನ ಮೂಲಕ ಸ್ತ್ರೀ ಮತ್ತು ಪುರುಷರ ಹಕ್ಕು ಬಾಧ್ಯತೆಗಳನ್ನು ನಿರ್ಣಯಿಸಿದೆ. ಈ ಬಾಧ್ಯತೆಗಳನ್ನು ಮೀರುವ ಅವಕಾಶ ಹೆಣ್ಣಿಗಿಲ್ಲ. ವಿಪರ್ಯಾಸವೆಂದರೆ ಹಕ್ಕುಗಳು ಪುರುಷಪರವಾದರೆ, ಬಾಧ್ಯತೆಗಳು ಸ್ತ್ರೀ ಪರವಾಗಿವೆ. ಇದರಿಂದ ತನಗಾದ ದುರವಸ್ಥೆಯನ್ನು ಹೆಣ್ಣು ಪ್ರಶ್ನಿಸುವ ಮಾತೇ ಇಲ್ಲ. ಹೀಗಾಗಿ ಹೆಣ್ಣಿನ ಸಮಸ್ಯೆಗಳ ಮೂಲ ವಿವಾಹ ಸಂಸ್ಥೆಯೇ ಆಗಿದೆ. "ವಿವಾಹ ಎನ್ನುವ ಸಂಬಂಧ ಏರ್ಪಡುವುದರಿಂದ ಒಟ್ಟಿಗೆ ಇರುವ ವ್ಯಕ್ತಿಗಳು ಅವರವರ ವಯಸ್ಸು, ಲಿಂಗ ಮತ್ತು ಏರ್ಪಟ್ಟಿರುವ ಸಂಬಂಧದ ಸ್ವರೂಪದ ಆಧಾರದ ಮೇಲೆ ಅವರಿಗೆ ಬೇರೆ-ಬೇರೆಯಾದ ಪಾತ್ರಗಳನ್ನು ವಿವಾಹ ಎನ್ನುವ ಸಾಂಸ್ಥಿಕ ಚೌಕಟ್ಟಿನ ಒಳಗೆ ನಿರ್ವಹಿಸಬೇಕಾಗುತ್ತದೆ. ಈ ಪಾತ್ರ ಹಂಚಿಕೆ ಬಹುತೇಕ ಸಂದರ್ಭಗಳಲ್ಲಿ ಸ್ತ್ರೀ-ಪುರುಷರ ನಡುವೆ ಈಗಾಗಲೇ ಇರುವ ಅಸಮಾನತೆಯನ್ನು ಬಲಗೊಳಿಸುವುದರ ಜೊತೆಗೆ, ಸ್ತ್ರೀಯರಿಂದಲೇ

ವಿಶೇಷವಾದ ನಡವಳಿಕೆಗಳನ್ನು ನಿರೀಕ್ಷಿಸುತ್ತದೆ. ವಿವಾಹದ ಅನೇಕ ಆಚರಣೆಗಳು ಸಹ ವಿವಾಹವಾಗಲಿರುವ ಸ್ತ್ರೀ ಹಾಗೂ ಪುರುಷರ ಸಂಬಂಧಗಳನ್ನು 'ಪ್ರಾಧಾನ್ಯತೆ', 'ಪರಾಧೀನತೆ'ಯ ವರ್ತುಲದಲ್ಲಿ ಸಿಲುಕಿ ಹಾಕಿಸುತ್ತದೆ"[೨೯] ಇಂದಿರಾ ಅವರ ಈ ಮಾತಿನಂತೆ ಪುರುಷ ಪ್ರಧಾನತೆ ರೂಪಿಸಿರುವ ವೈವಾಹಿಕ ಆಚರಣೆಗಳು ಸಹ ಗಂಡು-ಹೆಣ್ಣಿನ ಶ್ರೇಣೀಕರಣವನ್ನು ಪೋಷಿಸಿಕೊಂಡು ಬಂದಿವೆ. ಅಲ್ಲದೆ ವಿವಾಹದ ನಂತರ 'ಗೃಹಿಣಿ'ಯಾಗಿ ಎದುರಿಸುವ ದೌರ್ಜನ್ಯ, ತಾರತಮ್ಯಗಳು 'ಖಾಸಗಿ' ಎನಿಸುವುದರಿಂದ ಅನಿವಾರ್ಯವಾಗಿ ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾಳೆ.

ಹೀಗೆ ಹೊಂದಾಣಿಕೆ ಮಾಡಿಕೊಳ್ಳುವ ಸಂದರ್ಭದಲ್ಲಿ 'ಪಾತಿವ್ರತ್ಯ', 'ತಾಯ್ತನ', 'ಮಕ್ಕಳ ಪೋಷಣೆ', 'ದುಡಿಮೆ', 'ವಿಧೇಯಕತ್ವ' ಮುಂತಾದ ಗುಣಗಳನ್ನು ಪುರುಷ ಸಮಾಜ ಗೃಹಿಣಿಯಾದವಳಿಂದ ನಿರೀಕ್ಷಿಸುತ್ತದೆ. ಹಾಗಾಗಿ 'ಆದರ್ಶನಾರಿ'ಯ ಪರಿಕಲ್ಪನೆಯನ್ನು ತುಂಬಿಕೊಂಡ ಹೆಣ್ಣು ಯಾವ ವಿರೋಧವೂ ಇಲ್ಲದೆ ಇವುಗಳನ್ನು ಅನುಸರಿಸಲು ಪ್ರಯತ್ನಿಸುತ್ತಾಳೆ. ಇಂತಹ ಪ್ರಯತ್ನದಲ್ಲಿ ತನ್ನ ಮೇಲಿನ ಹಿಂಸೆ, ನೋವು, ಅವಮಾನಗಳನ್ನು ಸಹಿಸಿಕೊಳ್ಳುತ್ತಾಳೆ. ಈ ಅಂಶಗಳನ್ನು ಆಧರಿಸಿ 'ಹೆಂಡತಿ' ಅಥವಾ 'ಗೃಹಿಣಿ'ಯಾಗಿ ಹೆಣ್ಣಿನ ಪಾತ್ರ ಪ್ರತಿನಿಧೀಕರಣವನ್ನು ಪ್ರಸ್ತುತ ಮಹಾಪ್ರಬಂಧದ ಪ್ರಾತಿನಿಧಿಕ ಲೇಖಕಿಯರು ಅಭಿವ್ಯಕ್ತಗೊಳಿಸಿರುವ ಕ್ರಮವನ್ನು ಸ್ಥಿರ ಮತ್ತು ಪರಿವರ್ತಿತ ಮಾದರಿ ಪಾತ್ರ ವಿವೇಚನೆಯ ಮೂಲಕ ಹೇಳಲಾಗಿದೆ.

### ೪.೩.೧. ಹೆಂಡತಿ-ಗೃಹಿಣಿ ಮಾದರಿ ಪಾತ್ರ ವಿವೇಚನೆ

ಕುಟುಂಬವೆಂಬ ಸಾಮಾಜಿಕ ಸಂಸ್ಥೆಯ ಮೂಲಬಿಂದು ವಿವಾಹ. ವೈವಾಹಿಕ ವಿಧಿಯು ಸಾಮಾಜಿಕ ರಚನೆ, ಪರಿಕಲ್ಪನೆಯಿಂದ ಪ್ರೇರಿತವಾಗಿದೆ. ವಿವಾಹ ವ್ಯವಸ್ಥೆಗೆ ಒಳಪಡುವ ಮೂಲಕ ಹೆಣ್ಣು ಗೃಹಿಣಿ, ಹೆಂಡತಿಯ ಪಾತ್ರಗಳನ್ನು ನಿಭಾಯಿಸುತ್ತಾಳೆ. ಇಲ್ಲಿ ಹೆಣ್ಣಿನ ಬುದ್ಧಿ, ವಿದ್ಯೆ, ಸೃಜನಾತ್ಮಕತೆಗಳಿಗಿಂತಲೂ ಸಾಂಪ್ರದಾಯಿಕ ನಡವಳಿಕೆಯನ್ನು ನಿರೀಕ್ಷಿಸಲಾಗುತ್ತದೆ. "ಹೆಣ್ಣಿನ ಲೈಂಗಿಕತೆಯನ್ನು ಪ್ರತಿಬಂಧಿಸುವ ಬಹುಮುಖ್ಯ ಸಾಮಾಜಿಕ ಸಂಸ್ಥೆಯೇ ವಿವಾಹ. ಸಮಾಜದ ಸದಸ್ಯರ ಲೈಂಗಿಕತೆಯನ್ನು ಕ್ರಮಬದ್ಧಗೊಳಿಸುವ ನಾಗರಿಕತೆಯ ಹೆಸರಿನಲ್ಲಿ ಹುಟ್ಟಿಕೊಂಡ ಒಂದು ಸಂಸ್ಥೆ"[೩೦] ಎಂದು ಶ್ರೀಮತಿಯವರು ವಿವಾಹವನ್ನು ವ್ಯಾಖ್ಯಾನಿಸುತ್ತಾರೆ. ಈ ಸಂಸ್ಥೆಯಲ್ಲಿ ಯಜಮಾನಿಕೆ, ಅಧಿಕಾರಗಳು ರೂಪುಗೊಳ್ಳುವುದು ನಿಯಂತ್ರಣ ಸಾಧನೆಯ ಮೂಲಕವೇ ಆಗಿರುವುದರಿಂದ ಇದರಡಿಯಲ್ಲಿ ಗೃಹಿಣಿ, ಹೆಂಡತಿಯಾಗಿ ಹೆಣ್ಣು ಅನುಭವಿಸುವ ವೇದನೆಗಳಿಗೆ ಮಿತಿಯೇ ಇಲ್ಲ. ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ತನ್ನದಲ್ಲದ ವ್ಯಕ್ತಿತ್ವದೊಂದಿಗೆ ಹೊಂದಿಕೊಂಡು ಅಧೀನಳಾಗಿ ಬದುಕುವುದೇ ಜೀವನದ ಪರಮಗುರಿ ಎಂದು ನಂಬಿಸುವ ಅನಿವಾರ್ಯತೆಯನ್ನು ಪಿತೃ ಸಂಸ್ಕೃತಿ ಸೃಷ್ಟಿಸುತ್ತದೆ. ಆದ್ದರಿಂದ ಈ ಬಗೆಯ ಅನಿವಾರ್ಯತೆಯಲ್ಲಿ

ಬದುಕುವ ಹೆಣ್ಣು ಒಂದು ಮಾದರಿಯಾದರೆ, ಮೀರಿ ನಡೆಯುವ ಹೆಣ್ಣು ಮತ್ತೊಂದು ಮಾದರಿ. ಗೃಹಿಣಿಯಾಗಿ, ಹೆಂಡತಿಯಾಗಿ ಆಕೆ ಅಳವಡಿಸಿಕೊಳ್ಳಬೇಕಾದ ಮೌಲ್ಯಗಳನ್ನು ಪಿತೃಸಂಸ್ಕೃತಿ ರೂಪಿಸಿದೆ. ಈ ಮೌಲ್ಯಗಳೆಲ್ಲ ಹೆಣ್ಣಿನ ಆರ್ಥಿಕತೆ, ಚಲನಶೀಲತೆ ಹಾಗೂ ಲೈಂಗಿಕತೆಗಳನ್ನು ಗಂಡಿಗೆ ಅಧೀನವಾಗಿಸುವ ತಂತ್ರಗಳಾಗಿವೆ ಎಂಬುದು ವಾಸ್ತವ ಸಂಗತಿಯಾಗಿದೆ. ಹಾಗಾಗಿ ಪ್ರಸ್ತುತ ಅಧ್ಯಯನ ಒಳಗೊಳ್ಳುವ ಲೇಖಕಿಯರ ಕಥಾಸಾಹಿತ್ಯದಲ್ಲಿ ಹೆಂಡತಿ ಹಾಗೂ ಗೃಹಿಣಿತ್ವದ ವಿವಿಧ ಮಾದರಿಗಳನ್ನು ಸ್ತ್ರೀವಾದಿ ವಿಮರ್ಶೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ವೀಣಾ ಅವರ 'ಅವಳ ಸ್ವಾತಂತ್ರ್ಯ' ಕಥೆಯಲ್ಲಿ ವಿಮಲಾ ಸುಶಿಕ್ಷಿತೆ, ಉದ್ಯೋಗಸ್ಥ ಗೃಹಿಣಿ ಮೇಲಾಗಿ ಮಹಿಳಾ ಸಮಾನತೆ ಬಗ್ಗೆ ಆದರ್ಶದ ಮಾತುಗಳನ್ನಾಡುವ ಭಾಷಣಕಾರ್ತಿ. ಆದರೆ ವೈಯಕ್ತಿಕ ಬದುಕಿನಲ್ಲಿ ಕಾಯಿಲೆಗೆ ಬಿದ್ದ ಮಾವನನ್ನು, ಕಾಡುವ ಮಕ್ಕಳನ್ನೂ ಸಲಹುತ್ತಾ, ವಾರಕ್ಕೊಮ್ಮೆ ಅತಿಥಿಯಂತೆ ಭೇಟಿ ನೀಡುವ ಗಂಡ ಶಂಕರನ ಆಜ್ಞೆ, ಆಕ್ಷೇಪಣೆಗಳನ್ನು ಮರು ಮಾತನಾಡದೆ ಸಹಿಸಿಕೊಳ್ಳುವಾಕೆ. ಮನೆಯ ಜವಾಬ್ದಾರಿಗಳನ್ನು ಒಬ್ಬಳೇ ಹೊರಲಾಗದೇ ಕುಸಿಯುತ್ತಿದ್ದೇನೆ ಇಲ್ಲಿಗೆಯೇ ವರ್ಗ ಮಾಡಿಸಿಕೊಳ್ಳಿ ಎಂದು ಪ್ರತಿಸಲವೂ ಶಂಕರನಿಗೆ ಹೇಳಲು ಬಯಸುತ್ತಾಳೆ. ಆದರೆ ಆತನಿಗೆ ಈ ಬಗ್ಗೆ ಆಸಕ್ತಿಯಿಲ್ಲ. "ಹೆಂಡತಿ ಗ್ರಾಜ್ಯುಯೇಟ್ ಇದ್ದರ ಮಕ್ಕಳನ್ನ ಛಲೋತ್ನ್ಾಗಿ ಬೆಳಸ್ತಾಳಂತ ಕಡಿಮೀ ವರದಕ್ಷಿಣೆ ತಗೊಂಡು ನಿನ್ನ ಲಗ್ನಾದೆ ನೀ ಹುಡುಗರಿಗೆ ಸ್ವಲ್ಪ discipline ಕಲಿಸಿಲ್ಲ ನೋಡು"[೨೧] ಎಂದು ಶಂಕರ ಮೂದಲಿಸಿದಾಗ ಮೌನವೇ ಆಕೆಯ ಉತ್ತರವಾಗುತ್ತದೆ. ಹೆಣ್ಣಿಗೆ ದೊರೆತ ಶಿಕ್ಷಣ, ಉದ್ಯೋಗ ಆಕೆಯ ಪ್ರಗತಿಪರ ಸಂಕೇತವಾದರೂ ಅವುಗಳಲ್ಲಿಯೂ ಪುರುಷ ಸ್ವಾರ್ಥಪರತೆಯ ಪ್ರವೇಶವನ್ನು ಶಂಕರನ ಮಾತುಗಳು ಧ್ವನಿಸುತ್ತವೆ. ಅಪರೂಪಕ್ಕೆ ಮನೆಗೆ ಬರುವ ಶಂಕರನಿಗೆ ಹೆಂಡತಿಯ ಆಫೀಸು, ಮನೆ ಮತ್ತು ಮಕ್ಕಳ ನಿರ್ವಹಣೆಯ ಹೊರತಾಗಿ ಸ್ನೇಹಿತರೊಂದಿಗೆ ಸಿನಿಮಾ ನೋಡುವುದೇ ದೊಡ್ಡದಾಗಿ ಕಾಣಿಸುತ್ತದೆ. ವಿಪರ್ಯಾಸವೆಂದರೆ ಅದೇ ಸಂಜೆ ವಿಮಲ ಮಹಿಳೆಯರಾದ ನಾವು ಎಚ್ಚೆತ್ತುಕೊಳ್ಳ ಬೇಕು, ನಮಗಾಗುವ ಅನ್ಯಾಯವನ್ನು ಪ್ರತಿಭಟಿಸಬೇಕೆಂದು 'ಅಂತಾರಾಷ್ಟ್ರೀಯ ಮಹಿಳಾ ವರ್ಷ'ದ ಕಾರ್ಯಕ್ರಮದಲ್ಲಿ ಭಾಷಣ ಮಾಡುತ್ತಾಳೆ. ಆದರೆ ವ್ಯಕ್ತಿಗತವಾಗಿ ಇವೆಲ್ಲವೂ ಆಕೆಗೆಯೇ ಸಾಧ್ಯವಾಗದ ವಿಷಯವಾಗಿದೆ. ವಿವಾಹ ಸಂಸ್ಥೆಯಲ್ಲಿ ಗಂಡು ಹೆಣ್ಣನ್ನು ಜೀವನಪೂರ್ತಿ ನಿಯಂತ್ರಿಸುವುದು ದೈಹಿಕ ಮತ್ತು ಮಾನಸಿಕ ನೆಲೆಗಳಿಗೆ ಸಂಬಂಧಿಸಿದೆ. ಚರಾಚರ ಆಸ್ತಿಗಳಂತೆ ಹೆಂಡತಿಯಾದವಳನ್ನೂ ತನ್ನ ಆಸ್ತಿಯಾಗಿ ಪರಿಭಾವಿಸುವ ಅಧಿಕಾರವನ್ನು ಯಜಮಾನ್ಯ ನೆಲೆ ಹೇಗೆ ಸ್ಥಾಪಿಸಿದೆ ಎಂಬುದನ್ನು ಪ್ರಸ್ತುತ ಕಥೆ ನಿರೂಪಿಸುತ್ತದೆ.

ವೀಣಾ ಅವರ 'ಬಿಡುಗಡೆ' ಕಥೆಯಲ್ಲಿ ಕಥಾನಾಯಕಿ ಸರೋಜ ತನ್ನ ಮನೆಕೆಲಸ, ಮಕ್ಕಳ ಪಾಲನೆ ಪೋಷಣೆಗಳಲ್ಲಿ ಗಂಡನಾದವನು ಪ್ರೀತಿಯ ಪಾಲುದಾರನಾಗಬೇಕೆಂದು ಕನಸು ಕಂಡವಳು. ಆದರೆ ವಾಸ್ತವದಲ್ಲಿ ಗಂಡನಾದವನು ಆಕೆಯ ದುಡಿಮೆ ಹಾಗೂ ಮಕ್ಕಳಿಗೆ ಮಾತ್ರ ಹಕ್ಕುದಾರನಾಗಿದ್ದಾನೆ. ಆಕೆಯ ಆರೋಗ್ಯ, ಆಸಕ್ತಿ, ನಡೆ-ನುಡಿ, ಆಕಾಂಕ್ಷೆಗಳ ಮೇಲೆ ಆತನಿಗೆ ತಿರಸ್ಕಾರ ಹಾಗೂ ನಿಷ್ಕಾಳಜಿಗಳಿವೆ. ಇವುಗಳ ಹೊರತಾಗಿ ಹೊರಪ್ರಪಂಚಕ್ಕೆ ಮಾತ್ರ ಆತನೊಬ್ಬ ಸಾಧು, ನ್ಯಾಯಪರ, ಆದರ್ಶಪತಿಯೆಂಬಂತೆ ಪ್ರಚಾರಗೊಂಡಿದ್ದಾನೆ. ಹೀಗಾಗಿ ಗಂಡನ ನಡತೆ, ತನಗಾದ ಅನ್ಯಾಯ ಅಪಮಾನಗಳಿಗೆ ಪ್ರತಿಕ್ರಿಯಿಸುವ ಶಕ್ತಿಯೂ ಆಕೆಯಲ್ಲಿ ಇಲ್ಲವಾಗಿದೆ. ಕೊನೆಗೆ ಕಥಾನಾಯಕಿ ಸರೋಜಳಿಗೆ ಈ ಸಂಬಂಧದ ಹೊರಗೆ ಬರುವ ಸಾಧ್ಯತೆಯೂ ಇಲ್ಲದೆ ಆತನ ಸಾವಿನಲ್ಲಿ ಬಿಡುಗಡೆಯ ಭಾವ ಪಡೆಯುವ ಮೂಲಕ ನಿರಾಳತೆಯನ್ನು ಅನುಭವಿಸುತ್ತಾಳೆ.

ವೀಣಾ ಅವರ ಮೇಲಿನ ಎರಡೂ ಕತೆಗಳಿಗೆ ಸಂಬಂಧಿಸಿದಂತೆ "ಮೇಲುನೋಟಕ್ಕೆ ಸುಂದರವೂ ಸಫಲವಾಗಿಯೂ ಕಾಣುವ ದಾಂಪತ್ಯಗಳ ಒಳಸ್ವರೂಪವನ್ನು ಹೆಣ್ಣಿನ ದೃಷ್ಟಿಕೋನದಿಂದ ಗ್ರಹಿಸುವುದು ವೀಣಾ ಅವರ ಕಥೆಗಳ ಉದ್ದೇಶ ಎನ್ನಬಹುದು. ಪುರುಷ ಪ್ರಧಾನ ಸಮಾಜವೊಂದರಲ್ಲಿ ಕ್ರೌರ್ಯ, ದೌರ್ಜನ್ಯ ಶೋಷಣೆಗಳು ಎಷ್ಟು ಸೂಕ್ಷ್ಮವಾಗಿ, ನಯವಾಗಿ ಇರಬಹುದು ಎಂಬ ದರ್ಶನದಲ್ಲಿ ಅವರ ಕಥೆಗಳ ಹೆಚ್ಚುಗಾರಿಕೆ ಇದೆ"[೨] ಎಂದು ಅಶೋಕ ಟಿ.ಪಿ ಅವರು ಹೇಳುತ್ತಾರೆ. ಕಾರಣ ಎರಡೂ ಕಥೆಗಳ ಅಂತ್ಯ ಬಹಳ ವಿಭಿನ್ನವಾಗಿವೆ. ಇಲ್ಲಿನ ಕಥಾನಾಯಕಿಯರು ನಿರ್ವಹಿಸುವ 'ಗೃಹಿಣಿತ್ವ'ದ ಅನುಭವ ಹೊರಜಗತ್ತಿಗೆ ಆದರ್ಶವಾಗಿ ಕಂಡರೆ ವ್ಯಕ್ತಿಗತವಾಗಿ ಆಕೆಯ ಅಂತರಂಗ ಅನುಭವಿಸುವ ನೋವಿನ ಅನಂತಮುಖಗಳನ್ನು ತೆರೆದಿಡುತ್ತವೆ.

'ಶೋಷಣೆ, ಬಂಡಾಯ ಇತ್ಯಾದಿ ಕಾದಂಬರಿಯಲ್ಲಿ ಶಶಿಯ ಮನೆ ಕೆಲಸದ ರೋಶನ್ ಬಿ ಗಂಡನ ಮತ್ತೊಂದು ಮದುವೆ, ಉಪಟಳ, ತಾರತಮ್ಯಗಳಿಂದ ಬೇಸತ್ತು ಆತನನ್ನು ತೊರೆದು ಬರುತ್ತಾಳೆ. ಆದರೆ ಆಕೆ ಮರಳಿ ಬರಬೇಕೆಂದು ಗಂಡನಿಂದ ಬೇಡಿಕೆ ಬಂದಾಗ, ಭಾವನಾತ್ಮಕತೆಗೆ ಮಹತ್ವಕೊಟ್ಟು ಆತನಲ್ಲಿಗೆ ಹೋಗುತ್ತಾಳೆ. ಇದೇ ಕಾದಂಬರಿಯ ಮತ್ತೊಂದು ಪಾತ್ರವಾದ 'ಶಶಿ' ಜೀವದ ಗೆಳತಿ ಕಮಲಾಳ ವೈವಾಹಿಕ ಬದುಕಿನ ಘಟನೆಗಳಿಂದ ಮದುವೆಯನ್ನೇ ನಿರಾಕರಿಸುತ್ತಾಳೆ. ತನ್ನನ್ನು ಮದುವೆಯಾಗಲು ಇಚ್ಛೆಸಿದ ಸತೀಶ್ ದೇಶಪಾಂಡೆಯೊಂದಿಗಿನ ಸಂಬಂಧ ವಿವಾಹದ ಮೂಲಕ ಗುಲಾಮಗಿರಿಗೆ ಒಳಗಾಗಬಾರದೆಂದು ನಿರ್ಧರಿಸುತ್ತಾಳೆ. ಆದರೂ ಕೊನೆಯಲ್ಲಿ ಸಮಾಜ ಕಟ್ಟಿಕೊಟ್ಟ ವಿವಾಹ ವ್ಯವಸ್ಥೆಗೆ ಅಂಟಿಕೊಳ್ಳುತ್ತಾಳೆ. ಕಾದಂಬರಿಯ ಮುಖ್ಯ ಪಾತ್ರವಾದ 'ಕಮಲ' ಕಲಾವಿದೆಯಾಗುವ ಆಸೆಯಿಂದ, ವಿದ್ಯಾಭ್ಯಾಸದ ವೇಳೆ ಆಕೆಗಾದ

ಪ್ರೇಮ ವೈಫಲ್ಯವೂ ಕಾರಣವಾಗಿ ನಾಟಕದ ಪ್ರೊಪರೇಟರ್ ಶಿವಮೂರ್ತಿಯನ್ನು ನಂಬಿ ಮುಂಬೈಗೆ ಬರುತ್ತಾಳೆ. ತನ್ನ ಸಮಾನ ಮನಸ್ಥಿತಿ, ಸಿದ್ಧಾಂತಗಳಿವೆಯೆಂದು ನಂಬಿ ಈಗಾಗಲೇ ಗೃಹಸ್ಥನಾಗಿದ್ದರೂ ಶಿವಮೂರ್ತಿಯನ್ನು ಎರಡನೆಯ ವಿವಾಹವಾಗುತ್ತಾಳೆ. ಆದರೆ ವಾಸ್ತವದ ಅರಿವಾದಾಗ ಆತನ ಸಂಬಂಧದಿಂದ ಹೊರಬರಲಾಗದೆ ಆಕೆಯದು ಮೌನ ಹೋರಾಟವಾಗುತ್ತದೆ. ಇದೇ ವೇಳೆ ತಾನು ನಟಿಯಾಗುವ ಉದ್ದೇಶವೂ ಶಿವಮೂರ್ತಿಯಿಂದ ಈಡೇರದಿದ್ದಾಗ "ಹೆತ್ತವರಿಂದ ಬೆಳೆಸಿದವರಿಂದ ಒಂದು ಬಿರುಸು ಮಾತು ಅನ್ನಿಸಿಕೊಂಡವಳಲ್ಲ. ಈ ಮನುಷ್ಯನಿಂದ ಇಷ್ಟು ಅಪಮಾನ, ಅನ್ಯಾಯ, ಅತ್ಯಾಚಾರ ಯಾಕಾದರೂ ಸಹಿಸುತ್ತಿರುವೆ. ಹೊರಗಿನ ಜಗತ್ತು ನನ್ನ ಪ್ರತಿಭೆಯನ್ನು, ಕಲೆಯನ್ನು, ಸೌಂದರ್ಯವನ್ನು ಎಲ್ಲವನ್ನೂ ಮುಕ್ತಕಂಠದಿಂದ ಹೊಗಳುವಾಗ ನನಗೆ ಏನೂ ಅನ್ನಿಸುವುದಿಲ್ಲ. ನಾನು ಪ್ರೀತಿಸಿದ ಈ ಮನುಷ್ಯನ ಕಣ್ಣನೋಟದಲ್ಲಿ ಎಂದಾದರೊಮ್ಮೆ ಪ್ರಶಂಸೆ ಮಿಂಚಿದರೆ ನಾನು ಪುಲಕಿತಳಾಗುತ್ತೇನೆ"[೩೩] ಎಂದು ಕೊರಗುತ್ತಾಳೆ. ಕೊನೆಗೆ ಇವೆಲ್ಲವುಗಳಿಂದ ಬಿಡುಗಡೆ ಬಯಸಿ ದೂರವಾಗಲು ನಿರ್ಧರಿಸುತ್ತಾಳೆ. ಕೆಲವೇ ತಿಂಗಳುಗಳಲ್ಲಿ "ಆತನಿಗೆ ಬೇಡವಾದುದನ್ನು ಮಾಡಿ ಆತನ ಮನಸ್ಸು ನೋಯಿಸಲು ನನಗಿಷ್ಟವಿಲ್ಲ. ಪ್ರಸಿದ್ಧಿಗಿಂತ, ಅನುಭವಕ್ಕಿಂತ, ಹಣಕ್ಕಿಂತ, ಆದರ್ಶಗಳಿಗಿಂತ ಎಲ್ಲಕ್ಕಿಂತ ಹೆಚ್ಚಿನದು ಆತನ ಮನಸ್ಸು ಸಮಾಧಾನ"[೩೪] ಎನ್ನುವ ಮೂಲಕ ಮತ್ತೆ ಅದೇ ಗೃಹಿಣಿತ್ವದ ಬದುಕನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ.

'ತಿರುಗಿ ಹೋದಳು' ಕಥೆಯಲ್ಲಿ ತಾಯಿ ಇಲ್ಲದ ಹಮೀದಾಳನ್ನು ಸಾಕು ಅಜ್ಜಿ ಇಮಾಂಬಿಯ ಅರಿವಿಗೂ ಬಾರದಂತೆ ವೃದ್ಧನಾದ ಮಹಮ್ಮದ್‌ಗೌಸ್‌ಗೆ ಎರಡನೆಯ ಮದುವೆ ಮಾಡಿಸಲಾಗುತ್ತದೆ. ಇದರಿಂದ ನೊಂದ ಇಮಾಂಬಿ ಮೊಮ್ಮಗಳನ್ನು ಕರೆತಂದು ತನ್ನ ಮನೆಯಲ್ಲಿ ಇರಿಸಿಕೊಳ್ಳುತ್ತಾಳೆ. ವರ್ಷಕ್ಕೊಂದು ಸಲ ಬರುವ ಗೌಸ್ ಅಜ್ಜಿ ಮತ್ತು ಮೊಮ್ಮಗಳಿಂದ ಉಪಚಾರ ಪಡೆದು ಹೋಗುವವ. ಆತ ಹೋಗುವಾಗ ಹಮೀದಾಳ ಒಡಲು ತುಂಬಿ, ಮರಳಿ ಬಂದಾಗ ಕೈಯಲ್ಲೊಂದು ಮಗುವಿರುತ್ತಿತ್ತು. ಈ ಬಗೆಯ ನಿರಂತರ ಶೋಷಣೆ ಕಂಡ ಮನೆಯೊಡತಿ ಲಕ್ಷ್ಮಿ "ಆತನನ್ಯಾಕೆ ಒದ್ದು ಕಳಿಸೋದಿಲ್ಲ ಹಮೀದಾ" ಎಂದು ಪ್ರತೀ ಸಲವೂ ಆಕ್ರೋಶ ತೋರಿಸುತ್ತಾಳೆ. ಮುಂದೊಂದು ದಿನ ಸುರೇಶನೊಂದಿಗೆ ಮದುವೆಯಾದ ಲಕ್ಷ್ಮಿಗೆ ಆಘಾತ ಎದುರಾಗುತ್ತದೆ. ಕಾರಣ ವಾಸ್ತವದಲ್ಲಿ ಹಮೀದಾಳಂತೆ ತಾನೂ ಶೋಷಿತಳೇ ಎಂಬುದು ಮನವರಿಕೆಯಾಗುತ್ತದೆ. ಗಂಡನ ದೈಹಿಕ ಹಿಂಸೆ, ನೈತಿಕ ನಿಂದನೆ, ಅಧಿಕಾರಶಾಹಿ ವರ್ತನೆಗಳಿಂದ ಕುಸಿದು ಹೋಗುತ್ತಾಳೆ. ಕೊನೆಗೊಂದು ದಿನ ಆತನನ್ನು ತೊರೆದು ತನ್ನ ಮಗುವಿನೊಂದಿಗೆ ತವರಿನಲ್ಲಿ ನೆಲೆಸಲು ನಿರ್ಧರಿಸಿದಳಾದರೂ ನೌಕರಿ, ತವರಿನ ಅತಂತ್ರ ಬದುಕು, ಮಗುವಿನ ಭವಿಷ್ಯ ನೆನೆದು ಗಂಡನ ಮನೆಗೆ ಮರಳುತ್ತಾಳೆ. ಹೀಗೆ ಮರಳುವಾಗ "ನೀನ್ಯಾಕೆ ಆತನನ್ನು ಒದ್ದು ಓಡಿಸುವುದಿಲ್ಲ" ಎಂದು ಈ ಸಾರಿ ಲಕ್ಷ್ಮಿ

ಸಲಹೆ ನೀಡಲಿಲ್ಲವೇಕೆ? ಎಂಬ ಪ್ರಶ್ನೆ ಹಮೀದಾಳಲ್ಲಿ ಮೂಡುತ್ತದೆ. ಈ ಮೂಲಕ ಲಕ್ಷ್ಮಿಯ ಶೋಷಣೆಯ ವಿರುದ್ಧದ ದನಿ ತಣ್ಣಗಾಗಿರುವುದನ್ನು ಗ್ರಹಿಸಬಹುದಾಗಿದೆ. ಪ್ರಸ್ತುತ ಕಥೆಯಲ್ಲಿ ಅವಿದ್ಯಾವಂತರಾದ ಇಮಾಂಬಿ, ಹಮೀದಾ ಒಂದು ಬಗೆಯ ಶೋಷಣೆ ಅನುಭವಿಸಿದರೆ, ವಿದ್ಯಾವಂತೆ ಹಾಗೂ ಉದ್ಯೋಗಸ್ಥೆಯಾದ ಲಕ್ಷ್ಮಿ ಅನುಭವಿಸುವ ಶೋಷಣೆ ಮತ್ತೊಂದು ಬಗೆಯದು. ಎರಡೂ ಕಡೆ ಶೋಷಣೆಯ ಸ್ವರೂಪ ಬೇರೆ ಆದರೂ ಶೋಷಿತಳು ಹೆಣ್ಣೇ ಆಗಿದ್ದಾಳೆ.

ಹೀಗೆ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿ ಹಾಗೂ 'ತಿರುಗಿ ಹೋದಳು' ಕಥೆಯಲ್ಲಿನ ರೋಶನ್‌ಬಿ, ಶಶಿ, ಕಮಲಾ, ಲಕ್ಷ್ಮಿ ವಿವಾಹ ವ್ಯವಸ್ಥೆಯ ನಡುವೆ ತಮಗಾಗುವ ಅನ್ಯಾಯಗಳ ವಿರುದ್ಧ ಪ್ರತಿರೋಧ ವ್ಯಕ್ತಪಡಿಸುವ ಹಾಗೂ ವಿವಾಹ ಸಂಸ್ಥೆಯನ್ನು ಧಿಕ್ಕರಿಸುವ ಮನಸ್ಸಿದ್ದರೂ ಅದು ಸಾಧ್ಯವಾಗುವುದಿಲ್ಲ. ಕಾರಣ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು ಹುಟ್ಟಿನಿಂದ ಸಾಯುವವರೆಗೂ ಗಂಡಿನ ಆಸರೆಯ ಹೊರತಾಗಿ ಬದುಕಲು ಸಾಧ್ಯವಿಲ್ಲ ಎಂಬ ನಂಬಿಕೆಯನ್ನು ಹೇರಲಾಗಿದೆ. ಹಾಗಾಗಿ ಆಕೆಯ ಮೇಲಿನ ದೌರ್ಜನ್ಯ, ಹಿಂಸೆ ಇತ್ಯಾದಿಗಳ ಸಂದರ್ಭದಲ್ಲಿ ಮತ್ತೆ ಅದೇ ವ್ಯವಸ್ಥೆಗೆ ಹೊಂದಿಕೊಳ್ಳುವಂತೆ ಮಾಡುವುದು ಸುಲಭ ಸಾಧ್ಯವಾಗಿದೆ. ಹಾಗೆಯೇ ವೀಣಾ ಅವರು ಸೃಷ್ಟಿಸಿದ ಈ ಪಾತ್ರಗಳು ವ್ಯವಸ್ಥೆಯೊಂದಿಗೆ ಸಂಧಾನ ಮಾಡಿಕೊಳ್ಳುವ ಸ್ಥಿರ ಮಾದರಿಯ ರೂಪಕಗಳಾಗಿ ಕಂಡರೂ ಸಹ ತಮಗಾಗುವ ಅನ್ಯಾಯವನ್ನು ಪ್ರಶ್ನಿಸುವ, ವ್ಯವಸ್ಥೆಯನ್ನು ತಿರಸ್ಕರಿಸುವ ಹಾಗೂ ದೂರೀಕರಿಸುವ ಭಿನ್ನ ಆಲೋಚನೆಗೆ ತೊಡಗಿರುವುದರಲ್ಲಿ ಹೊಸ ಬಗೆಯ ಬದಲಾವಣೆಯೊಂದನ್ನು ಗ್ರಹಿಸಬಹುದಾಗಿದೆ.

ಸಾರಾ ಅಬೂಬಕ್ಕರ್ ಅವರ 'ಚಪ್ಪಲಿಗಳು' ಕಥೆಯಲ್ಲಿ ಹಸನ್ ಬ್ಯಾರಿಯ ಆಜ್ಞೆ, ಅಧಿಕಾರದ ಅನುಪಾಲನೆಯಲ್ಲಿ ನಡೆಯುವ 'ಫಾತಿಮಾ' ಪುರುಷ ಸ್ಥಾಪಿತ ಮಾದರಿಯನ್ನು ಬೆಂಬಲಿಸುವ ಪಾತ್ರ. ಆದರೆ ಮಗಳು ಸಮೀರಾ ಮತ್ತು ಅಳಿಯ ಶಬೀರನದು ಅನುರೂಪ ದಾಂಪತ್ಯ. ಹೆಂಡತಿಯ ಭಾವನೆಗಳನ್ನು ಗೌರವಿಸುವ, ಆಕೆಯ ಸ್ವಾತಂತ್ರ್ಯ, ಸಂತೋಷಗಳನ್ನು ಪ್ರೋತ್ಸಾಹಿಸುವ ಅಳಿಯ ಶಬೀರನ ನಡವಳಿಕೆ ಬ್ಯಾರಿಗೆ ಇಷ್ಟವಾಗದ ವಿಚಾರ. ಬದಲಾಗಿ "ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕೆಂದಾಗ ಉಪಯೋಗಿಸಿ, ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ? ಚಪ್ಪಲಿಯನ್ನು ಎಲ್ಲಿ ಬೇಕೋ ಅಲ್ಲೇ ಇಡಬೇಕು?"[೩೫] ಎಂದು ಅಳಿಯನಿಗೆ ಬೋಧಿಸುತ್ತಾನೆ. ಹೆಣ್ಣನ್ನು ಚಪ್ಪಲಿಗೆ ಹೋಲಿಸುವ ಮಾವನ ಕೀಳುತನಕ್ಕೆ ಆಕ್ರೋಶ ಉಕ್ಕಿ ಬಂದರೂ ಶಬೀರ್ ತಡೆಯುತ್ತಾನೆ. ಶಬೀರ್ ದುಡಿಮೆಗಾಗಿ ದೂರದ ಊರಿಗೆ ಹೋದಾಗ ಸ್ವಾರ್ಥಕ್ಕಾಗಿ ತನ್ನನ್ನು

ಅವಿರತ ದುಡಿಸುವ ತಂದೆಯ ಸಾಂಪ್ರದಾಯಿಕ ಕಟ್ಟಳೆಗಳಲ್ಲಿ ಸಮೀರಾ ನಲುಗಿ ಹೋಗುತ್ತಾಳೆ. ಅಂತರ್ಮುಖಿಯಾಗಿ ಸಿಡುಕು, ಸೋಮಾರಿತನದ ಗುಣಗಳನ್ನು ಪ್ರದರ್ಶಿಸುತ್ತಾಳೆ. ಇದರಿಂದ ಇಡೀ ಕುಟುಂಬವೇ ಆತಂಕಕ್ಕೆ ಒಳಗಾಗುತ್ತದೆ. ಕೊನೆಗೆ ಶಬೀರ್ ಆಕೆಯದು ಮಾನಸಿಕ ಖಾಯಿಲೆಯೆಂದು ಗುರುತಿಸಿ, ಚಿಕಿತ್ಸೆ ಕೊಡಿಸಿ, ಆಕೆಗೆ ಆಸರೆಯಾಗುವಲ್ಲಿ ಕತೆ ಸುಖಾಂತ್ಯವಾಗುತ್ತದೆ. ಪ್ರಸ್ತುತ ಕಥೆಯಲ್ಲಿ ಹಸನ್‌ಬ್ಯಾರಿ ಮತ್ತು ಶಬೀರ್‌ನ ಆಲೋಚನೆ, ದೃಷ್ಟಿಕೋನದ ಮೂಲಕ ಗೃಹಿಣಿ(ಹೆಂಡತಿ)ಯ ಸ್ಥಿರ ಮತ್ತು ಪರಿವರ್ತಿತ ಎರಡೂ ಮಾದರಿಯ ಚಿಂತನೆಗಳನ್ನು ಮುಖಾಮುಖಿಯಾಗಿಸಲಾಗಿದೆ.

ಸಾರಾ ಅವರ 'ಉರಿಬಿಸಿಲು' ಕಥೆಯಲ್ಲಿ ವಿದ್ಯಾಭ್ಯಾಸದ ದಿನಗಳಲ್ಲಿ ತನ್ನ ತಾಯಿಯ ಮೇಲೆ ತಂದೆಯಿಂದಾದ ದೌರ್ಜನ್ಯವನ್ನು ಕಂಡು ಬೆಳೆದವಳು ಅಮೀನಾ. "ಇನ್ನೇನು ಹೆಂಗಸರೆಂದರೆ ಪ್ರಾಣಿಗಳೂಂತ ತಿಳಿದುಕೊಳ್ತಾರಲ್ಲ ಈ ಗಂಡಸರು? ಅವರು ಪ್ರಾಣಿಗಳಲ್ಲ, ಅವರೂ ನಿಮ್ಮಂತೆಯೇ ಮನುಷ್ಯರು ಎಂಬುದನ್ನು ನನ್ನ ಬರವಣಿಗೆಯ ಮೂಲಕ ತಿಳಿಸುತ್ತೇನೆ"[೩೮] ಎನ್ನುವ ಆದರ್ಶ ಹೊಂದಿದ ಅಮೀನಾಳನ್ನು ಕಾಣಲು ಕಥಾನಾಯಕಿ ಬರುತ್ತಾಳೆ. ಈ ಹೊತ್ತಿಗೆ ಅಮೀನಾ ಪತಿಪೀಡಕಿ, ದುರಾಸೆಯವಳು ಎಂದು ಪ್ರಚಲಿತವಾಗಿದ್ದ ವಿಚಾರ ಕಥಾನಾಯಕಿಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ಆದರೆ ವಾಸ್ತವದಲ್ಲಿ ಅತ್ಯಂತ ಪ್ರಗತಿಪರ ವಿಚಾರಗಳನ್ನು ಹೊಂದಿದ್ದ ಅಮೀನಾಳನ್ನು ಗಂಡನ ಜುಗಾರಿ ಹುಚ್ಚು, ಅತ್ತೆಯ ಕಟು ಮಾತುಗಳು ಕಂಗೆಡುವಂತೆ ಮಾಡಿರುತ್ತವೆ. ಇದನ್ನು ಅರಿತ ಕಥಾನಾಯಕಿಗೆ ಈ ಬಗೆಯ ಶೋಷಣೆಯೆಸಗುವ ಗಂಡಿಗೆ ಕಠಿಣ ಕಾನೂನು ಜಾರಿಗೊಳಿಸುವಲ್ಲಿಯೂ ತಾರತಮ್ಯ ಏಕೆ? ಎಂಬುದು ಪ್ರಶ್ನೆಯಾಗಿ ಕಾಡುತ್ತದೆ.

'ಸಹನಾ' ಕಾದಂಬರಿಯಲ್ಲಿ ಮನೆಗೆಲಸ, ನಿರಂತರ ಹೆರಿಗೆ, ದಣಿವಿಲ್ಲದ ದುಡಿಮೆಗಳು ನಸೀಮಾಳನ್ನು ರೋಗಿಯಾಗಿಸುತ್ತವೆ. ಇದರಿಂದ ತನ್ನ ದುಡಿಯುವ ಶಕ್ತಿ, ದೇಹದ ಆಕರ್ಷಣೆಯನ್ನು ಕಳೆದುಕೊಂಡು ಗಂಡನಿಂದ ತಿರಸ್ಕಾರಕ್ಕೆ ಒಳಗಾಗುತ್ತಾಳೆ. ಆಕೆಯ ಖಾಯಿಲೆಯನ್ನೇ ನೆಪ ಮಾಡಿಕೊಂಡು ಎರಡನೇ ಮದುವೆಯಾಗುವ ಪಾಷಾಗೆ ತಾಯಿಯ ಬೆಂಬಲವೂ ಸಿಗುತ್ತದೆ. ಮತ್ತೊಂದು ಕಡೆ ನಸೀಮಾ ತನ್ನ ಯಾತನೆಯ ಬದುಕನ್ನು ತಾಯಿಯ ಬಳಿ ಹೇಳಿಕೊಂಡಾಗ ಹೆಣ್ಣಾದ ನೀನು ಎಲ್ಲವನ್ನು ತಾಳಿಕೊಂಡು ಸಹನಾಮಯಿಯಾಗಿರು ಎಂದು ಸಲಹೆ ದೊರೆಯುತ್ತದೆ. ಸಾವಿನ ಹಂತ ತಲುಪಿದ ನಸೀಮಾ ತಾಯಿಯ ಆರೈಕೆಯಲ್ಲಿ ಗುಣಮುಖಳಾದಾಗ, ಮತ್ತೆ ಗಂಡನ ಮನೆಗೆ ಹೋಗಲು ನಿರಾಕರಿಸುತ್ತಾಳೆ. ಬದಲಾಗಿ ತವರಿನಲ್ಲಿಯೇ ದುಡಿದು ಸ್ವತಂತ್ರ ಬದುಕು ಕಟ್ಟಿಕೊಳ್ಳುತ್ತಾಳೆ. ಕೊನೆಯಲ್ಲಿ ತನ್ನ ಸ್ವಾರ್ಥಸಾಧನೆಗಾಗಿ ಹೆಂಡತಿಯನ್ನು ಮರಳಿ ಕರೆಯಲು ಬಂದ ಪಾಷಾಗೆ "ಒಂದು ವೇಳೆ ನೀವೇ ರೋಗಿಯಾಗಿ ಹಾಸಿಗೆ ಹಿಡಿದಿದ್ದು,

ನಾನು ಇನ್ನೊಬ್ಬನೊಡನೆ ಹೋಗಿದ್ದರೆ ಹೇಗಿರುತ್ತದೆಂದು ನೀವು ಯೋಚಿಸಿದ್ದೀರಾ?"[೩೭] ಎಂದು ಪ್ರಶ್ನಿಸುತ್ತಾಳೆ. ಅಷ್ಟೇ ಅಲ್ಲದೆ ನೀವಿಲ್ಲದೆಯೂ ನಾನು ಬದುಕಬಲ್ಲೆ ಎಂದು ಹೇಳುವ ಮೂಲಕ ಆತನೊಂದಿಗಿನ ವೈವಾಹಿಕ ಸಂಬಂಧವನ್ನು ನಿರಾಕರಿಸುತ್ತಾಳೆ.

'ಧರ್ಮಬಲೆ ಬೀಸಿದಾಗ' ಕಥೆಯಲ್ಲಿ ಗಂಡ ದೂರದ ಬೊಂಬಾಯಿಯಲ್ಲಿ ದುಡಿದರೆ ಮಕ್ಕಳು, ಸೊಸೆ, ಮೊಮ್ಮಕ್ಕಳ ಹೊಣೆ ಹೊತ್ತು ಖತೀಜಾ ಬಿ ಸಂಸಾರ ನಿಭಾಯಿಸುತ್ತಿದ್ದಳು. ಆಕೆಯನ್ನು ಯವ್ವನದ ದಿನಗಳಲ್ಲಿ ಬಯಸಿದ್ದ ಇಬ್ರಾಹಿಂ ಹಾಜಿ ಊರಿನ ಮಸೀದಿಯ ಜಮಾಅತ್ ಸಮಿತಿಯ ಅಧ್ಯಕ್ಷನಾಗುತ್ತಾನೆ. ಅಲ್ಲದೆ ವಯಸ್ಸಿನಲ್ಲಿ ತನಗಿಂತಲೂ ಅತೀ ಕಿರಿಯವಳಾದ ಖತೀಜಾ ಬಿ ಯ ಮಗಳನ್ನು ಮದುವೆ ಮಾಡಿಕೊಡುವಂತೆ ಒತ್ತಾಯಿಸುತ್ತಾನೆ. ಆದರೆ ಇದನ್ನು ಖತೀಜಾ ಪ್ರತಿಭಟಿಸಿದಾಗ ಈ ವಿಚಾರ ಆಕೆಯ ಮೇಲಿನ ದ್ವೇಷವಾಗಿ ಪರಿವರ್ತನೆಯಾಗುತ್ತದೆ. ಖತೀಜಾಳ ಮೇಲೆ ಕುಡಿತ, ವ್ಯಭಿಚಾರದ ಆರೋಪ ಹೊರಿಸಿ, ಬಹಿಷ್ಕಾರ ಹಾಕಿಸುತ್ತಾನೆ. ಇವುಗಳಿಗೆ ಹೆದರದ ಖತೀಜಾ ಬಿ ಗಂಡನ ಮೂಲಕ ಜಮಾ ಅತ್ ವಿರುದ್ಧ ಪೊಲೀಸ್‌ರಿಗೆ ದೂರು ದಾಖಲಿಸಿ ಕಾನೂನಿನ ಮೂಲಕ ಗೆಲುವು ಸಾಧಿಸುತ್ತಾಳೆ.

'ವಜ್ರಗಳು' ಕಾದಂಬರಿಯಲ್ಲಿ ಕಥಾನಾಯಕಿ ನಫೀಜ ಮೊದಲು ಬದ್ರುದ್ದೀನ್‌ನಿಂದ ವಿಚ್ಛೇದನ ಪಡೆದು, ನಂತರ ತಂದೆಯ ವಯಸ್ಸಿನ ಉಸ್ಮಾನರನ್ನು ಮದುವೆಯಾಗುತ್ತಾಳೆ. ಎರಡು ಕುಟುಂಬಗಳಲ್ಲಿದ್ದಾಗಲೂ ಹಗಲಿರುಳು ದುಡಿದು ಬದುಕು ಸವೆಸುತ್ತಾಳೆ. ಇಷ್ಟಾದರೂ ಕೊನೆಗೆ ಮೋಸಕ್ಕೆ ಒಳಗಾಗಿ ಮಕ್ಕಳು, ಗಂಡ ಎಲ್ಲರಿಂದಲೂ ದೂರವಾದಾಗ ಛಲ ಬಿಡದೆ ಅನಾಥ ಮಗುವನ್ನು ದತ್ತು ಪಡೆದು, ಹೈನುಗಾರಿಕೆಯಿಂದ ಸ್ವತಂತ್ರ ಬದುಕು ಕಟ್ಟಿಕೊಳ್ಳುತ್ತಾಳೆ.

ಗೀತಾ ಅವರ 'ಬದುಕು' ಕಾದಂಬರಿಯ ಬೆಳ್ಳಿ ತನ್ನ ಗಂಡ ಕೊಲೆ ಆಪಾದನೆಯಿಂದ ಜೈಲು ಸೇರಿದಾಗ, ಇಡೀ ಸಂಸಾರದ ಜವಾಬ್ದಾರಿ ಹೊರುತ್ತಾಳೆ. ಗಂಡನ ಬಿಡುಗಡೆಗಾಗಿ ಪ್ರಯತ್ನಿಸುತ್ತಾಳೆ. ದುಡಿಮೆಗಾಗಿ ಬುಟ್ಟಿ ಹೆಣೆಯುವ ಕೆಲಸ ಆಶ್ರಯಿಸಿ ವಿರೂಪಾಕ್ಷಗೌಡನ ದುರಾಕ್ರಮಣ, ಸಮಾಜದ ವ್ಯಂಗ್ಯ ಎಲ್ಲವನ್ನು ಸಹಿಸುತ್ತಾಳೆ. ಕೊನೆಗೆ ಗಂಡ ಬಿಡುಗಡೆಯಾದಾಗ ಆಕೆಯ ಬದುಕು ಸುಖಾಂತ್ಯವಾಗುತ್ತದೆ.

ಒಟ್ಟಾರೆ ನಸೀಮಾ ಹಾಗೂ ನಫೀಜ ಹೆಂಡತಿಯಾಗಿ ತಾವು ಅನುಭವಿಸಿದ ವೇದನೆಗಳನ್ನು ಛಲವನ್ನಾಗಿ ಮಾರ್ಪಡಿಸಿ ವೈವಾಹಿಕ ಜೀವನದ ಚೌಕಟ್ಟಿನಿಂದ ದೂರಾಗುತ್ತಾರೆ. ಅಲ್ಲದೆ ತಮ್ಮದೇ ಆದ ಸ್ವಾವಲಂಬಿ, ಸ್ವಾತಂತ್ರ್ಯದ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಅದೇ ರೀತಿ ಖತೀಜಾ ಬಿ ಕೌಟುಂಬಿಕವಾಗಿ ಸುರಕ್ಷಿತಗಳಾಗಿದ್ದರೂ ಧರ್ಮದ ಹೆಸರಿನಲ್ಲಿ ಸ್ವಾರ್ಥಕ್ಕಾಗಿ ನಡೆಯಬೇಕಿದ್ದ ಮೋಸವನ್ನು ಪತ್ತೆಹಚ್ಚುತ್ತಾಳೆ. ಕಾನೂನಿನ ರಕ್ಷಣೆಯ ಮೂಲಕ ತನ್ನ ಕುಟುಂಬವನ್ನು ಕಾಪಾಡಿ

ಕೊಳ್ಳುತ್ತಾಳೆ. ಇದೇ ರೀತಿ ಬೆಳ್ಳಿ ತನ್ನ ಗಂಡನ ಅನುಪಸ್ಥಿತಿಯಲ್ಲಿಯೂ ಸಮಾಜದ ವ್ಯಂಗ್ಯ, ಶೋಷಣೆ ಸಹಿಸಿ ಸ್ವಾವಲಂಬಿ ಬದುಕು ನಡೆಸುತ್ತಾಳೆ. ಹೀಗಾಗಿ ಈ ಎಲ್ಲ ಪಾತ್ರಗಳಲ್ಲೂ ಸ್ವಾವಲಂಬನೆ, ಕಾನೂನಿನ ಅರಿವು ಹೊಂದಿದ ಗೃಹಿಣಿಯ ಪ್ರಗತಿಪರ ಮಾದರಿಗಳನ್ನು ಗುರುತಿಸಬಹುದಾಗಿದೆ.

ವೈದೇಹಿಯವರ 'ಗೂಡಿನೊಳಗೊಂದು ಹಕ್ಕಿ' ಕಥೆಯಲ್ಲಿ ಕಥಾನಾಯಕಿ ತನ್ನ ಗಂಡ ಆಫೀಸಿಗೆ ಹೋಗುವಾಗ ಹೊರಗಿನಿಂದ ಬೀಗ ಹಾಕಿಸಿಕೊಂಡು ನಾಲ್ಕು ಗೋಡೆಗಳ ನಡುವೆ ಸ್ವತಂತ್ರ ಜಗತ್ತನ್ನು ಕಾಣಲು ಬಯಸುತ್ತಾಳೆ. ತಾನು ಒಳಗಿರುವುದು ಯಾರಿಗೂ ತಿಳಿಯಕೂಡದು ಎಂದು ಗಂಡ ಕೊಟ್ಟ ಸೂಚನೆಯಿಂದಾಗಿ ಆಕೆಯ ಮಾತು, ಹಾಡು, ಕೆಮ್ಮು ಎಲ್ಲವುಗಳ ಮೇಲೂ ನಿರ್ಬಂಧವೆನಿಸುತ್ತದೆ. ತಾನೊಬ್ಬಳೇ ಇದ್ದರೂ ಸಹ ಪಂಜರದಲ್ಲಿ ತಿರುಗಾಡುವ ಬೋನಿಗೆ ಹಾಕಿದ ಹುಲಿಯಂತೆ ಎನಿಸುತ್ತದೆ. ಇದರಿಂದ ಮನೆಯ ಒಳಗೆ ತನಗೆ ಸಿಕ್ಕ ಸ್ವಾತಂತ್ರ್ಯವೇ ಅಲ್ಲವೆನಿಸಿದ್ದು, ಅದಕ್ಕಾಗಿ "ಈ ನಾಲ್ಕು ಗೋಡೆಯೊಳಗೆ ತಾನು ಹೇಗೆ ತಿರುಗಿದರೇನು? ತಿರುಗುವ ಸಂತೋಷ ಬಂಧನವೇ ಇಲ್ಲದ ಸಂತೋಷ, ತಾನು ಪಡೆಯಬೇಕಾದರೆ ಬಾಗಿಲು ತೆರೆದು ಬೀದಿಗಿಳಿಯಬೇಕು. ಮೈ ಬೀಸಾಗಿ ನಡೆದು ಹೋಗಬೇಕು. ಬೇಕಾದಂತೆ ಓಡಿಯಾಡಬೇಕು. ತಾನು ಫ್ರೀಯಾಗಿ ಓಡಾಡುವುದನ್ನು ಹರಿಣ, ಮುದುಕಿ, ಹುಡುಗಿ ಎಲ್ಲ ನೋಡಬೇಕು. ಹೀಗೆ ಅವರಿಗೆಲ್ಲ ಹೆದರುತ್ತ ಗುಟ್ಟಿನಲ್ಲಿ ಅನುಭವಿಸಿದ ಭ್ರಾಂತಿಗೊಳಗಾಗುತ್ತ ಹೋದರೆ ಏನು ರುಚಿ? ಯಾವ ಸುಖ?........"[೩೮] ಎಂದು ಹೇಳಿಕೊಳ್ಳುತ್ತಾಳೆ.

ಇಲ್ಲಿ ಗಂಡ ತನಗೆ ಕೊಡುವ ಸ್ವಾತಂತ್ರ್ಯವೇ ಆಕೆಗೆ ಬಂಧನವೆಂಬಂತೆ ಭಾರವಾಗುತ್ತದೆ. ಕಾರಣ ಗಂಡ ಮತ್ತು ಸಮಾಜದ ಅನುಪಸ್ಥಿತಿಯಲ್ಲಿಯೂ ಪಿತೃಸಂಸ್ಕೃತಿಯ ಮೌಲ್ಯಗಳು, ಧೋರಣೆಗಳು ಆಕೆಯನ್ನು ಆವರಿಸಿವೆ. ಹಾಗಾಗಿ ಸ್ಥಾಪಿತ ಭಾಷೆಯಲ್ಲಿ ಸ್ವಾತಂತ್ರ್ಯ ಎಂಬುದು ಸಹ ಲಿಂಗಾಕಿತವೇ ಎಂದು ಸುಮಿತ್ರಾಬಾಯಿಯವರು ಹೇಳುತ್ತಾರೆ. "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂದು ಹೇಳುತ್ತಾ ಬಂದಿರುವ ನಮ್ಮ ಸಮಾಜದಲ್ಲಿ ಹೆಣ್ಣಿಗೆ ಸ್ವಾತಂತ್ರ್ಯದ ಹೆಸರಿನಲ್ಲಿ ನೀಡುವ ಮರ್ಯಾದೆ, ಅವಕಾಶ ಎಲ್ಲವುಗಳಲ್ಲಿಯೂ ಪುರುಷಾಧಿಕಾರ, ಸೂಕ್ಷ್ಮ ರೀತಿಯಲ್ಲಿಯಾದರೂ ಅಸ್ತಿತ್ವ ಹೊಂದಿರುತ್ತದೆ ಎಂಬುದನ್ನು ಇಲ್ಲಿನ ಕಥೆಗಳಲ್ಲಿ ಗ್ರಹಿಸಲಾಗಿದೆ.

### ೪.೩.೨. ಬಹುಪತ್ನಿತ್ವ

ವೈವಾಹಿಕ ಸಂಸ್ಥೆಗೆ ಸಂಬಂಧಿಸಿದಂತೆ ಈ ಕಾಲಮಾನದ ಲೇಖಕಿಯರು ಪ್ರತಿನಿಧೀಕರಿಸಿದ ಸ್ತ್ರೀ ಮಾದರಿ ಪಾತ್ರಗಳ ಮೂಲಕ ಬಹುಪತ್ನಿತ್ವವನ್ನು ಕುರಿತಾಗಿ ಗಂಭೀರ ನೆಲೆಯ ಚಿಂತನೆಗಳು ನಡೆದಿವೆ. ವೈವಾಹಿಕ ಬದುಕಿನ ದಾಂಪತ್ಯ ನಿಷ್ಠೆಯನ್ನು ಮೀರಿ ಗಂಡು ಮತ್ತೊಂದು

ಮದುವೆಯಾಗುವ ಮೂಲಕ ಹೆಣ್ಣಿಗೆ ಎದುರಾಗುವ ಸವಾಲುಗಳು, ಭಾವನಾತ್ಮಕ ತಲ್ಲಣಗಳು, ಜೀವನ ನಿರ್ವಹಣೆಯ ಸಂಕಷ್ಟ ಇತ್ಯಾದಿ ಸ್ತ್ರೀ ಮಾದರಿಗಳನ್ನು ಇಲ್ಲಿ ಅನುಲಕ್ಷಿಸಲಾಗಿದೆ.

ಬಹುಪತ್ನಿತ್ವವನ್ನು ಹಿಂದೆ ರಾಜಪ್ರಭುತ್ವದ ಲಕ್ಷಣವನ್ನಾಗಿ ಪರಿಭಾವಿಸಲಾಗಿತ್ತು. ವಿವಾಹ ಎನ್ನುವುದು ಗಂಡು-ಹೆಣ್ಣಿನ ಲೈಂಗಿಕ ಸಂಬಂಧವನ್ನು ನಿಯಮಬದ್ಧವಾಗಿ ಅನುಮೋದಿಸಿ ಜೀವಪಾಲನೆಗಾಗಿ ಹಾಕಿಕೊಂಡ ಚೌಕಟ್ಟು. ಆದರೆ ಈ ಚೌಕಟ್ಟಿನ ಆಚೆಗೆ ಬರದಂತೆ ಹೆಣ್ಣಿಗೆ ಮೌಲ್ಯಗಳ ವೈಭವೀಕರಣವನ್ನು ಹೇರಲಾಗಿದೆ. ಆದರೆ ಗಂಡಿಗೆ ಬಹುಪತ್ನಿತ್ವದ ಮೂಲಕ ಇದನ್ನು ಮೀರುವ ಅವಕಾಶ ಕಲ್ಪಿಸಲಾಗಿದೆ. "ಬಹುಪತ್ನಿತ್ವವು ಗುಲಾಮಗಿರಿಯ ಪ್ರತೀಕವೆಂದೂ ಇದು ಮಾತೃ ಅಧಿಕಾರವನ್ನು ಅಳಿಸಿಹಾಕಿದ ನಂತರದ ಬಹುಮುಖ್ಯ ಬೆಳವಣಿಗೆಯೆಂದು" ಏಂಗೆಲ್ಸ್ ಹೇಳುತ್ತಾರೆ. ಹಾಗಾಗಿ ಮಾತೃ ಪ್ರಧಾನತೆಯಿಂದ ಪಿತೃ ಪ್ರಧಾನತೆಗೆ ಪ್ರಾಮುಖ್ಯತೆ ದೊರೆಯುತ್ತಲೇ ಬಹುಪತ್ನಿತ್ವವನ್ನು ಮತ್ತಷ್ಟು ಸಮರ್ಥಿಸಿಕೊಳ್ಳಲಾಯಿತು. ಅಲ್ಲದೆ ಇದಕ್ಕೆ ಶಾಸ್ತ್ರ, ಧರ್ಮ, ಸಾಮಾಜಿಕ ಸಮ್ಮತಿಯನ್ನೂ ಕಲ್ಪಿಸಲಾಗಿದೆ.

ಸಾರಾ ಅವರ 'ಸಹನಾ' ಕಾದಂಬರಿಯಲ್ಲಿ ನಸೀಮಳ ಖಾಯಿಲೆಯನ್ನು ನೆಪ ಮಾಡಿಕೊಂಡು ಆಕೆಯ ಗಂಡ ಮತ್ತೊಂದು ಮದುವೆಯಾಗುತ್ತಾನೆ. ನಸೀಮಾ ತಾನು ಬದುಕಿರುವವರೆಗೂ ಎರಡನೆಯ ಮದುವೆ ಆಗದಂತೆ ಬೇಡಿಕೊಳ್ಳುತ್ತಾಳೆ. ಆದರೆ "ನಾನು ನಿನಗೆ ತಲಾಖ್ ಕೊಡುತ್ತಿಲ್ಲವಲ್ಲ? ಇಸ್ಲಾಂ ಧರ್ಮಕ್ಕೆ ವಿರುದ್ಧವಾದುದೇನಾದರೂ ಮಾಡುತ್ತಿದ್ದೇನೆಯೇ?"[೩೯] ಎಂದು ಹೇಳುವ ಮೂಲಕ ತನ್ನ ಕೃತ್ಯವನ್ನು ಸಮರ್ಥಿಸಿಕೊಳ್ಳುತ್ತಾನೆ. ಇದೇ ಮಾದರಿಯ ಪಾತ್ರ 'ಸುಳಿಯಲ್ಲಿ ಸಿಕ್ಕವರು' ಕಾದಂಬರಿಯಲ್ಲಿ ಸಹ ಬರುತ್ತದೆ. ರುಖಿಯಾ ಇದ್ದಾಗಲೂ ಎರಡನೆಯ ಮದುವೆಯಾಗುವ ಮುಮ್ಮಟಿ ಹಾಜಿಗೆ ಇಬ್ಬರೊಂದಿಗೂ ಸಂಸಾರ ನಡೆಸುವುದು ಧರ್ಮ ಹಾಗೂ ಸಮಾಜ ವಿರೋಧಿಯಾಗಿ ಕಾಣಿಸುವುದಿಲ್ಲ. ಇದರಿಂದ ರುಖಿಯಾ ನೊಂದುಕೊಂಡಾಗ ಆತನ ಆಲೋಚನೆಗಳಿಗೆ ಇಂಬು ನೀಡುವಂತೆ "ನೀನ್ಯಾಕೆ ಅಳುತ್ತಿ? ಅವನು ನಿನಗೇನಾದರೂ ಕಮ್ಮಿ ಮಾಡಿದ್ದಾನಾ? ಇಲ್ಲ ನಿನ್ನನ್ನು ಹೊರ ಹಾಕಿದ್ದಾನಾ? ಗಂಡಸು ಒಂದಲ್ಲ ನಾಲ್ಕು ಮದುವೆ ಮಾಡಿಕೊಳ್ಳಬಹುದು ಅಂತ ಶಾಸ್ತ್ರವೇ ಹೇಳುವುದಿಲ್ಲವಾ?"[೪೦] ಎಂದು ಆಕೆಯ ತಾಯಿ ಗದರುತ್ತಾಳೆ.

'ಉರಿಬಿಸಿಲು' ಕಥೆಯ ಅಮೀನಾ ವಿದ್ಯಾವಂತೆ, ವಿಚಾರಪರಳು. ಆದರೆ ಗಂಡನ ಎಲ್ಲ ಶೋಷಣೆಗಳನ್ನು ಪ್ರಶ್ನಿಸಿದ್ದೇ ಆಕೆಗೆ 'ಪತಿಪೀಡಕ'ಳು ಎಂಬ ನಿಂದನೆಗೆ ಗುರಿಮಾಡುತ್ತದೆ. 'ಕುಟುಂಬ ನಿಯಂತ್ರಣ' ಯೋಜನೆ ಅಳವಡಿಸಿಕೊಳ್ಳುವ ಸಲಹೆ ನೀಡಿದ್ದೇ ನೆಪ ಮಾಡಿಕೊಂಡು ಗಂಡ ಮತ್ತೊಂದು ಮದುವೆಯಾಗುತ್ತಾನೆ. ಇದರೊಟ್ಟಿಗೆ ಅಮೀನಾಳ ಅತ್ತೆ ಮತ್ತು ಗಂಡ

ಆಕೆಯ ಕಿರುಕುಳದಿಂದಲೇ ಎರಡನೆಯ ಮದುವೆಯಾದದ್ದು ಎಂದು ಸುತ್ತಲಿನ ಜನರನ್ನು ನಂಬಿಸುತ್ತಾರೆ. 'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳ ಗಂಡ ಬದ್ರುದ್ದೀನ್ ಆಕೆಗೆ ಪಟ್ಟಣದ ಜೀವನ ಶೈಲಿ, ನಯ-ನಾಜೂಕು ತಿಳಿಯದೆಂಬ ಕಾರಣಕ್ಕೆ ಮತ್ತೊಂದು ಮದುವೆಯಾಗುತ್ತಾನೆ. ಹೀಗೆ ಸಾರಾ ಅವರ ಈ ಮೇಲಿನ ಕಥೆ-ಕಾದಂಬರಿಗಳಲ್ಲಿ ಹೆಂಡತಿಯ ಖಾಯಿಲೆ, ವೈಚಾರಿಕ ಚಿಂತನೆ, ನಡೆ-ನುಡಿ ಇತ್ಯಾದಿ ಕಾರಣಗಳನ್ನು ನೆಪವಾಗಿಸಿ ಇಲ್ಲಿನ ಪುರುಷ ಪಾತ್ರಗಳು ಮರುಮದುವೆಯನ್ನು ಏರ್ಪಡಿಸಿಕೊಳ್ಳುತ್ತವೆ.

ಬಹುಪತ್ನಿತ್ವಕ್ಕೆ ಸಂಬಂಧಿಸಿದಂತೆ ಮತ್ತೊಂದು ಆಯಾಮವನ್ನು ನೋಡುವುದಾದರೆ, ಸಾರಾ ಅವರ 'ಜನನ', ಲಲಿತಾ ನಾಯಕ್ ಅವರ 'ನೆಲೆ-ಬೆಲೆ', 'ಮರುಮದುವೆ' ಗೀತಾ ಅವರ 'ಬದುಕು' ಕಾದಂಬರಿಗಳಲ್ಲಿ ಮಕ್ಕಳಾಗಲಿಲ್ಲ, ಅದರಲ್ಲೂ ಗಂಡು ಸಂತಾನ ವಾಗಲಿಲ್ಲವೆಂಬ ಕಾರಣದಿಂದ ಎರಡನೆಯ ಮದುವೆಗಳು ನೆರವೇರುತ್ತವೆ. ಲಲಿತಾನಾಯಕ್ ಅವರ 'ಮರುಮದುವೆ' ಕಥೆಯಲ್ಲಿ ಗೌರಿಯ ಅತ್ತೆ "ಗೌರಿಗೆ ಇನ್ನು ಮಕ್ಕಳ ಫಲವಿಲ್ಲ. ಹುಟ್ಟಿರೋದು ಹೆಣ್ಣು ಹುಡುಗಿ ನಾಳೆ ಲಗ್ನ ಆಗಿ ಗಂಡನ ಮನೆಗೆ ಹೊರಟು ಹೋದ್ರೆ ಮುಂದೆ ನಮ್ಮ ಮನೆತನ ಬೆಳೆಯೋದು ಹೆಂಗೆ? ಎಲ್ಲಾರ ಒಂದು ಕಡೆ ವೈನಾದ ಹೆಣ್ಣನ್ನ ನೋಡಿ ಲಗ್ನ ಮಾಡಿಕೊಂಬಿಡಪ್ಪ. ನಾವು ಸಾಯೋದ್ರೊಳಗೆ ಒಬ್ಬ ಮೊಮ್ಮಗನ್ನಾರ ಕಾಣ್ತೀವಿ"[೪೧] ಎಂದು ಎರಡನೆಯ ಮದುವೆಗೆ ಮಗನನ್ನು ಪ್ರೋತ್ಸಾಹಿಸುತ್ತಾಳೆ. ಈ ಮೂಲಕ 'ಬಹುಪತ್ನಿತ್ವ'ವನ್ನು ಸಮರ್ಥಿಸುವಲ್ಲಿ ತಾಯಿ, ಅತ್ತೆಯಂತಹ ಸಿದ್ಧಮಾದರಿಗಳ ಮೇಲೂ ಪುರುಷವರ್ಗ ಪ್ರಭಾವಿಸಿದ ಬಗೆಯನ್ನು ಅರ್ಥೈಸಿಕೊಳ್ಳಲಾಗಿದೆ.

ವೀಣಾ ಅವರ 'ಶೋಷಣೆ, ಬಂಡಾಯ ಇತ್ಯಾದಿ'ಯಲ್ಲಿ ತನಗೊಬ್ಬ ಹೆಂಡತಿ, ಮಕ್ಕಳಿದ್ದೂ ಕಮಲಳನ್ನು ಮದುವೆಯಾಗುವ ಶಿವಮೂರ್ತಿ ಹಾಗೂ ಮನೆ ಕೆಲಸದ ರೋಶನ್ ಬಿಯ ಗಂಡ ಇಬ್ಬರೂ ಮತ್ತೊಂದು ಮದುವೆಯನ್ನು ಏರ್ಪಡಿಸಿಕೊಳ್ಳುತ್ತಾರೆ. ಇದಕ್ಕೆ ಕಾರಣ ಅವರ ಸುಖಲೋಲುಪತೆಗಳಾಗಿವೆ. ಇಂತಹದೇ ವಸ್ತುವನ್ನು ವೈದೇಹಿಯವರು 'ಪುಟ್ಟಹಕ್ಕಿ ಮತ್ತು ಆಕಾಶರಾಯ' ಕಥೆಯಲ್ಲಿ ತರುತ್ತಾರೆ. ಪುಟ್ಟಹಕ್ಕಿಯನ್ನು ಬಿಟ್ಟು ಆಕಾಶರಾಯನಿಗೆ ಬೇರೊಂದು ಹಕ್ಕಿಯ ಕಡೆಗೆ ಆಕರ್ಷಣೆಯಾಗಿದೆ. ಇದರಿಂದ ಪುಟ್ಟಹಕ್ಕಿ ಆಘಾತಕ್ಕೊಳಗಾಗಿದೆ ಎಂದು ಹೇಳುವಲ್ಲಿ ಮರುಮದುವೆಯನ್ನು ಸಾಂಕೇತಿಕವಾಗಿ ನಿರೂಪಿಸುತ್ತಾರೆ.

ಒಟ್ಟಾರೆ 'ಬಹುಪತ್ನಿತ್ವ' ಸಾಮಾಜಿಕವಾಗಿ ಒಪ್ಪಿತ ಸಂಗತಿಯಾಗಿದ್ದೇ ಅಲ್ಲದೆ, ಅನೇಕ ಸಂದರ್ಭಗಳಲ್ಲಿ ಹೆಣ್ಣನ್ನೇ ಇದಕ್ಕೆ ಕಾರಣಕರ್ತಳನ್ನಾಗಿ ಆರೋಪಿಸಲಾಗುತ್ತದೆ. ಸಾಮಾನ್ಯವಾಗಿ ಮಕ್ಕಳಿಲ್ಲದಿರುವುದು, ಲೋಲುಪತೆ, ಪ್ರತಿಷ್ಠೆ ಮುಂತಾದವುಗಳು ಬಹುಪತ್ನಿತ್ವಕ್ಕೆ ಕಾರಣವಾಗುವ

ಸಂಗತಿಗಳೆಂಬುದು ಮೇಲಿನ ಕತೆಗಳ ವಿಶ್ಲೇಷಣೆಯಿಂದ ತಿಳಿದುಬರುತ್ತದೆ. ಆದರೆ ಹೆಣ್ಣು ಇದೇ ಬಗೆಯ ಮರುವಿವಾಹದ ಬದುಕನ್ನು ಆರಿಸಿಕೊಂಡರೆ, ಆಕೆಯ ಮೇಲಾಗುವ ಶೋಷಣೆ ಬೇರೊಂದು ಸ್ವರೂಪ ಪಡೆದುಕೊಳ್ಳುತ್ತದೆಂಬುದನ್ನು ಸಹ ಇಲ್ಲಿನ ಅನೇಕ ಕಥೆಗಳು ನಿರೂಪಿಸುತ್ತವೆ. ಸಾರಾ ಅವರ 'ವಜ್ರಗಳು' ಕಾದಂಬರಿಯ ನಫೀಜಾ ತಂದೆಯ ವಯಸ್ಸಿನ ವ್ಯಕ್ತಿಯನ್ನು ಮದುವೆಯಾದಾಗ ಅದೇ ಪರಿಚಾರಿಕೆಯ ಕೆಲಸಗಳು ಮುಂದುವರೆಯುತ್ತವೆ. ಕೊನೆಗೆ ಮಲ ಮಕ್ಕಳಿಂದಲೇ ನೆಲೆ ತಪ್ಪುವಂತಾಗುತ್ತದೆ. ಗೀತಾ ಅವರ 'ಆಸರೆಗಳು' ಕಾದಂಬರಿಯಲ್ಲಿ ಮಾನಿಂಗ ತನ್ನ ಮಗಳು ತಾಳವ್ವನಿಗೆ ಕೂಡಿಕೆ(ಎರಡನೆ ಮದುವೆ) ಮಾಡಿಕೊಟ್ಟಾಗ ಆಕೆಯ ಬದುಕು ಮತ್ತಷ್ಟು ದುರಂತವಾಗುತ್ತದೆ. ಆದರೆ ಗಂಡಿಗೆ ಮಾತ್ರ ಇದೇ ಸಂದರ್ಭದಲ್ಲಿ ಧರ್ಮ, ನೀತಿ, ಕಾನೂನು ಎಲ್ಲವೂ ಅನುಕೂಲಸಿಂಧುವಾಗಿಯೇ ಇರುತ್ತದೆ. ಈ ಬಗೆಯ ಪುರುಷ ಅಧಿಕಾರವನ್ನು ಚಲಾಯಿಸಲು, ಮುಂದುವರೆಸಲು ಮಾಧ್ಯಮವಾಗಿ ತಾಯಿ, ಅಜ್ಜಿ, ಅತ್ತೆ ಇತ್ಯಾದಿ ರೂಪದಲ್ಲಿ ಹೆಣ್ಣೇ ನಿಂತಿರುವುದು ಇಲ್ಲಿನ ಕಥೆಗಳಲ್ಲಿ ನಿರೂಪಿತವಾಗಿದೆ. ಇದಕ್ಕೆ ಕಾರಣ ಪಿತೃಪ್ರಧಾನ ವ್ಯವಸ್ಥೆ, ಮೌಲ್ಯ, ಪಾವಿತ್ರ್ಯತೆ, ವೈಭವೀಕರಣಗಳ ಮೂಲಕ ಹೆಣ್ಣನ್ನೇ ತನ್ನ ಸ್ವಹಿತಾಸಕ್ತಿಗಳ ಪೋಷಕ ಶಕ್ತಿಯಾಗಿ ಬಳಸಿಕೊಳ್ಳುತ್ತಾ ಬಂದಿರುವುದು. ಹಾಗಾಗಿಯೇ ವ್ಯವಸ್ಥೆಯ ವಿರುದ್ಧ ಹೆಣ್ಣು ದನಿಯೆತ್ತಿದಾಗ, ಬಂಡಾಯವೆದ್ದಾಗ ಪ್ರಶ್ನಿಸಿದಾಗ ಇದೇ ಪೋಷಕ ಶಕ್ತಿಯ ಮೂಲಕ ತೀರಾ ಸಹಜ ರೀತಿಯಲ್ಲಿ ನಿಯಂತ್ರಣ ಹೇರುತ್ತದೆ. ಇದಕ್ಕೆ ಉದಾಹರಣೆಯಾಗಿ ಅನೇಕ ಸ್ತ್ರೀ ಮಾದರಿ ಪಾತ್ರಗಳು ಪ್ರಸ್ತುತ ಕಥಾಸಾಹಿತ್ಯದ ಅಧ್ಯಯನದಲ್ಲಿ ಕಾಣಸಿಗುತ್ತವೆ.

### ೪.೪. ವಿವಾಹೇತರ ಮಾದರಿ ಪಾತ್ರ ವಿವೇಚನೆ–ದೇವದಾಸಿ–ವೇಶ್ಯೆ, ವಿವಾಹಬಾಹಿರ ಸಂಬಂಧಗಳು

ವಿವಾಹ ಮತ್ತು ಕೌಟುಂಬಿಕ ಸಂಸ್ಥೆಯಲ್ಲಿ 'ಶೀಲ'ದ ಮೌಲ್ಯ, ನಿಯಮಗಳನ್ನು ದೇಹ ಕೇಂದ್ರಿತ ನೆಲೆಯಲ್ಲಿಯೇ ಗುರುತಿಸಿ, ಹೆಣ್ಣಿನ ಮೇಲೆ ಕಟ್ಟುನಿಟ್ಟಾಗಿ ಹೇರಲಾಗಿದೆ. ಆದರೆ ಗಂಡಿಗೆ ಮಾತ್ರ ಈ ಮೌಲ್ಯಗಳಿಂದ ವಿನಾಯಿತಿಯನ್ನು ಕಲ್ಪಿಸಲಾಗಿದೆ. ಗಂಡು 'ಶೀಲ'ದ ಮೌಲ್ಯವನ್ನು ಮೀರಿದಾಗಲೂ ಅಪರಾಧಿಯಲ್ಲ ಮತ್ತು ಪ್ರಶ್ನಾರ್ಹನಲ್ಲ. ಬದಲಾಗಿ ಆತ ಅನಧಿಕೃತವಾಗಿ ಸಂಬಂಧ ಹೊಂದುವ ಹೆಣ್ಣಿಗೆ 'ವೇಶ್ಯೆ', 'ದೇವದಾಸಿ', 'ಸೂಳೆ', 'ಬಸವಿ' ಎಂಬ ಹೆಸರಿನಲ್ಲಿ ಶೋಷಿಸಲಾಗುತ್ತದೆ. ಆದರೆ ಗಂಡು ಮಾತ್ರ ತನ್ನ ಪುರುಷತ್ವ ಪ್ರದರ್ಶನದ ಹೆಮ್ಮೆಯಿಂದ ಬೀಗುತ್ತಾನೆ. 'ಶೀಲ' 'ಪಾವಿತ್ರ್ಯತೆ'ಯ ಸಾಮಾಜಿಕ ಮೌಲ್ಯ ಒಂದೇ ಆದರೂ ಗಂಡು–ಹೆಣ್ಣಿನ ನಡುವೆ ಪಕ್ಷಪಾತದ ನಿಲುವನ್ನು ಪ್ರದರ್ಶಿಸುತ್ತಾ ಬರಲಾಗಿದೆ.

ಹೆಣ್ಣಿನ ಲೈಂಗಿಕತೆಗೆ ಪಾವಿತ್ರ್ಯತೆಯ ಮೌಲ್ಯವನ್ನು ಆರೋಪಿಸಿ ವಿವಾಹ ಸಂಸ್ಥೆ ಹಾಗೂ ಅದರ ಆಚೆಗೂ ಆಕೆಯ ಲೈಂಗಿಕತೆಯನ್ನು ನಿರ್ಬಂಧಿಸಲಾಗುತ್ತದೆ. ಈ ನಿರ್ಬಂಧವನ್ನು ಮುರಿಯುವ ಹೆಣ್ಣಿಗೆ ಅನೈತಿಕ, ಅಕ್ರಮ, ಅಪರಾಧಿಯ ಪಟ್ಟವನ್ನು ನೀಡಲಾಗುತ್ತದೆ. ಆದರೆ ವಿವಾಹ ಸಂಸ್ಥೆಯ ಮೂಲಕ ಮುಕ್ತ ಲೈಂಗಿಕತೆಯ ಅವಕಾಶವನ್ನು ಗಂಡು ಪಡೆದುಕೊಳ್ಳುತ್ತಾನೆ. ಇದರಾಚೆಗೂ ಲೈಂಗಿಕ ಸ್ವೇಚ್ಛೆಯನ್ನು ದಕ್ಕಿಸಿಕೊಳ್ಳಲು ಧರ್ಮ, ಆಚಾರ-ವಿಚಾರಗಳ ಹೆಸರಿನಲ್ಲಿ ವೇಶ್ಯೆ, ಬಸವಿ, ದೇವದಾಸಿಯಂತಹ ಪದ್ಧತಿಗಳನ್ನು ರೂಢಿಗೆ ತರಲಾಗಿದೆ. ಕೌಟುಂಬಿಕ ವಲಯದೊಳಗಿನ ಮಾದರಿಗಳಾದ ತಾಯಿ, ಗೃಹಿಣಿ, ಮಗಳು ಇತ್ಯಾದಿಗಳಂತೆ ಕುಟುಂಬದ ಹೊರಗಿನ ಸ್ಥಿರ ಮಾದರಿ ಪಾತ್ರಗಳಾಗಿ ವೇಶ್ಯೆ, ದೇವದಾಸಿ ಇತ್ಯಾದಿಗಳು ಪಿತೃ ಸಂಸ್ಕೃತಿಯಿಂದ ರೂಪಿಸಲ್ಪಟ್ಟಿವೆ. ಮತ್ತೊಂದು ಕಡೆ ವೇಶ್ಯೆ, ದೇವದಾಸಿಯಲ್ಲದಿದ್ದರೂ ವಿವಾಹಿತ ಮತ್ತು ಅವಿವಾಹಿತ ಹೆಣ್ಣುಗಳು ಬಹುತೇಕ ಸಂದರ್ಭಗಳಲ್ಲಿ ಬಡತನ, ದೌರ್ಜನ್ಯ, ಅಸಹಾಯಕತೆ, ಅತ್ಯಾಚಾರ, ಕುತಂತ್ರ ಇತ್ಯಾದಿಗಳಿಂದ ವಿವಾಹೇತರ ಸಂಬಂಧಗಳಿಗೆ ಒಳಗಾಗುತ್ತಾರೆ. ಹೀಗೆ ವೇಶ್ಯೆ, ದೇವದಾಸಿ ಮತ್ತು ವಿವಾಹೇತರದಂತಹ ಸಂಬಂಧಗಳಲ್ಲಿ ಹೆಣ್ಣು ಅನುಭವಿಸುವ ಮನೋ-ದೈಹಿಕ ಹಿಂಸೆ, ಭಾವನಾತ್ಮಕ ಸವಾಲು ಹಾಗೂ ಸಮಾಜದ ಧೋರಣೆಗಳು ಆಕೆಯನ್ನು ಮತ್ತಷ್ಟು ಶೋಷಿತಳನ್ನಾಗಿಸಿವೆ. ಈ ಬಗೆಯ ಪಾತ್ರಗಳು ಪ್ರಸ್ತುತ ಅಧ್ಯಯನದ ಪ್ರಾತಿನಿಧಿಕ ಲೇಖಕಿಯರ ಕಥಾ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡ ವಿಧಾನವನ್ನು ಪ್ರಾತಿನಿಧಿಕ ಕಥೆ-ಕಾದಂಬರಿಗಳನ್ನು ಆಧರಿಸಿ ವಿಶ್ಲೇಷಿಸಲಾಗಿದೆ.

### ೪.೪.೧. ದೇವದಾಸಿ-ವೇಶ್ಯೆ

ಜೈವಿಕ ಸಹಜವಾದ ಲೈಂಗಿಕ ಭಾವನೆಗಳಿಗೆ ಲಿಂಗಬೇಧವನ್ನು ಒಳಗೊಂಡ ಮೌಲ್ಯಗಳನ್ನು ಪಿತೃಪ್ರಧಾನತೆ ರೂಪಿಸಿದೆ. ತನ್ನ ಲೈಂಗಿಕ ಸ್ವಾತಂತ್ರ್ಯವನ್ನು ಪ್ರಕಟಿಸಲು ಸಾಧ್ಯವಾಗುವ ಹಲವಾರು ಆಚರಣೆ, ನಂಬಿಕೆಗಳನ್ನು ಧಾರ್ಮಿಕ ಚೌಕಟ್ಟಿಗೆ ಒಳಪಡಿಸಿ, ಸಾಮಾಜೀಕರಣಗೊಳಿಸಿ ಹೆಣ್ಣಿನ ದೇಹ ಮತ್ತು ಲೈಂಗಿಕತೆಯನ್ನು ನಿಯಂತ್ರಿಸಲಾಗಿದೆ. ಹೀಗೆ ರೂಪಿಸಿದ ಪದ್ಧತಿಗಳಲ್ಲಿ 'ದೇವದಾಸಿ' ಸಂಪ್ರದಾಯ ಪ್ರಮುಖವಾದುದು. ವಿವಾಹ ಆಚರಣೆಯ ಮೂಲಕ ಪಾತಿವ್ರತ್ಯತೆಯ ಬಂಧನಕ್ಕೆ ಒಳಗಾಗಿ ನರಳುವ ಹೆಣ್ಣು ಒಂದೆಡೆಯಾದರೆ, ಸಮಾಜಬಾಹಿರವಾಗಿ ವೇಶ್ಯೆ ದೇವದಾಸಿಯಾಗಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುವ ಹೆಣ್ಣು ಮತ್ತೊಂದೆಡೆ. ದುರಂತವೆಂದರೆ ಎರಡೂ ಕಡೆಗಳಲ್ಲಿಯೂ ಪುರುಷ ತನ್ನ ಸ್ವಹಿತಾಸಕ್ತಿ, ಅಧಿಕಾರಗಳನ್ನು ನಿರಂತರವಾಗಿ ಸಾಧಿಸುತ್ತಿದ್ದಾನೆಂಬುದಾಗಿದೆ.

ಕರ್ನಾಟಕ ಇತಿಹಾಸದ ಪ್ರಕಾರ ೬ನೇ ಶತಮಾನದ ವೇಳೆಗೆ ದೇವದಾಸಿ ಪದ್ಧತಿ ಪ್ರಚಲಿತವಾಗಿತ್ತು. ಪಟ್ಟದಕಲ್ಲಿನ 'ವಿರೂಪಾಕ್ಷ ಶಾಸನ'ದಲ್ಲಿ ಈ ಪದ್ಧತಿಯ ಪ್ರಥಮ ಉಲ್ಲೇಖ

ಸಿಗುತ್ತದೆ. ದೇವದಾಸಿಯರಲ್ಲಿ ತಮ್ಮನ್ನು ತಾವೇ ದೇವಾಲಯಕ್ಕೆ ಅರ್ಪಿಸಿಕೊಂಡು, ಅಲ್ಲಿನ ಸೇವಾ ಕಾರ್ಯಗಳಿಗೆ ತಮ್ಮನ್ನು ಮಾರಿಕೊಳ್ಳುವುದು, ತನ್ನ ಕುಟುಂಬ ಪೋಷಣೆಗಾಗಿ ದಾಸಿಯಾಗುವುದು, ನಾಟ್ಯ-ಗಾಯನ ಮೊದಲಾದ ಕೆಲಸ ನಿರ್ವಹಿಸುವುದು ಇತ್ಯಾದಿ ವಿಧಗಳಿವೆ. ಆದರೆ ಈ ಪದ್ಧತಿಗೆ ಒಳಗಾದ ಹೆಣ್ಣಿಗೆ ಸಮಾಜದಲ್ಲಿ ಅಂದು ಗೌರವಾರ್ಹತೆ ಇದ್ದುದಾಗಿಯೂ ತಿಳಿದುಬರುತ್ತದೆ. ಆದರೆ ಆಧುನಿಕ ಸಂದರ್ಭದ ಹೊತ್ತಿಗೆ ಈ ಪದ್ಧತಿಗಳು ಕೆಳವರ್ಗದ, ಅಸಹಾಯಕ, ನೊಂದ ಮಹಿಳೆಯರ ಲೈಂಗಿಕ ಶೋಷಣೆಯ ಮಾಧ್ಯಮವಾಗಿವೆ.

ಗೀತಾ ನಾಗಭೂಷಣ ಅವರ ಬಹುತೇಕ ಕಥೆ-ಕಾದಂಬರಿಗಳು ದೇವದಾಸಿ, ಜೋಗುತಿ, ವೇಶ್ಯಾ ಸಮಸ್ಯೆಯ ವಸ್ತು-ವಿಚಾರಗಳನ್ನಿಟ್ಟುಕೊಂಡು ರಚನೆಯಾಗಿವೆ. ಇವೆಲ್ಲವೂ ಹೆಣ್ಣು ಈ ಬಗೆಯ ಮಾದರಿಯಲ್ಲಿ ಅನುಭವಿಸುವ ಹಿಂಸೆ, ನೋವು, ಅಪಮಾನಗಳನ್ನು ದಾಖಲಿಸುತ್ತವೆ. ಇವುಗಳಲ್ಲಿ ಪ್ರಮುಖವಾದವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. 'ಮಾಪುರ ತಾಯಿಯ ಮಕ್ಕಳು' ಕಾದಂಬರಿಯಲ್ಲಿ ಹೊಲೆಯರ ಚಂದಪ್ಪನ ಮಗಳು ಸಿಂಗಾರಿ ಮಾವ ಶಿವರುದ್ರನಲ್ಲಿ ಅನುರಕ್ತಳಾಗುತ್ತಾಳೆ. ಇದೇ ವೇಳೆ ಚಿಂಚೂರಿನ ಮಾಪುರ ತಾಯಿಯ ಜಾತ್ರೆ ಬಂದಾಗ ಊರಿನ ಹೆಣ್ಣು ಮಕ್ಕಳನ್ನು ಜೋಗಿಣಿ ಬಿಡುವ ಚರ್ಚೆಯಾಗುತ್ತದೆ. ಪರಿಸ್ಥಿತಿಯ ಒತ್ತಡಕ್ಕೆ ಕಟ್ಟುಬಿದ್ದು ಸಿಂಗಾರಿಯನ್ನು ಜೋಗಿಣಿ ಬಿಡಲು ನಿರ್ಧರಿಸಲಾಗುತ್ತದೆ. ಶಿವರುದ್ರನ ಮೇಲಿನ ಜೀವ ಬೆದರಿಕೆಯಿಂದ ಸಿಂಗಾರಿಯೂ ಒಪ್ಪುತ್ತಾಳೆ. ಆದರೆ ವಿದ್ಯಾವಂತನಾದ ಶಿವರುದ್ರ ಸಿಂಗಾರಿ ಜೋಗಿಣಿಯಾಗುವುದನ್ನು ತಪ್ಪಿಸಲು ಹೊರಟಾಗ ಆತನ ಕೊಲೆಯಾಗುತ್ತದೆ. ಇದರಿಂದ ಜೋಗಿಣಿಯಾದರೂ ಸಿಂಗಾರಿ ಅರೆಹುಚ್ಚಿಯಂತಾಗುತ್ತಾಳೆ. ಮತ್ತೊಂದು ಕಡೆ ಕಲ್ಬುರ್ಗಿ ಜಿಲ್ಲೆಗೆ ಬರಗಾಲ ಬಂದೊದಗಿ ಹಸಿವು, ಬಡತನಕ್ಕೆ ಜನ ತತ್ತರಿಸುವಂತಾಗುತ್ತದೆ. ಇದರಿಂದ ಜೀವನ ಮಾರ್ಗವಾಗಿ "ಎಲ್ಲವೂ ಮಾರಾಟವಾಗುವ ಕಾಲ ಅದು. ಹೊಟ್ಟೆಗಾಗಿ ಹಳ್ಳಿಯ ಹರೆಯದ ಹೆಣ್ಣುಗಳ ಶೀಲ ಹರಾಜಾಗತೊಡಗಿತು. ಒಂದು ಹಿಡಿ ಅನ್ನಕ್ಕಾಗಿ ಮುಗ್ಧ ಹೆಣ್ಣುಗಳು ಬಾಜಾರಿನ ಬೀದಿಗಿಳಿದವು. ಹೆಂಗಸರ ಹೆಣ್ತನಕ್ಕೆ ಬೆಂಕಿಬಿದ್ದಿತು. ಮುಖದಲ್ಲಿನ ಮುಗ್ಧತೆ ಸುಟ್ಟು ಕರಕಲಾಯಿತು. ಇಲ್ಲಿಯ ಏರುಜವ್ವನೆಯರನ್ನು ಬೊಂಬಾಯಿಯ ವೇಶ್ಯಾವಾಟಿಕೆಗಳಿಗೆ, ಹೈದ್ರಾಬಾದಿನ ಮಂಜರಾಕೋಠಿಗಳಿಗೂ ರವಾನಿಸಲಾಯಿತು. ಬೊಂಬಾಯಿಯ ಕಾಮಟಿಪುರ, ಪಾರಸ್ ಸ್ಟ್ರೀಟ್, ಹೆಸರಾಂತ ಹೋಟೆಲುಗಳಲ್ಲೆಲ್ಲ ಇಲ್ಲಿಯ ಮುಗ್ಧ ಹೆಣ್ಣುಗಳ ಅರೆನಗ್ನ ದೇಹದ ಪ್ರದರ್ಶನ ಏರ್ಪಟ್ಟಿತು. ಹೊಟ್ಟೆಯ ಹಸಿವು ತಾಳದ ಹೆಣ್ಣುಗಳು ಕಾಮುಕ ಗಂಡುಗಳ ಮೈಯ ಹಸಿವೆಗೆ ಅನ್ನವಾದರು."[೪೨] ಹೀಗೆ ಲೇಖಕಿ ಹೆಣ್ಣು ಮಾರಾಟದ ಸರಕಾಗಿ ಹಸಿವು, ಬಡತನಗಳು ಹೆಣ್ಣನ್ನು ದೇಹ ನೆಲೆಯಲ್ಲಿ ಶೋಷಿತಗೊಳಿಸುವ ದುರಂತವನ್ನು ತಮ್ಮ ಮಾತುಗಳಲ್ಲಿ ಕಟ್ಟಿ ಕೊಡುತ್ತಾರೆ. ಈ ಪರಿಸ್ಥಿತಿಗೆ ಒಳಗಾದವರಲ್ಲಿ ಸಿಂಗಾರಿಯೂ ಹೊರತಾಗಿರಲಿಲ್ಲ. ಪರಿಣಾಮ

ಚಿಂಚೂರಿನಿಂದ ಬೊಂಬಾಯಿಯ ವೇಶ್ಯಾಗೃಹ ಸೇರುತ್ತಾಳೆ. ಚಿಂಚೂರಿನಲ್ಲಿ ಜೋಗಿಣಿಯಾಗಿದ್ದ ಸಿಂಗಾರಿ ಬೊಂಬಾಯಿಯಲ್ಲಿ ಚಮೇಲಿಯಾಗಿ ಸೇಠ್ ಚಮನ್‌ಲಾಲನಿಗೆ ಖಾಯಂ ಆಗಿ ಮಾರಾಟವಾದಳು. ಇದರಿಂದ ಸೇಠ್‌ನ ಸಂಪತ್ತಿಗೆ ಒಡತಿಯೂ ಆದಳು. ಮುಂದಿನ ದಿನಗಳಲ್ಲಿ ತನ್ನಂತೆ ವೇಶ್ಯಾದಂಧೆಯಲ್ಲಿ ಸಿಲುಕುವ ಹುಡುಗಿಯರನ್ನು ಕೊಂಡು ರಕ್ಷಿಸಿ ಮಹಿಳೆಯರ ಕಲ್ಯಾಣ ನಿಲಯಕ್ಕೆ ಸೇರಿಸಿ ಹೊಸ ಬದುಕನ್ನು ಕಲ್ಪಿಸುತ್ತಾಳೆ. ಹಾಗೆಯೇ ಇಪ್ಪತ್ತು ವರ್ಷಗಳ ನಂತರ ತನ್ನೂರಿಗೆ ಬಂದು ಬಲವಂತದ ಜೋಗಿಣಿ ಪದ್ಧತಿಗೆ ಒಳಗಾಗುತ್ತಿದ್ದ ಮಾದೇವಿಯನ್ನು ಕಾನೂನಿನ ನೆರವಿನಿಂದ ರಕ್ಷಿಸಿ, ಆಕೆಯ ಪ್ರಿಯಕರ ಶಂಕ್ರುವಿನೊಂದಿಗೆ ಮದುವೆ ಮಾಡಿಸುತ್ತಾಳೆ. ಕೊನೆಯಲ್ಲಿ ತಮ್ಮ ದಂಧೆಗೆ ಅಡ್ಡಿಯಾದಳೆಂದು ವಿರೋಧಿಗಳಿಂದ ಆಕೆಯ ಕೊಲೆಯಾಗುತ್ತದೆ.

ಬಲವಂತದ ಜೋಗಿಣಿ ಪದ್ಧತಿ, ವೇಶ್ಯಾವಾಟಿಕೆಗೆ ಸಿಲುಕಿ ಶೋಷಣೆಗೆ ಒಳಗಾದ ಸಿಂಗಾರಿ ತನ್ನಂತೆ ಇತರೆ ಹೆಣ್ಣಿಗೆ ಅನ್ಯಾಯವಾಗಬಾರದೆಂದು ಹೋರಾಟ, ಪ್ರಾಣತ್ಯಾಗಗಳಲ್ಲಿ ತನ್ನ ಕೊನೆಯ ಬದುಕನ್ನು ಸಾರ್ಥಕಗೊಳಿಸಿಕೊಳ್ಳುತ್ತಾಳೆ. ಈ ಬೆಳವಣಿಗೆ ಸಿಂಗಾರಿಯ ದಿಟ್ಟತನ, ಪ್ರಗತಿಪರ ಆಲೋಚನೆಯ ಸಂಕೇತವೇ ಆಗಿದೆ. ೧೯೮೨ರಲ್ಲಿ ರಾಜ್ಯ ಸರ್ಕಾರ ದೇವದಾಸಿ ಪದ್ಧತಿಯನ್ನು ನಿಷೇಧಿಸಿ, ಅಂತಹ ಕೃತ್ಯಗಳಲ್ಲಿ ತೊಡಗುವ, ಈ ಪದ್ಧತಿಗೆ ಪ್ರಚೋದನೆ ನೀಡುವವರ ವಿರುದ್ಧ ಕಠಿಣ ಕಾನೂನನ್ನು ರೂಪಿಸಿತು. ಪ್ರಸ್ತುತ ಕಥೆಯಲ್ಲಿ ಮಹಿಳಾ ದಶಕದಲ್ಲಿ ಜಾರಿಯಾದ ಇಂತಹದ್ದೊಂದು ಮಹತ್ವದ ಕಾಯ್ದೆಯೊಂದನ್ನು ಪ್ರಚುರಪಡಿಸಿದ್ದು ಗೀತಾ ಅವರ ವಿಶೇಷತೆಯಾಗಿದೆ.

ಗೀತಾ ಅವರ 'ಗಿರವಿ' ಕಥೆಯಲ್ಲಿ ಬರಗಾಲ ಮತ್ತು ಹೆಣ್ಣಿಗೆ ಸಂಬಂಧಿಸಿದ ವಿಭಿನ್ನ ಸನ್ನಿವೇಶ ಬರುತ್ತದೆ. ಗಿನ್ಯಾನಿಯ ಗಂಡ ಬರಗಾಲ ಎದುರಾದಾಗ ದೂರದ ಬಂಬೈಗೆ ಮಗನೊಂದಿಗೆ ಗುಳೇ ಹೊರಡುತ್ತಾನೆ. ಹೀಗೆ ಹೋಗುವಾಗ ತನ್ನ ಹೆಂಡತಿಯನ್ನು ಸಾಲಕ್ಕೆ ಬದಲಾಗಿ ಒತ್ತಿ ಆಳಾಗಿ ಗೌಡನಲ್ಲಿ ಇಟ್ಟು ಹೋಗುತ್ತಾನೆ. ಆದರೆ "ನನಗೆ 'ಗಿರವಿ' ಬಂದದ್ದು ಅದು ಹೊಲಾ ಆಗಲಿ ಹೆಣ್ಣೇ ಆಗಲಿ ನನಗೆ ಬೇಕಾದಂಗ ಅವುಕ್ಕ ಬಳಸಿಕೊಳ್ಳ ಹಕ್ಕ ನನಗದಾ ತಿಳಿತೇನು"[೪೩] ಎಂದು ಹೇಳುವ ಗೌಡನಿಗೆ ಹೊಲ-ಮನೆಯ ಕೆಲಸಗಳ ಹೊರತಾಗಿ ಆತನ ಲೋಲುಪತೆಗಳಿಗೂ ಗಿನ್ಯಾನಿ ದಾಸಿಯಾಗುತ್ತಾಳೆ. ಗಂಡ ಮತ್ತು ಗೌಡನ ಮಧ್ಯೆ ತನ್ನ ಅಸ್ತಿತ್ವ, ಸ್ಥಾನಮಾನಗಳನ್ನು ಪ್ರಶ್ನಿಸಿಕೊಳ್ಳುತ್ತಾಳೆ. ದುರಂತವೆಂಬಂತೆ ಬಂಬೈನಿಂದ ಮರಳಿ ಬಂದ ಹುಲಿಗ್ಯಾನಿಗೆ ಗೌಡ ಗಿನ್ಯಾನಿಯನ್ನು ದೈಹಿಕವಾಗಿ ಬಳಸಿಕೊಂಡಿರುವ ವಿಷಯ ತಿಳಿಯುತ್ತದೆ. ಇದಕ್ಕಾಗಿ ಪುನಃ ಗಿನ್ಯಾನಿಯನ್ನು 'ಮರುಗಂಟು' ಮಾಡಿ ಆತನ ಬಳಿಯೇ ಬಿಟ್ಟು ಹೋಗುತ್ತಾನೆ. ಆಕೆ ಗೌಡನ ದಾಸಿಯಾಗಿಯೇ ಬದುಕಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿ ಹೊರಟಾಗ

"ನಾ ನಿನ್ನ ಹೊಲಾ ಅಲ್ಲೋ ಹುಲಿಗ್ಯಾ... ನಿನ್ನ ಹೆಣ್ತಿಯಿದ್ದೀನಿ... ನಿನ್ನ ಸಾಲಕ್ಕ ನನಗೆ ಹಿಂಗ್ ಮರಗಂಟ ಮಾಡಿ ಬಿಟ್ಟು ಹೋಗಬ್ಯಾಡೋ"[೪೪] ಎನ್ನುವ ಗಿನ್ಯಾನಿಯ ಮಾತುಗಳು ವ್ಯರ್ಥ ರೋದನವಾಗುತ್ತವೆ.

'ಗಿರವಿ' ಕಥೆಯನ್ನೇ ಹೋಲುವ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯ ಕಥಾನಾಯಕಿ ಲಚ್ಚಿ ಅನಾಥೆ. ಊರ ಕುಲಕರ್ಣಿಯ ಕ್ರೂರ ದೃಷ್ಟಿಗೆ ಎದುರಾಗಿ ನಿಲ್ಲುವ ಧೈರ್ಯವುಳ್ಳವಳು ತಾನು ಪ್ರೀತಿಸಿದ ಕಾಶೀನಾಥನನ್ನು ಮದುವೆಯಾಗಲು ಬಯಸುತ್ತಾಳೆ. ಇದೇ ವೇಳೆಗೆ ಗುಲ್ಬರ್ಗಾ ಜಿಲ್ಲೆಗೆ ಬರಗಾಲ ಆವರಿಸುತ್ತದೆ. ಕುಡಿಯಲು ನೀರು, ತಿನ್ನಲು ಅನ್ನ, ದುಡಿಯಲು ಕೆಲಸವಿಲ್ಲದೆ ಜನ ಸಂಸಾರ ಸಮೇತ ಗುಳೇ ಹೊರಡುತ್ತಾರೆ. "ಹೊಟ್ಟೆಗಾಗಿ ಜನ ದೇವರ ಮೂರ್ತಿಗಳನ್ನೂ ತಂದು ಬಜಾರಿನಲ್ಲಿ ಹರಾಜಿಗೆ ಹಿಡಿದರು ಅನ್ನದೇವರ ಮುಂದೆ ಅನ್ಯದೇವರಿನ್ನೆಲ್ಲಿಯದು? ಎಳೆ ಹರೆಯದ ಹೆಣ್ಣುಗಳ ಶೀಲಕಳಚಿ ಕಲಬುರ್ಗಿಯ ಮಾರ್ಕೆಟ್‌ನ ಬೀದಿ ಬೀದಿಗಳಲ್ಲಿ ಬೆತ್ತಲಾಗತೊಡಗಿತು. ಏರುಜವ್ವನೆಯರಾದ ಹಳ್ಳಿಯ ಮುಗ್ಧ ಹೆಣ್ಣುಗಳು ಬರೀ ಒಂದು ಹೊತ್ತಿನ ಅನ್ನಕ್ಕಾಗಿ ನಗರದ ಸಿರಿವಂತ ಕಾಮುಕ ರಣ ಹದ್ದುಗಳ ಕೈದಿಗಳಾದರು."[೪೫] ಹೀಗೆ ಲೇಖಕಿ ಬರಗಾಲ, ಬಡತನ, ಹಸಿವು ಹೆಣ್ಣಿನ ಬದುಕನ್ನು ಕ್ರೂರವಾಗಿಸುವ ಬಗೆಯನ್ನು ಪ್ರಸ್ತುತ ಸಾಲುಗಳಲ್ಲಿ ದಾಖಲಿಸುತ್ತಾರೆ. ಲಚ್ಚಿ ಬಡತನ, ಹಸಿವುಗಳೇ ಕಾರಣವಾಗಿ ಕುಂಬಳಕಾಯಿ ಕದ್ದ ಆರೋಪ ಹೊತ್ತು, ಕುಲಕರ್ಣಿಯ ಕುತಂತ್ರದಿಂದ ಜೈಲು ಸೇರುತ್ತಾಳೆ. ಈ ವೇಳೆ ಪೊಲೀಸರ ದೌರ್ಜನ್ಯ, ಅತ್ಯಾಚಾರಕ್ಕೆ ಒಳಗಾಗಿದ್ದೇ ಅಲ್ಲದೆ, ಲಚ್ಚಿಗೆ ನ್ಯಾಯಾಲಯದಿಂದ ಶಿಕ್ಷೆಯೂ ಪ್ರಕಟವಾಗುತ್ತದೆ. ಇದೇ ಕಾರಣಕ್ಕೆ ತನ್ನ ಪ್ರಿಯಕರ ಕಾಶಿನಾಥನಿಂದ ದೂರವಾಗಿ, ಜೈಲಿನಿಂದ ಹೊರಬಂದು ಆಶ್ರಯವಿಲ್ಲದೆ ಬೀದಿಪಾಲಾಗುತ್ತಾಳೆ. ಕೊನೆಗೆ ಸ್ತ್ರೀ ನಿಕೇತನ ಸೇರುವ ಲಚ್ಚಿ ವೇಶ್ಯಾವಾಟಿಕೆ ದಂಧೆಗೆ ನೂಕಲ್ಪಟ್ಟಾಗ ಜೈಲಿನ ನಾಲ್ಕು ಗೋಡೆಯ ಮಧ್ಯೆಯೇ ತಾನು ಸುರಕ್ಷಿತವಾಗಿದ್ದೆನಲ್ಲಾ ಎಂದು ಹಲುಬುತ್ತಾಳೆ. ಲಚ್ಚಿಯ ಮೇಲೆ ಅನುಕಂಪದಿಂದ ಮದುವೆಯಾದ ಬಸಣ್ಣಿ ಸಹ ಮುಂದೊಂದು ದಿನ ಆಕೆಯ ಪೂರ್ವಜೀವನದ ಸಂಗತಿಗಳನ್ನು ತಿಳಿದು ಗರ್ಭಿಣಿಯಾಗಿದ್ದ ಲಚ್ಚಿಯನ್ನು ಹೊರಹಾಕುತ್ತಾನೆ. ಲಚ್ಚಿ ವ್ಯವಸ್ಥೆಯ ವಿರುದ್ಧ ಪ್ರತೀಕಾರವಾಗಿ ತನ್ನ ಮಗುವನ್ನು ಕೊಂದು ತಾನೂ ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಇದರಿಂದ ಮಗು ಸತ್ತು ತಾನು ಉಳಿದು ಪುನಃ ನ್ಯಾಯಾಲಯದಿಂದ ಜೀವಾವಧಿ ಶಿಕ್ಷೆಗೆ ಒಳಗಾಗುತ್ತಾಳೆ. "ಹೆಣ್ಣಿನ ದೇಹ, ಲೈಂಗಿಕತೆ, ಸ್ತ್ರೀತ್ವಗಳನ್ನೇ ಗುರಿಯಾಗಿಟ್ಟು ಕೊಂಡು ಆಕ್ರಮಣ ನಿರಂತರವಾಗಿ ಜಾರಿಯಲ್ಲಿದೆ ಎಂಬ ಸ್ತ್ರೀವಾದಿ ಚಿಂತನೆ ಪುರುಷ ಸಂಬಂಧಗಳನ್ನೇ ನಿರಾಕರಿಸಿ ಬಿಡುವ ಮಟ್ಟಿಗೂ ತೀವ್ರಕೋಪವನ್ನು ಪ್ರಕಟಿಸಿದೆ"[೪೬] ಎಂದು ಶ್ರೀಮತಿಯವರು ಹೇಳುವಂತೆ ಇಲ್ಲಿ ಲಚ್ಚಿ ಹಸಿವೆಗಾಗಿ

ಕುಂಬಳಕಾಯಿ ಕದಿಯುವ, ಗಂಡನ ಮೇಲಿನ ಕ್ರೋಧದಿಂದ ಮಗುವನ್ನು ಕೊಲ್ಲುವ ಮೂಲಕ ಕಾನೂನು ಹಾಗೂ ಸಮಾಜದ ದೃಷ್ಟಿಯಲ್ಲಿ ಅಪರಾಧಿಯೆನಿಸುತ್ತಾಳೆ. ಆದರೆ ವ್ಯಕ್ತಿಗತವಾಗಿ ಆಕೆ ವ್ಯವಸ್ಥೆಯ ವಿರುದ್ಧ ತೋರುವ ಆಕ್ರೋಶದ ಮೂಲಕ ಸ್ತ್ರೀವಾದಿ ಚಿಂತನೆಯ ಸಶಕ್ತ ಮಾದರಿಯಾಗಿ ಕಾಣಿಸುತ್ತಾಳೆ.

'ದಂಗೆ' ಗೀತಾ ಅವರ ಮತ್ತೊಂದು ಮಹತ್ವದ ಕಾದಂಬರಿ, ಭಾವನಿಂದಲೇ ಅತ್ಯಾಚಾರಕ್ಕೆ ಒಳಗಾಗುವ ದುರ್ಗಿ ತನ್ನ ಮೇಲಿನ ದೌರ್ಜನ್ಯವನ್ನು ಒಳಗೇ ನುಂಗಿಕೊಳ್ಳುತ್ತಾಳೆ. ಗಂಡನಿಂದ ದೂರವಾದಾಗ ಅವಕಾಶವಾದಿಯಾದ ಗೋವಿಂದರಾವ್ ಕುಲಕರ್ಣಿಯ ರಖೇಲಿಯಾಗುತ್ತಾಳೆ. ಆದರೆ ಮಗಳು 'ಸ್ವಾತಿ' ತನ್ನಂತಾಗಬಾರದೆಂದು ಆಲೋಚಿಸುತ್ತಾಳೆ. ಮತ್ತೊಂದು ಕಡೆ ಕುಲಕರ್ಣಿಯ ಮಗ ಸೀನಪ್ಪನೊಂದಿಗೆ 'ಸ್ವಾತಿ'ಗೆ ಪ್ರೀತಿ ಹುಟ್ಟುತ್ತದೆ. ಪ್ರತಿಷ್ಠೆ ಕಾರಣವಾಗಿ ಇದನ್ನು ಉಪಾಯವಾಗಿ ನಿಭಾಯಿಸಲು ಹೊರಟ ಕುಲಕರ್ಣಿ ಸ್ವಾತಿಯನ್ನು ಸೀನಪ್ಪನ ರಖೇಲಿಯಾಗಿಸಲು ಹುನ್ನಾರ ನಡೆಸುತ್ತಾನೆ. ಇದರ ವಿರುದ್ಧ 'ದಂಗೆ' ಏಳುವ ದುರ್ಗಿ ಕುಲಕರ್ಣಿಯನ್ನು ಕೊಲ್ಲುವ ಮೂಲಕ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಾಳೆ. ಮಗಳಿಗೆ ಹೊಸ ಬದುಕನ್ನು ರೂಪಿಸುತ್ತಾಳೆ.

ಇದೇ ಬಗೆಯ ಕಥಾವಸ್ತುವನ್ನು ಹೋಲುವ 'ಬೆಳಕಿನೆಡೆಗೆ' ಕಥೆಯಲ್ಲಿ ಚೆಂಬಸಪ್ಪ ಸಾವ್ಕಾರನ ಮನೆಯ ಆಳು ಕತಾಲಪ್ಪನ ಮಗಳು ಭವಾನಿ ತಾಯಿಯಿಲ್ಲದ ತಬ್ಬಲಿ. ಸಾವ್ಕಾರನ ಮನೆಯ ಕೆಲಸಕ್ಕೆ ಹೋದಾಗ ಆತನ ಮಗ ಈರಣ್ಣನಿಂದ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ನ್ಯಾಯಕ್ಕಾಗಿ ಕತಾಲಪ್ಪ ಪಂಚಾಯಿತಿ ಸೇರಿಸಿದಾಗ, ಈರಣ್ಣಗೌಡನ ಅರ್ಧ ಆಸ್ತಿಯ ಜೊತೆಗೆ ಆತನಿಗೆ ಇಟ್ಟುಕೊಂಡವಳಾಗಿ ಭವಾನಿ ಬದುಕಬೇಕೆಂದು ತೀರ್ಮಾನವಾಗುತ್ತದೆ. ಸಂಪತ್ತಿಗೆ ಕೊರತೆಯಿಲ್ಲದಿದ್ದರೂ ಸಾವ್ಕಾರನ ಅಧಿಕೃತ ಹೆಂಡತಿಯಾಗಲಿಲ್ಲ ಎಂದು ಕೊರಗು ಆಕೆಯಲ್ಲಿತ್ತು. ಹೀಗಾಗಿ ಸಾವ್ಕಾರನಿಂದ ತನಗೆ ಹುಟ್ಟಿದ ಮಗಳು 'ಗೌರಿ'ಗೆ ತನ್ನ ಸ್ಥಿತಿ ಬರಗೊಡದೆ, ಮದುವೆ ಮಾಡಿಸಿ, ಆಕೆಗೊಂದು ಹೊಸ ಬದುಕು ರೂಪಿಸಲು ಬಯಸುತ್ತಾಳೆ. ಆದರೆ ಈರಣ್ಣ ಗೌಡ ಮತ್ತು ಗೌರಿಯ ಮದುವೆ ಸಾಧ್ಯವಿಲ್ಲ, ಬೇಕಾದರೆ ಅಕೆಯನ್ನು ತನ್ನ ತಂಗಿಯ ಮಗ ಇಟ್ಟುಕೊಳ್ಳುತ್ತಾನೆಂದು ಕೇಳುತ್ತಾನೆ. ಇದರಿಂದ ಕೆರಳಿದ ಭವಾನಿ "ನನ್ನ ಮಗಳು, ಆದರ ಒಂದು ಗಂಡಿನ ತಾಳಿ ಕಟ್ಟಿದ ಹೆಣ್ತಿ ಆಗ್ತಾಳ ಖರೇ, ಇಲ್ಲಂದ್ರ ತನ್ನ ಹೊಟ್ಟಿ ತಾ ತುಂಬಿಸಿಕೊಂಡು ಯಾವ ಗಂಡಸಿನ ಹಂಗಿನ ಅನ್ನಕ್ಕೆ ಆಸಿ ಬೀಳಲಾರ್ದೆ ಸೊತಂತ್ರ ಆಗಿ ಬಾಳ್ತಾಳ, ತಿಳಿತೇನು? ಆಕಿ ಎಂದಿಗಿನೂ ಒಬ್ಬ ಗಂಡಿನ 'ಇಟಗೊಂಡ' ಹೆಣ್ಣ ಆಗಂಗಿಲ್ಲೋ ಸಾವ್ಕಾರಾ..."[೪೭] ಎಂದು ಸವಾಲು ಹಾಕುತ್ತಾಳೆ. ಕೊನೆಗೆ ಗೌರಿಗೆ ವಿದ್ಯೆ ಕಲಿಸಿ, ಸ್ವಾವಲಂಬಿಯಾಗಿಸುವ ಯೋಚನೆ ಮಾಡಿ ಮಗಳೊಂದಿಗೆ ಊರು ತೊರೆಯುತ್ತಾಳೆ.

‘ದಂಗೆ’ ಕಾದಂಬರಿಯ ದುರ್ಗಿ ಹಾಗೂ ‘ಬೆಳಕಿನೆಡೆಗೆ’ ಕಥೆಯ ಭವಾನಿ ಇಬ್ಬರೂ ತಮ್ಮಂತೆ ಮಕ್ಕಳು ಉಳ್ಳವರ ದೌರ್ಜನ್ಯಕ್ಕೆ ಒಳಗಾಗಬಾರದೆಂದು ಬಯಸುತ್ತಾರೆ. ಹಾಗೆಯೇ ಇದಕ್ಕೆ ಪರಿಹಾರ ವಿದ್ಯೆ, ಸ್ವಾವಲಂಬನೆಯಿಂದಲೇ ಸಾಧ್ಯ ಎನ್ನುವ ಮನೋಭಾವದಿಂದ ಮುನ್ನಡೆಯುವುದು ಲೇಖಕಿಯ ಹೊಸ ಚಿಂತನ ಕ್ರಮವಾಗಿ ಕಾಣಿಸುತ್ತದೆ.

ಗೀತಾ ಅವರ ‘ಬದುಕು’ ಕಾದಂಬರಿಯಲ್ಲಿ ಭರಮ್ಯಾನ ಮಗಳು ‘ನೀಲವ್ವ’ನನ್ನು ಜೋಗಣಿ ಆಗಲು ಹೇಳಿದಾಗ ಆಕೆ “ನಾ ಒಲ್ಲೆಪ್ಪೊ... ನಾ ಜೋಗಣಿ ಆಗಂಗಿಲ್ಲೋ ಯಪ್ಪಾ ನಾನು ಬ್ಯಾರೆ ಹೆಂಗಸರಂಗೆ ಮದಿಮಾಡ್ಕೊಂಡು ಒಬ್ಬ ಗಂಡನ ಹೆಣ್ತ್ಯಾಗಿ ಗರತ್ಯಾಗಿ ಬಾಳ್ಯಾ ಮಾಡ್ತೀನೋ ಯಪ್ಪಾ..... ನಾ ದೇವರ ಹೆಸರಿನ ಮ್ಯಾಲ ಸೂಳಿದಂಧಾ ಮಾಡಂಗಿಲ್ಲೆ ಯವ್ವಾ.... ನನಗಿದೆಲ್ಲಾ ಪಸಂದಿಲ್ಲೆ ಹಡದವ್ವ.. ನೀ ಅರೆ ಅಪ್ಪಗೆ ಹೇಳೆ ಯವ್ವ”[೪೮] ಎಂದು ದೈನ್ಯದಿಂದ ಬೇಡಿಕೊಳ್ಳುತ್ತಾಳೆ. ಆದರೆ ಅಕೆಯ ಬೇಡಿಕೆಗೆ ಮನ್ನಣೆ ಸಿಗದೆ, ಜೋಗಿಣಿಯಾಗಿ ತಾನು ಪ್ರೀತಿಸಿದ ತುಕ್ಕಪ್ಪನಿಂದಲೂ ತಿರಸ್ಕೃತಳಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅದೇ ಕಾದಂಬರಿಯ ಮತ್ತೊಂದು ಪಾತ್ರವಾದ ‘ತುಳಜವ್ವ’ ಜೋಗಿಣಿ ದಂಧಾ ಬಿಟ್ಟು ಹುಸೇನಪ್ಪನೊಂದಿಗೆ ಮದುವೆಯಾಗಿ ಊರು ತೊರೆಯುತ್ತಾಳೆ. ಬಹಳ ವರ್ಷಗಳ ನಂತರ ಹೆತ್ತವರನ್ನು ಕಾಣಲು ಊರಿಗೆ ಮರಳಿ ಬಂದ ಆಕೆಗೆ ಪಂಚಾಯಿತಿ ದಂಡ ವಿಧಿಸಿ ಬಹಿಷ್ಕಾರ ಹಾಕುತ್ತದೆ. “ನೀನು ಕೊಟ್ಟ ತೀರ್ಮಾನ ನಮಗೆ ಒಪ್ಪಿಗಿಯಿಲ್ಲ. ಏಕತರಫಾ ನ್ಯಾಯಾ ನಿಮ್ದು, ನಾನೇನು ತಪ್ಪು ದಂಡ ಕೊಡಂಗಿಲ್ಲ. ಹಾಗೆ ಕೊಡ್ಲಿಕ್ಕ ನಾನೇನು ತಪ್ಪು ಕೆಲಸ ಮಾಡಿಲ್ಲ ನೀವು ನಮ್ಮಪ್ಪಗೇನು ಕುಲದಲಿಂದ, ಕೇರಿಲಿಂದ ಹೊರಗಿಡ್ತೀರಿ? ನಾನು ನಮ್ಮಪ್ಪ ಅವ್ವಗ ಈ ಊರ ಕೇರಿಲಿಂದ ದೂರ ಮಾಡಿ ನನ್ ಜೋಡಿ ಕರ್‍ಕೊಂಡು ಹೋಗ್ತೀನಿ...”[೪೯] ಎಂದು ಹೊರ ನಡೆಯುತ್ತಾಳೆ.

‘ನೀಲವ್ವ’, ‘ಜೋಗಣಿ’ ಪದ್ಧತಿಗೆ ಒಳಗಾಗಿ ಆತ್ಮಹತ್ಯೆಯ ಹಾದಿಯನ್ನು ಆಯ್ಕೆ ಮಾಡಿಕೊಳ್ಳುವ ಮೂಲಕ, ವ್ಯವಸ್ಥೆಯ ಬಗ್ಗೆ ಅಸಹಾಯಕತೆಯನ್ನು ತಳೆಯುತ್ತಾಳೆ. ಮತ್ತೊಂದೆಡೆ ‘ತುಳಜವ್ವ’ ಜೋಗಿಣಿಯಾಗಿದ್ದರೂ ಅಂತರ್ಜಾತೀಯ ವಿವಾಹದ ಮೂಲಕ ಹೊಸ ಬದುಕನ್ನು ಕಂಡುಕೊಳ್ಳುತ್ತಾಳೆ. ಅಲ್ಲದೆ ಪಂಚಾಯಿತಿ ತೀರ್ಮಾನವನ್ನು ಎದುರಿಸುವ ಮೂಲಕ ಪುರುಷ ನಿಷ್ಠ ಪದ್ಧತಿ, ನೀತಿ-ನಿಯಮಗಳನ್ನು ಮೀರುವ ಪರ್ಯಾಯ ಪಾತ್ರವಾಗಿ ಕಾಣಿಸಿಕೊಳ್ಳುತ್ತಾಳೆ.

ಒಟ್ಟಾರೆ ಗೀತಾ ಅವರು ಈ ಎಲ್ಲ ಕಥಾಸಾಹಿತ್ಯದಲ್ಲಿ ಬಡತನ, ಪರಿತ್ಯಕ್ತ ಬದುಕು, ಹೆಣ್ಣಿನ ಮಾರಾಟ, ಪ್ರೇಮ ವೈಫಲ್ಯ, ಧರ್ಮದ ಹೆಸರಿನಲ್ಲಿನ ಮೌಢ್ಯ ಆಚರಣೆ, ಪದ್ಧತಿಗಳು ಹೆಣ್ಣನ್ನು ದೇವದಾಸಿ ಹಾಗೂ ವೇಶ್ಯಾ ವ್ಯವಸ್ಥೆಯಲ್ಲಿ ನರಳುವಂತೆ ಮಾಡುತ್ತದೆಂಬುದನ್ನು ಅತ್ಯಂತ ವಾಸ್ತವವಾಗಿ ಚಿತ್ರಿಸಿದ್ದಾರೆ. ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕ ಮಹಿಳೆಯರು ದುರಂತ ಅಂತ್ಯ

ಕಂಡುಕೊಂಡರೆ ಇನ್ನೂ ಕೆಲವರು ವ್ಯವಸ್ಥೆಯನ್ನು ಎದುರಿಸಿ ಹೊಸ ಆಲೋಚನೆ, ಅರಿವು, ನಿರ್ಧಾರಗಳೊಂದಿಗೆ ಬದುಕನ್ನು ರೂಪಿಸಿಕೊಳ್ಳುತ್ತಾರೆ. ದುರಂತಗಳಲ್ಲೂ, ನಿರ್ಧಾರಗಳ ಅರಿವಿನಲ್ಲೂ, ತಮ್ಮ ಮೇಲಿನ ದೌರ್ಜನ್ಯ ಹಾಗೂ ಶೋಷಣೆಗಳನ್ನು ಎದುರಿಸಿ ಬದುಕಬೇಕಾದ ಹೊಸ ಜಾಗೃತಿಯನ್ನು ದಾಖಲಿಸುವಲ್ಲಿ ಇಲ್ಲಿನ ಪಾತ್ರಗಳು ಮಹತ್ವ ಪಡೆದುಕೊಂಡಿವೆ.

ಲ ಪ್ಯುಬರ್ಟೆಯಲ್ಲಿ "ತಮ್ಮನ್ನು ತಾವು ಮಾರಿಕೊಳ್ಳುವ ಹೆಂಗಸರಿಗೂ, ವಿವಾಹಿತರಾಗುವ ಹೆಂಗಸರಿಗೂ ಬೆಲೆ ಮತ್ತು ಒಪ್ಪಂದದ ಅವಧಿಯಲ್ಲಿ ಮಾತ್ರ ವ್ಯತ್ಯಾಸಗಳಿವೆ. ಇಬ್ಬರಿಗೂ ಲೈಂಗಿಕ ಕ್ರಿಯೆ, ಅವರು ನೀಡುವ ಸೇವೆ ಹೆಂಡತಿ ಜೀವಮಾನವಿಡೀ ಆತನ ಅಗತ್ಯಗಳನ್ನು ಪೂರೈಸಿದರೆ, ವೇಶ್ಯೆಯದು ತಾತ್ಕಾಲಿಕವಾಗಿರುತ್ತದೆ"[೫೦] ಎಂದು 'ಮಾರೋ' ಹೇಳುತ್ತಾರೆ. ಈ ಮಾತಿನಂತೆ ಹೆಣ್ಣಿನ ದೇಹ ಮತ್ತು ಲೈಂಗಿಕತೆಯನ್ನು ಗಂಡು ತನ್ನ ಯಜಮಾನಿಕೆಗೆ ಒಳಪಡಿಸುವ ಮೂಲಕವೇ ವೇಶ್ಯೆ, ದೇವದಾಸಿಯಂತಹ ಪದ್ಧತಿಗಳು ಜಾರಿಗೆ ಬಂದವು. ವಿವಾಹ ವ್ಯವಸ್ಥೆಯಲ್ಲಿ ಹೆಂಡತಿಯಾಗಿ ಯಜಮಾನಿಕೆಗೆ ಒಳಪಡುವ ಹೆಣ್ಣಿನದು ಕೌಟುಂಬಿಕ ಚೌಕಟ್ಟಿನಿಂದ ಹೊರಬರಲಾಗದ ನಿರಂತರ ಶೋಷಣೆಯಾಗುತ್ತದೆ. ಮತ್ತೊಂದೆಡೆ ವೇಶ್ಯೆ, ದೇವದಾಸಿಯರದು ಸಾಮಾಜಿಕವಾಗಿ ಅವಮಾನದ ಸ್ಥಿತಿಯಲ್ಲಿಯೇ ಬದುಕುತ್ತಾ ಚಹರೆಯೇ ಇಲ್ಲದ ನಿರಂತರ ವ್ಯಾಪಾರವೆನಿಸಿಕೊಳ್ಳುತ್ತದೆ. ಹೀಗಾಗಿ ಎರಡೂ ಕಡೆಗಳಲ್ಲೂ ಹೆಣ್ಣು ತನ್ನ ಮಾನಸಿಕ, ದೈಹಿಕ, ಭಾವನಾತ್ಮಕ, ಲೈಂಗಿಕ ಅಸ್ಮಿತೆಗಳನ್ನು ಕಳೆದುಕೊಂಡು ಬದುಕಬೇಕಾಗುತ್ತದೆ.

### ೪.೪.೨. ವಿವಾಹ ಬಾಹಿರ ಸಂಬಂಧಗಳು

ಸ್ತ್ರೀ ಪುರುಷರಿಗೆ ಹುಟ್ಟಿನಿಂದಲೂ ಬಂದಿರುವ ಲೈಂಗಿಕ ಪ್ರಜ್ಞೆಯನ್ನು ಮದುವೆ ಹಾಗೂ ಕುಟುಂಬಗಳ ಮೂಲಕ ಸಾಮಾಜಿಕ ಮಿತಿಯನ್ನು ನೀಡಿ ನಿಯಂತ್ರಿಸಲಾಗುತ್ತದೆ. ಆದರೆ ಮೊದಲಿನಿಂದಲೂ 'ಉತ್ಪಾದನೆ' ನೆಲೆಯನ್ನು ಗಂಡಿಗೆ ಹಾಗೂ 'ಸೇವೆ'ಯ ನೆಲೆಯನ್ನು ಹೆಣ್ಣಿಗೆ ಹಂಚುವ ಮೂಲಕ ಗಂಡು ಆರ್ಥಿಕತೆಯ ಜೊತೆಗೆ ಆಕೆಯ ಮೇಲೆ ದೈಹಿಕ, ಲೈಂಗಿಕ ನಿಯಂತ್ರಣವನ್ನೂ ಸಾಧಿಸಿದ್ದಾನೆ. ಆದ್ದರಿಂದ ಹೆಣ್ಣು ಗಂಡುಗಳ ಲೈಂಗಿಕ ಬದುಕಿಗೆ ವಿವಾಹ ಸಂಸ್ಥೆ ಒಂದು ನ್ಯಾಯಸಮ್ಮತ ಸಾಮಾಜಿಕ ಚೌಕಟ್ಟನ್ನು ಒದಗಿಸುತ್ತದೆ ಎಂಬುದು ತಪ್ಪು ತಿಳುವಳಿಕೆಯಾಗಿದೆ. ಕಾರಣ ವಿವಾಹ ಸಂಸ್ಥೆ ಹೆಣ್ಣಿನ ಲೈಂಗಿಕ ಬದುಕಿಗೆ ಹೇರುವ ನಿಯಂತ್ರಣ ವನ್ನೇನೂ ಗಂಡಿಗೆ ಹೇರುವುದಿಲ್ಲ. ಇದರಿಂದಾಗಿ ಲೈಂಗಿಕ ನಿಷ್ಠೆ ಪಾಲಿಸುವ ಗಂಡು ಶ್ರೇಷ್ಠನಾದರೆ, ಹೆಣ್ಣಿಗೆ ಅದೊಂದು ಅನಿವಾರ್ಯ ಹಾಗೂ ಕಡ್ಡಾಯದ ಸಾಮಾಜಿಕ ನಿರೀಕ್ಷೆಯಾಗಿರುತ್ತದೆ. ಹಾಗಾಗಿಯೇ ಸಮಾಜದಲ್ಲಿ ವಿವಾಹಿತ ಅಥವಾ ಅವಿವಾಹಿತ ಗಂಡು ಪರಸ್ತ್ರೀಯೊಂದಿಗೆ ಸಂಬಂಧ ಹೊಂದುವುದನ್ನು ಸಹಜವಾಗಿ ಪುರುಷತ್ವದ ಸಂಕೇತವೆಂದು ಮನ್ನಣೆ ನೀಡಲಾಗುತ್ತದೆ.

ಇವೆಲ್ಲದರ ನಡುವೆಯೂ ವಿವಾಹ ವ್ಯವಸ್ಥೆಯ ಮೂಲ ಆಶಯವಾದ ಲೈಂಗಿಕ ನಿಷ್ಠೆಯನ್ನು ಮೀರಿ ವಿವಾಹೇತರ ಸಂಬಂಧಗಳನ್ನು ಹೊಂದುವ ಪ್ರಯತ್ನ ಎಲ್ಲ ಕಾಲಕ್ಕೂ ಇದೆ.

ವಿವಾಹ ಬಾಹಿರ ಸಂಬಂಧಗಳು ಏರ್ಪಡಲು ಹಲವಾರು ಕಾರಣಗಳಿವೆ. ಕೆಲವು ಸಲ ಸಮ್ಮತವಾಗಿಯೂ ಸಮ್ಮತವಲ್ಲದೆಯೂ ಈ ಸಂಬಂಧಗಳು ಏರ್ಪಡುವ ಸಂದರ್ಭಗಳಿವೆ. ಹಾಗಾಗಿ ಮಹಿಳಾ ದಶಕದ ಲೇಖಕಿಯರ ಕಥಾಸಾಹಿತ್ಯದಲ್ಲಿನ ಸ್ತ್ರೀ ಪಾತ್ರಗಳನ್ನು ಸಮ್ಮತ ವಿವಾಹಬಾಹಿರ ಸಂಬಂಧಗಳು ಮತ್ತು ಸಮ್ಮತವಲ್ಲದ ವಿವಾಹ ಬಾಹಿರ ಸಂಬಂಧಗಳಾಗಿ ವರ್ಗೀಕರಿಸಿ ಮಾದರಿ ಪಾತ್ರಗಳ ವಿವೇಚನೆಯನ್ನು ಕೈಗೊಳ್ಳಲಾಗಿದೆ.

**೪.೪.೨.೧. ಸಮ್ಮತ ವಿವಾಹ ಬಾಹಿರ ಸಂಬಂಧಗಳು**

ವೀಣಾ ಶಾಂತೇಶ್ವರ ಅವರ 'ಕವಲು' ಕಥೆಯಲ್ಲಿ 'ಮಿನಿ' ವಿದ್ಯಾವಂತೆ, ಉದ್ಯೋಗಸ್ಥೆ. ಇಪ್ಪತ್ತು ವರ್ಷಗಳ ಕಾಲ ವಿವಾಹವಿಲ್ಲದೆ ಆತನೊಂದಿಗೆ ಬದುಕು ನಡೆಸುತ್ತಾಳೆ. ಈ ಅನಧಿಕೃತ ಸಂಬಂಧಕ್ಕೆ ತಾನು ತಾಯಿಯಾಗುವ ಮೂಲಕ ಅರ್ಥ ತಂದುಕೊಳ್ಳಬೇಕೆಂಬ ಬಯಕೆ ಇದ್ದರೂ ಸಾಧ್ಯವಾಗದ ಸ್ಥಿತಿ ಮಿನಿಯದು. ನಿಷ್ಠೆಯ ಗೊಂದಲದಲ್ಲಿ ಉಳಿಯುವ ಕಥಾನಾಯಕನಿಗೆ ಆಕೆಯೊಂದಿಗಿನ ಸಂಬಂಧವನ್ನು ಅಧಿಕೃತಗೊಳಿಸಬೇಕೆನ್ನಿಸುವುದು, ತನ್ನ ಹೆಂಡತಿ ಶಾಂತ ಸತ್ತ ನಂತರದಲ್ಲಿ. ಆದರೆ ಆತನ ಅವಕಾಶವಾದಿತನವನ್ನು ಅರಿತ 'ಮಿನಿ' "ನಮ್ಮ ದಾರಿ ಕವಲೊಡೆದಿದೆ... You are a brave man" ಎಂಬ ಸಂದೇಶ ನೀಡಿ ದೂರ ಹೋಗುವ ಸ್ವತಂತ್ರ ನಿರ್ಧಾರ ಕೈಗೊಳ್ಳುತ್ತಾಳೆ.

'ಹನುಮಾಪುರದಲ್ಲಿ ಹನುಮ ಜಯಂತಿ' ಕಥೆಯಲ್ಲಿ ಹನುಮಜಯಂತಿಯ ದಿನದಂದು ಬ್ರಾಹ್ಮಣ ಮತ್ತು ಲಿಂಗಾಯತ ಸಮುದಾಯಗಳಿಗೆ ತೇರಿಗೆ ಮೊದಲು ಕಾಯಿ ಒಡೆಯುವ ವಿಚಾರಕ್ಕೆ ಜಗಳ ಏರ್ಪಡುತ್ತದೆ. ಮತ್ತೊಂದು ಕಡೆ ಜಾತಿಯ ಪರಂಪರೆ, ಬಿಕ್ಕಟ್ಟುಗಳನ್ನು ಮೀರಿ ಕೇಶವಾಚಾರಿ–ಹೊಲತಿಕಾಳಿ ಹಾಗೂ ವೀರಭದ್ರಗೌಡ–ಶ್ರೀನಿವಾಸಾಚಾರ್ಯರ ವಿಧವೆ ಮಗಳು ಸುಶೀಲಾಳಿಗೂ ವಿವಾಹಬಾಹಿರ ಸಂಬಂಧಗಳು ಏರ್ಪಟ್ಟಿವೆ. ಹೀಗಾಗಿ ಮೇಲ್ನೋಟಕ್ಕೆ ಕಾಣಿಸುವ ಮಡಿ–ಮೈಲಿಗೆ, ಸಂಪ್ರದಾಯ, ಆಚರಣೆಗಳು, ಕಥೆಯಲ್ಲಿ ವ್ಯಂಗ್ಯವೆಂಬಂತೆ ಕಾಣಿಸುತ್ತವೆ.

'ಗಂಡಸರು' ಕಾದಂಬರಿಯ ಕೇಂದ್ರ ಪಾತ್ರವಾದ ಶಾಂತಿಯ ಜೀವನದಲ್ಲಿ ಶಂಕರ, ಪ್ರೊ.ಮಠದ, ರಮಾಕಾಂತ ಸಿಂಧೆ, ಎಲ್ಲರೂ ತಮ್ಮ ಸ್ವಾರ್ಥಗಳಿಗಾಗಿ ಬಂದು ಹೋಗುವ ಪಾತ್ರಗಳಾಗುತ್ತಾರೆ. ಕಾರಣ ಇವರೊಂದಿಗೆ ಆಕೆ ವಿವಾಹದ ಬೇಡಿಕೆ ಇಟ್ಟಾಗಲೆಲ್ಲ ಶಾಂತಿಯ ಸ್ವಾತಂತ್ರ್ಯಹರಣವಾಗುತ್ತದೆ. "ಖರೇ ಪ್ರೀತಿ ಅಂದರ ಮನಸ್ಸಿನ ಪ್ರೀತಿ. ಈ ದೈಹಿಕ ಸಂಬಂಧದಿಂದ ಮನಸ್ಸಿನ ಪ್ರೀತಿ ಹೊಲಸು ಆಗತದ. ನನಗೆ ಅಂಥಾ ಪ್ರೀತಿ ಬ್ಯಾಡ. ನನ್ನ ಖರೇ ಪ್ರೀತಿ

ಮಾಡೋವಂಥಾವನ್ನ ನಾ ಲಗ್ನಾಗ್ತೀನಿ"[೫೧] ಎನ್ನುವ ಆದರ್ಶ ಹೊಂದಿದ ಶಾಂತಿಯ ಕನಸು ನೆರವೇರುವುದೇ ಇಲ್ಲ. ಶಾಂತಿ ಪ್ರತಿಪಾದಿಸುವ ಮಹಿಳಾ ಸಮಾನತೆ, ಸ್ತ್ರೀ ಸ್ವಾತಂತ್ರ್ಯ ಮರ್ಯಾದಸ್ಥ ಹೆಂಗಸರ ಕೆಲಸವಲ್ಲ ಎಂದು ಶಂಕರ ದೂರವಾಗುತ್ತಾನೆ. ಶಾಂತಿಯ ಮತ್ತು ತನ್ನ ಆದರ್ಶಗಳು ಒಂದೇ ಎಂದು ನಂಬಿಸಿದ ಪ್ರೊ.ಮಠದ ವಿವಾಹಿತನಾಗಿದ್ದರೂ ಶಾಂತಿಯೊಂದಿಗೆ ಸಂಬಂಧ ಸಾಧಿಸುತ್ತಾನೆ. ಆದರೆ ಮುಂದೊಂದು ದಿನ ಆತ ಹೆಣ್ಣು ಮಕ್ಕಳನ್ನು ವಂಚಿಸಿ ದುರುಪಯೋಗ ಪಡಿಸಿಕೊಳ್ಳುವ ವಂಚಕ ಎಂದು ತಿಳಿದಾಗ ಶಾಂತಿ ಆಘಾತಕ್ಕೊಳಗಾಗುತ್ತಾಳೆ. ನಂತರ ರಮಾಕಾಂತ ಸಿಂಧೆಯೊಂದಿಗೆ ಶಾಂತಿಯ ಬದುಕು ಮತ್ತೊಂದು ತಿರುವು ಪಡೆಯುತ್ತದೆ. ಶಾಂತಿ ತನ್ನ ತಂದೆಯ ಮರಣದ ಸುದ್ದಿ ಕೇಳಿ ದುಃಖದಲ್ಲಿದ್ದಾಗಲೂ ಸಿಂಧೆ ಆಕೆಗೆ ಮಾನಸಿಕ ಸಮಾಧಾನವನ್ನು ಹೇಳುವ ಬದಲಾಗಿ ಆಕೆಯಲ್ಲಿ ದೈಹಿಕ ಸುಖವನ್ನು ಬಯಸುತ್ತಾನೆ. ಈ ಮೂಲಕ ಆಕೆಯ ಭಾವನೆಗಳಿಗೆ ಕನಿಷ್ಠ ಗೌರವವನ್ನು ತೋರದ ವ್ಯಕ್ತಿಯಾಗಿ ಕಾಣಿಸುತ್ತಾನೆ. ಇದರೊಟ್ಟಿಗೆ ತಾನೊಬ್ಬ ವಿವಾಹಿತನೆಂದು, ತನ್ನ ಕಾಲೇಜಿನ ದಿನಗಳ ಪ್ರೀತಿಯನ್ನು ಶಾಂತಿಯ ಮುಂದೆ ಹೇಳಿಕೊಳ್ಳುತ್ತಾನೆ. ಇದಕ್ಕೆ ಪ್ರತಿಯಾಗಿ ಶಾಂತಿಯೂ ತನ್ನ ಹಿಂದಿನ ಸಂಬಂಧಗಳ ಕುರಿತಾಗಿ ಹೇಳಿದಾಗ ಆಕೆಯಿಂದ ದೂರವಾಗುತ್ತಾನೆ. ಕೊನೆಗೆ ಶಾಂತಿಯ ಪ್ರೀತಿ ಬಯಸಿ ಬಂದ ಜಾನ್ ತನ್ನ ಧರ್ಮದಲ್ಲಿ ಆಕೆಗೆ ನಂಬಿಕೆಯಿಲ್ಲ ಎಂಬ ಕಾರಣ ನೀಡಿ ಹಿಂದೆ ಸರಿಯುತ್ತಾನೆ.

ಒಟ್ಟಾರೆ ವೀಣಾ ಅವರ 'ಕವಲು' ಕಥೆಯಲ್ಲಿ ಮಿನಿ ತಾನು ವಿವಾಹಬಾಹಿರವಾಗಿ ಸಂಬಂಧ ಹೊಂದಿದ್ದ ಗಂಡುಗಳಿಂದ ಆಸರೆ, ಆರೈಕೆ, ಕಾಳಜಿಗಳನ್ನು ಪಡೆದದ್ದಕ್ಕಿಂತ ಅವರ ದಾಂಪತ್ಯನಿಷ್ಠೆ, ಆದರ್ಶಗಳ ನಡುವೆ ತನ್ನ ಕನಸುಗಳನ್ನು ಕಳೆದುಕೊಳ್ಳುತ್ತಾಳೆ. ಕೊನೆಗೆ ತಡವಾಗಿಯಾದರೂ ಅವರ ಸ್ವಾರ್ಥ, ಅವಕಾಶವಾದಿತನ ಅರಿತು ದೂರವಾಗುವುದು ಆಕೆಯಲ್ಲಿ ಮೂಡಿದ ಪುರುಷರ ಸ್ವ ಹಿತಾಸಕ್ತಿಯ ವಿರುದ್ಧದ ಹೊಸ ಎಚ್ಚರವನ್ನು ಧ್ವನಿಸುತ್ತದೆ.

ಜಾತಿಯ ಬಗೆಗಿನ ಭಿನ್ನಾಭಿಪ್ರಾಯಗಳ ಮಧ್ಯೆಯೂ ವಿವಾಹ ವ್ಯವಸ್ಥೆಯ ಆಚೆಗೆ ಸ್ವಾರ್ಥಕ್ಕಾಗಿ ವಿವಾಹಬಾಹಿರ ಸಂಬಂಧ ಸ್ಥಾಪಿಸಿಕೊಳ್ಳುವುದನ್ನು ಹೇಳುವ 'ಹನುಮಾಪುರದಲ್ಲಿ ಹನುಮ ಜಯಂತಿ' ಕಥೆ ವಿಡಂಬನಾ ರೂಪದ್ದಾಗಿದೆ. 'ಗಂಡಸರು' ಕಾದಂಬರಿಯಲ್ಲಿ ಮನುಷ್ಯ ಸಂಬಂಧಗಳ ಮೇಲೆ ನಂಬಿಕೆಯಿರಿಸಿದ, ವಿವಾಹ ವ್ಯವಸ್ಥೆಯನ್ನು ಗೌರವಿಸುವ ಶಾಂತಿಗೆ ತನ್ನ ಜೀವನದಲ್ಲಿ ಬರುವ 'ಗಂಡಸರಿಂದ' ಅಸಮಾನತೆ, ಶೋಷಣೆಯ ಅರಿವಾಗುತ್ತದೆ. ಹಾಗಾಗಿ ಇಲ್ಲಿ 'ಗಂಡಸು' ಎನ್ನುವುದು ವ್ಯಕ್ತಿಯಲ್ಲ ಒಂದು ವ್ಯವಸ್ಥೆ. ಕಾರಣ ತಮ್ಮ ಬದುಕು ಮತ್ತು ತತ್ವಾದರ್ಶಗಳಿಗೂ ಸಂಬಂಧವೇ ಇಲ್ಲದಂತೆ ವರ್ತಿಸುವ ಗಂಡಸರು ಒಂದೆಡೆಯಾದರೆ ತನ್ನ ದುಃಖ, ಬೇಸರಗಳಿಗೆ ಆಸರೆಯಾಗಿ ಮಾನಸಿಕ ಸ್ಥೈರ್ಯ, ನೆಮ್ಮದಿ ನೀಡುವ ಗಂಡುಗಳನ್ನು ನಿರೀಕ್ಷಿಸುವ ಶಾಂತಿ ಮತ್ತೊಂದೆಡೆಯಾಗುತ್ತಾಳೆ. ಇದನ್ನೇ ಶಾಂತಿ "ತನಗೆ ಬೇಕಾದುದು

ನಿಜವಾದ ಪ್ರೀತಿ ಎಲ್ಲಾ ಪರಿಸ್ಥಿತಿಗಳಲ್ಲೂ ಒಂದೇ ಸಮನಾದ ಪ್ರೀತಿ"[೫೨] ಎನ್ನುವ ಮೂಲಕ ತಿಳಿಸುತ್ತಾಳೆ.

ಗೀತಾನಾಗಭೂಷಣ ಅವರ 'ಕೆಂಪಾದವೋ ಎಲ್ಲ ಕೆಂಪಾದವೋ' ಕಥೆಯಲ್ಲಿ ಮಲಕಾಜಪ್ಪಗೌಡನಿಗೆ ಅಧಿಕೃತ ಸಂಬಂಧದಲ್ಲಿ ಹುಟ್ಟಿರುವ ಹಾಲಪ್ಪಗೌಡ, ಆಳುಮಗನ ಹೆಂಡತಿ ಹುಚ್ಚವ್ವನಿಂದ ಹುಟ್ಟಿದವ ಸರದಾರ ಇಬ್ಬರು ಮಕ್ಕಳು. ಹಾಲಪ್ಪಗೌಡನಿಗೆ ತನ್ನ ಮುಂದಿನ ತಲೆಮಾರಿಗೆ ಹೆಂಡತಿ ಚಂದವ್ವನಲ್ಲಿ ತನ್ನಿಂದ ಮಕ್ಕಳಾಗದು ಎಂಬ ಅರಿವಿದೆ. ಆಗ ಚಂದವ್ವ ಮಲಕಾಜಪ್ಪನ ಆಕ್ರಮ ಸಂತಾನವಾದ ಆಳುಮಗ ಸರದಾರನಲ್ಲಿ ಮಕ್ಕಳು ಪಡೆಯುವುದಾಗಿ ಕೇಳಿಕೊಳ್ಳುತ್ತಾಳೆ. ಸಂತಾನ ಮತ್ತು ವಂಶದ ಪ್ರತಿಷ್ಠೆಗಾಗಿ ಹಾಲಪ್ಪಗೌಡ ಒಪ್ಪಿಗೆಯನ್ನು ಸೂಚಿಸುತ್ತಾನೆ. ಆದರೆ ಮಕ್ಕಳಾದ ಮೇಲೆಯೂ ಸರದಾರನ ಸಂಬಂಧದಿಂದ ಚಂದವ್ವ ದೂರವಾಗದಿದ್ದಾಗ ಗೌಡನಿಂದ ಸರದಾರನ ಹತ್ಯೆಯಾಗುತ್ತದೆ.

ಇದೇ ಬಗೆಯ ವಸ್ತು ಗೀತಾ ಅವರ 'ಗೌಡನಗೋರಿ' ಕಥೆಯಲ್ಲಿಯೂ ಬರುತ್ತದೆ. ಸಂಗಪ್ಪಗೌಡನಿಂದ ತನಗೆ ಮಕ್ಕಳಾಗದಿದ್ದಾಗ 'ನೀಲಗಂಗಾ' ಊರ ಪುರಾಣಿಕನೊಂದಿಗೆ ಸಂಬಂಧ ಏರ್ಪಡಿಸಿಕೊಂಡು ತಾಯಿಯಾಗುತ್ತಾಳೆ. ಆದರೆ ಇದನ್ನು ಅರಿತ ಗೌಡ ಪುರಾಣಿಕನನ್ನು ಕೊಲ್ಲಿಸುತ್ತಾನೆ.

ಈ ಎರಡೂ ಕಥೆಗಳಲ್ಲಿ ವಿವಾಹೇತರ ಸಂಬಂಧಗಳು ಏರ್ಪಟ್ಟಿರುವುದು 'ತಾಯ್ತನ'ದ ಕಾರಣಕ್ಕಾಗಿ. ಒಂದೆಡೆ ವಿವಾಹೇತರ ಸಂಬಂಧ ಸಮ್ಮತವಾಗಿದ್ದರೆ, ಮತ್ತೊಂದೆಡೆ ಅಸಮ್ಮತವಾಗಿದೆ. ಆದರೆ ಯಾವ ತಪ್ಪು ಇಲ್ಲದೆ ಈ ಮೂಲಕ ಬದುಕಿನ ದುರಂತ ಕಂಡುಕೊಳ್ಳುವುದು ಮಾತ್ರ ಕೆಳವರ್ಗದ ಗಂಡಸರು ಎಂಬುದು ವಿಪರ್ಯಾಸ. ಆದರೆ 'ಹುಲಿಗ್ಯಾ' ಕಥೆಯಲ್ಲಿ ವಿರೋಧಾಭಾಸವಾದ ಸನ್ನಿವೇಶವಿದೆ. ಕುಕ್ಕಣ್ಣಿ ರಾಮಪ್ಪನ ಜೀತದಾಳು 'ಹುಲಿಗ್ಯಾ' ಕುಕ್ಕಣ್ಣಿಯ ವೈಯಕ್ತಿಕ ಜಗಳದಲ್ಲಿ ಜೈಲು ಸೇರುತ್ತಾನೆ. ಇದೇ ಸಂದರ್ಭದಲ್ಲಿ ಕುಕ್ಕಣ್ಣಿ ಹಾಗೂ ಹುಲಿಗ್ಯಾನ ಹೆಂಡತಿ ಲಚ್ಚಿಯೊಂದಿಗೆ ಸಂಬಂಧ ಬೆಳೆದು ಆಕೆ ತಾಯಿಯಾಗುತ್ತಾಳೆ. ಜೈಲಿನಿಂದ ಮರಳಿ ಬಂದ ಹುಲಿಗ್ಯಾ ಈ ವಿಚಾರವನ್ನು ಪಂಚರ ಮುಂದಿಡುತ್ತಾನೆ. ಇಲ್ಲಿ ಲಚ್ಚಿಗೆ ಕುಲಕರ್ಣಿ ಯಿಂದಲಾದರೂ ತಾನು ತಾಯಿಯಾದೆನೆಂಬ ನಿರಮ್ಮಳತೆ ಇದ್ದರೆ, ಹುಲಿಗ್ಯಾಗೆ ಇದು ಸಮ್ಮತವಲ್ಲ. "ಮಗನೇ..... ನಮ್ಮೆಂಡ್ರಿರಾದೇ ಆ ಹಾರ್‍ರ ಗಂಡಸರ ಮಗ್ಗಲ ಬೆಚ್ಚಗಮಾಡ್ಲಿಕ್ಕ. ನಮ್ಮ ಗಂಡಗೋಳಿರಾದೇ ಅವರ ಮೆಟ್ಟಿನ ತೆಳಗ ದುಡೀಲಿಕ್ಕೆ, ತಿಳೀತೇನ್ಲೋ ಪಾರಾ"[೫೩] ಎಂದು ಪಂಚರು ಹುಲಿಗ್ಯಾನಿಗೆ ಬುದ್ಧಿಮಾತು ಹೇಳಿ, ಮಗುವನ್ನು ತನ್ನದೆಂದು ಒಪ್ಪಿಕೊಳ್ಳುವಂತೆ

ಒತ್ತಾಯಿಸುತ್ತಾರೆ. ಕುಕ್ಕಣ್ಣಿ ಮತ್ತೊಮ್ಮೆ ತನ್ನ ಕೇರಿಯ ಹೆಣ್ಣು ಮಾಳಿಯನ್ನು ಬಳಸಿಕೊಳ್ಳಲು ಪ್ರಯತ್ನಿಸಿದಾಗ ಅದುವರೆಗಿನ ತನ್ನ ಅಂತರಂಗದ ಪ್ರತೀಕಾರವಾಗಿ ಹುಲಿಗ್ಯಾ ಕುಕ್ಕಣ್ಣಿಯ ಹೋರಿಗಳಿಂದಲೇ ಆತನನ್ನು ಕೊಲ್ಲಿಸುತ್ತಾನೆ.

'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿಯೂ ಸಹ ತಾಯ್ತನಕ್ಕಾಗಿ ಸೀನಿಂಗಪ್ಪನ ಮಗಳು 'ಸಿದ್ದೀರಿ', 'ಮರಪ್ಪ'ನೊಡನೆ ಸಂಬಂಧ ಹೊಂದುತ್ತಾಳೆ. ಅದೇ ರೀತಿ ಕುಲಕರ್ಣಿಯ ಆಳು 'ಕಾಳ್ಯಾ'ನೊಂದಿಗೆ ಆತನ ಹೆಂಡತಿ 'ರಮಾಬಾಯಿ', ವಿಧವೆಯಾದ ಲಿಂಗಾಯತರ 'ರತನಾ' ಆಳುಮಗ 'ತಿಪ್ಪಣ್ಣ'ನೊಂದಿಗೆ ಸಂಬಂಧವನ್ನು ಹೊಂದುತ್ತಾಳೆ. 'ಕಾಗೆಮುಟ್ಟಿತು' ಕಾದಂಬರಿಯಲ್ಲಿ ಊರಗೌಡ ಉಗ್ರಪ್ಪನ ಹೆಂಡತಿ 'ಗಂಗ' ಆಳುಮಗ 'ಬಾಳ್ಯಾ'ನೊಂದಿಗೆ ಸಂಬಂಧ ಹೊಂದುವ ಮೂಲಕ ತಾಯ್ತನವನ್ನು ಪಡೆಯುತ್ತಾಳೆ. ವೀಣಾ ಅವರ 'ಹನುಮಾಪುರದಲ್ಲಿ ಹನುಮಜಯಂತಿ' ಕಥೆಯಂತೆ ಇಲ್ಲಿಯೂ ಸಹ ಮೇಲ್ವರ್ಗದ ಹಾಗೂ ಕೆಳವರ್ಗದ ಗಂಡು ಹೆಣ್ಣಿನ ವಿಲೋಮ ಸಂಬಂಧಗಳನ್ನು ಕಾಣಬಹುದಾಗಿದೆ. ಆದರೆ ಈ ಎಲ್ಲ ಸಂಬಂಧಗಳು ಏರ್ಪಟ್ಟಿರುವುದು ಒಪ್ಪಿತ ರೂಪದಲ್ಲಿಯೇ ಎಂಬುದು ಗಮನಿಸುವ ಸಂಗತಿಯಾಗಿದೆ.

**೪.೪.೨.೨. ಅಸಮ್ಮತ ವಿವಾಹಬಾಹಿರ ಸಂಬಂಧಗಳು ಮತ್ತು ಲೈಂಗಿಕ ದೌರ್ಜನ್ಯಗಳು**

ಹೆಣ್ಣಿನ ಮೇಲೆ ನಿಯಂತ್ರಣವನ್ನು ಸಾಧಿಸಲು ಆಕೆಯನ್ನು ದಮನಗೊಳಿಸುವ ಒಂದು ತಂತ್ರವಾಗಿ ಲೈಂಗಿಕ ದೌರ್ಜನ್ಯದ ಮಾರ್ಗವನ್ನು ಅನುಸರಿಸುತ್ತಾ ಬರಲಾಗಿದೆ. ಎಷ್ಟೋ ಸಲ ಆಕೆಯ ಸಮ್ಮತಿಯಿಲ್ಲದೆ, ಅತಂತ್ರ, ಅಸಹಾಯಕ ಇಕ್ಕಟ್ಟಿನ ಸಂದರ್ಭಗಳಿಗೆ ಸಿಲುಕಿಸಿ ಲೈಂಗಿಕ ಶೋಷಣೆಯನ್ನು ಎಸಗಲಾಗುತ್ತದೆ. ಇದೇ ಶೋಷಣೆ ಮುಂದುವರೆದು ವಿವಾಹೇತರ ಸಂಬಂಧವನ್ನು ಸ್ಥಾಪಿಸಿಕೊಳ್ಳುವ ಉದಾಹರಣೆಗಳಿವೆ. ಹಾಗಾಗಿ ವಿವಾಹಿತ ಮತ್ತು ಅವಿವಾಹಿತ ಸ್ಥಿತಿಗಳೆರಡರಲ್ಲೂ ಹೆಣ್ಣು ಮಕ್ಕಳು ಈ ಬಗೆಯ ದೌರ್ಜನ್ಯಗಳಿಗೆ ಒಳಗಾಗುವ ಪಾತ್ರಗಳ ಪ್ರತಿನಿಧೀಕರಣದ ಅಧ್ಯಯನ ಕೈಗೊಳ್ಳಲಾಗಿದೆ.

ಹೆಣ್ಣಿಗೆ ಸುರಕ್ಷಿತ ತಾಣಗಳೆಂದು ಪ್ರತಿಬಿಂಬಿಸಲಾದ ಮನೆ, ವಸತಿನಿಲಯ, ಅನಾಥಾಲಯಗಳೂ ಸಹ ಎಷ್ಟೋ ಸಲ ಲೈಂಗಿಕ ಶೋಷಣೆಗೆ ಕಾರಣವಾಗುತ್ತವೆ. ಈ ಬಗೆಯ ಕಥಾವಸ್ತುವನ್ನು ಒಳಗೊಂಡ ವೀಣಾ ಅವರ 'ಅನಾಥೆ', ವೈದೇಹಿ ಅವರ 'ಅಮ್ಮಚ್ಚಿಯೆಂಬ ನೆನಪು' ಕಥೆಗಳು, ಗೀತಾ ಅವರ 'ಹಸಿಮಾಂಸ ಮತ್ತು ಹದ್ದುಗಳು', ಲಲಿತಾನಾಯಕ್ ಅವರ 'ನೆಲೆ-ಬೆಲೆ' ಕಾದಂಬರಿಗಳು ಪ್ರಮುಖವಾದವು.

ವೀಣಾ ಅವರ 'ಅನಾಥೆ' ಕಥೆಯಲ್ಲಿ 'ಭಗಿನೀ ಸೇವಾ ಸಮಾಜ' ನಡೆಸುವ ಶಿವರಾಮರೆಡ್ಡಿ ಮತ್ತು 'ಕಮಲಮ್ಮ' ಸಮಾಜ ಸೇವಕರಂತೆ ಬಿಂಬಿಸಿಕೊಂಡವರು. ದಾನಿಗಳಿಂದ ಸಿಕ್ಕುವ ವಸ್ತ್ರ, ಆಹಾರ ಎಲ್ಲಾ ಸೌಲಭ್ಯಗಳೂ ಇವರ ಸ್ವಾರ್ಥಕ್ಕೆ ಬಳಕೆಯಾಗುತ್ತವೆ. ಹೆಣ್ಣಾದ ಕಮಲಮ್ಮನಿಂದಲೂ ಅಲ್ಲಿನ ಅನಾಥೆಯರು ನಾನಾ ಬಗೆಯ ದೈಹಿಕ, ಮಾನಸಿಕ, ಲೈಂಗಿಕ ಶೋಷಣೆಗೆ ಒಳಗಾಗ ಬೇಕಾಗುತ್ತದೆ. ಸಮಾಜದ ಗಣ್ಯವ್ಯಕ್ತಿಗಳು ಅಲ್ಲಿಗೆ ಬಂದಾಗ ಹುಡುಗಿಯರಿಗೆ ನೇಮಿಸುವ 'ಗೆಸ್ಟ್ ರೂಮ್ ಡ್ಯೂಟಿ' ನಡುಕ ಹುಟ್ಟಿಸುವಂತಹದು. ಒಂದು ದಿನ ಕಥಾ ನಾಯಕಿ 'ಕೋಮಲ'ಳಿಗೂ ಈ ಸರದಿ ಬಂದಾಗ, ಹಿಂದೆ ಇದರ ಪರಿಣಾಮದಿಂದಾದ ತನ್ನ ಗೆಳತಿಯರ ಆತ್ಮಹತ್ಯೆಯಂತಹ ಘಟನೆಗಳು ನೆನಪಿಗೆ ಬರುತ್ತವೆ. ಆದರೆ ವಿಧಿಯಿಲ್ಲದೆ ಈ ದುರಂತಕೂಪಕ್ಕೆ ಸಿಕ್ಕುವ ಕೋಮಲ ಸೇವಾ ಸಮಾಜದ ಶಿವರಾಮರೆಡ್ಡಿ ಹಾಗೂ ಮಂತ್ರಿಯೊಬ್ಬನಿಂದ ಅತ್ಯಾಚಾರಕ್ಕೆ ಒಳಗಾಗುತ್ತಾಳೆ.

ವೈದೇಹಿ ಅವರ 'ಅಮ್ಮಚ್ಚಿಯೆಂಬ ನೆನಪು' ಕಥೆಯಲ್ಲಿ ಸೀತತ್ತೆಯ ಒಬ್ಬಳೇ ಮಗಳು 'ಅಮ್ಮಚ್ಚಿ'. ಗಂಡು ದಿಕ್ಕಿಲ್ಲದ ಆ ಮನೆಯಲ್ಲಿ ಎಲ್ಲದಕ್ಕೂ ಓಡಾಡಿಕೊಂಡಿದ್ದ ವೆಂಕಪ್ಪ ಮುಂದೆ ವೆಂಕಪ್ಪಯ್ಯನಾಗುತ್ತಾನೆ. ತನ್ನ ವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಿಯಂತ್ರಣ ಸಾಧಿಸಲು ಪ್ರಯತ್ನಿಸುವ ವೆಂಕಪ್ಪಯ್ಯನ ನಡೆಯನ್ನು ಸದಾ ವಿರೋಧಿಸುವವಳು ಅಮ್ಮಚ್ಚಿ. ಒಂದು ಸಲ ವೆಂಕಪ್ಪಯ್ಯನ ಮೇಲಿನ ಆಕ್ರೋಶವನ್ನು ಆತನ ಶರ್ಟನ್ನು ವಿರೂಪಗೊಳಿಸುವ ಮೂಲಕ ತೀರಿಸಿಕೊಳ್ಳುತ್ತಾಳೆ. ಆದರೆ ಇದನ್ನೇ ನೆಪ ಮಾಡಿಕೊಳ್ಳುವ ವೆಂಕಪ್ಪಯ್ಯ ಅಮ್ಮಚ್ಚಿಯ ಮೇಲೆ ಅತ್ಯಾಚಾರ ಎಸಗುತ್ತಾನೆ. ವಿಚಿತ್ರವೆಂದರೆ ಈ ಸಂದರ್ಭದಲ್ಲಿ ಅಮ್ಮಚ್ಚಿಯ ತಾಯಿಯೂ ಈ ಕೃತ್ಯವನ್ನು ಪ್ರತಿಭಟಿಸದೆ ಅಸಹಾಯಕಳಾಗುತ್ತಾಳೆ. ಈ ಅಸಹಾಯಕತೆ, ಅನಿವಾರ್ಯತೆಗೆ ತಿರುಗಿ ವೆಂಕಪ್ಪಯ್ಯನೊಂದಿಗೆ ಅಮ್ಮಚ್ಚಿಯ ಮದುವೆಯೂ ಆಗುತ್ತದೆ. 'ಲಲಿತಾ ನಾಯಕ್' ಅವರ 'ನೆಲೆ-ಬೆಲೆ' ಕಾದಂಬರಿಯಲ್ಲಿ ಸಹ ಇಂತಹದೊಂದು ಸನ್ನಿವೇಶ ಬರುತ್ತದೆ. ಶಂಕರನನ್ನು ಪ್ರೀತಿಸಿ ಮದುವೆಯಾಗಲು ಬಯಸಿದ್ದ 'ರಮಾ'ಳ ಮೇಲೆ ಅತ್ಯಾಚಾರವೆಸಗುವ ಮೂಲಕ 'ವರದ' ಆಕೆಯನ್ನು ತನ್ನವಳಾಗಿಸಿಕೊಳ್ಳುತ್ತಾನೆ. ರಮಾ ತಪ್ಪು ತನ್ನದಲ್ಲವೆಂದು ನಿರ್ಭಿಡೆಯಿಂದ ಹೇಳಿದಾಗಲೂ ಶಂಕರ ತಿರಸ್ಕರಿಸುವಂತಾಗಿ, ಕೊನೆಗೆ ಅನಿವಾರ್ಯವಾಗಿ ವರದನನ್ನೇ ಮದುವೆಯಾಗುತ್ತಾಳೆ.

ಗೀತಾ ಅವರ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿಯೂ ಲಚ್ಚಿ ಚಿಕ್ಕದೊಂದು ತಪ್ಪಿಗಾಗಿ ಊರ ಕುಲಕರ್ಣಿಯ ಮೋಸದಿಂದ ಜೈಲು ಪಾಲಾಗಿ, ಪೋಲೀಸ್‌ರಿಂದ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಇದೇ ಕಾರಣಕ್ಕೆ ತನ್ನ ಪ್ರಿಯಕರನಿಂದ ದೂರವಾಗಿ 'ಸ್ತ್ರೀ ನಿಕೇತನ'ಕ್ಕೆ ಸೇರುತ್ತಾಳೆ. ಲಚ್ಚಿಯಂತಹ ನಿರಾಶ್ರಿತೆಗೆ ಆಶ್ರಯ ನೀಡಬೇಕಾಗಿದ್ದ 'ಸ್ತ್ರೀ ನಿಕೇತನ'ದಲ್ಲಿ ಆಕೆಯನ್ನು ವೇಶ್ಯಾವಾಟಿಕೆ ದಂಧೆಗೆ ದೂಡಲಾಗುತ್ತದೆ. ಅಲ್ಲಿಂದ ಲಚ್ಚಿಯ ಬದುಕು ಮತ್ತಷ್ಟು ದುರಂತ ತಿರುವನ್ನು ಪಡೆಯುತ್ತದೆ.

ಲಲಿತಾನಾಯಕ್ ಅವರ 'ನೆಲೆ-ಬೆಲೆ ಕಾದಂಬರಿಯಲ್ಲಿ ಜಯಾ ಗಂಡನ ಮನೆಯನ್ನು ಬಿಟ್ಟು ಕಾಂತಯ್ಯನ ಹೆಂಡತಿಯ ಬಾಣಂತನಕ್ಕಾಗಿ ಪಟ್ಟಣಕ್ಕೆ ಬರುತ್ತಾಳೆ. ರಮಾಳ ಗಂಡ 'ವರದ'ನಿಂದ ಲೈಂಗಿಕ ಆಕ್ರಮಣವಾದಾಗ ಜಯಾ ತನ್ನ ಜಾಣ್ಮೆಯಿಂದ ತಪ್ಪಿಸಿಕೊಳ್ಳುತ್ತಾಳೆ. ಆದರೆ ಮುಂದೊಂದು ದಿನ ಆಕೆಗೆ ಮಕ್ಕಳಾಗಲಿಲ್ಲವೆಂದು ಗಂಡನಿಗೆ ಎರಡನೆಯ ಮದುವೆ ಏರ್ಪಾಟಾಗುತ್ತದೆ. ಮದುವೆಯ ಹಿಂದಿನ ರಾತ್ರಿ ಜಯಾಳ ಮೇಲೆ ಅತ್ಯಾಚಾರ ನಡೆದುಹೋಗುತ್ತದೆ. ಈ ಕೃತ್ಯ ಮಾಡಿದವರು ಯಾರೆಂಬ ಪ್ರಶ್ನೆ ಜಯಾಳಿಗೆ ಭೂತಾಕಾರವಾಗಿ ಕಾಡುತ್ತದೆ. ಆಗ "ಎಂತಹ ಶೋಚನೀಯ ಪರಿಸ್ಥಿತಿ ಹೆಣ್ಣಿನದು; ತನ್ನ ಮೇಲೆ ಅತ್ಯಾಚಾರ ನಡೆದರೂ ಅದರ ಬಗ್ಗೆ ಬಾಯಿ ಬಿಡುವಂತಿಲ್ಲ. ವಿಚಾರಿಸುವ, ಖಂಡಿಸುವ ದಿಟ್ಟತನ ತೋರುವಂತಿಲ್ಲ. ಈ ಅಸಮಾನತೆಗೆ ಕೊನೆಯೇ ಇಲ್ಲವೇ"[೫೪] ಎಂದು ಜಯಾ ತನ್ನಲ್ಲೇ ಪ್ರಶ್ನಿಸಿಕೊಳ್ಳುತ್ತಾಳೆ.

ವೀಣಾ ಅವರ 'ಶೋಷಣೆ, ಬಂಡಾಯ ಇತ್ಯಾದಿ' ಕಾದಂಬರಿಯಲ್ಲಿ ತಂದೆಯ ಖಾಯಿಲೆ, ತಾಯಿಯ ಕಷ್ಟ, ತಮ್ಮನ ಬೇಜವಾಬ್ದಾರಿತನಗಳಲ್ಲಿ ತತ್ತರಿಸಿದ ಪಾತ್ರ ಲೀಲಾ ಕುಲಕರ್ಣಿಯದು. ತನ್ನ ಶಿಕ್ಷಣ, ಅರ್ಹತೆಗಳಿಂದ ಬ್ಯಾಂಕ್ ಉದ್ಯೋಗಿಯಾಗಿ ಮನೆಯನ್ನೂ ನಿರ್ವಹಿಸುವ ಲೀಲಾ 'ಪ್ರಮೋಶನ್' ಹೆಸರಿನಲ್ಲಿ ಆಫೀಸಿನ ಬಾಸ್‌ನಿಂದ ಲೈಂಗಿಕ ಶೋಷಣೆಗೆ ಒಳಗಾಗುತ್ತಾಳೆ. ತನ್ನ ಕುಟುಂಬದ ನಿರ್ವಹಣೆಗಾಗಿ ಲೀಲಾಗೆ ಈ ಸಂಬಂಧ ಅನಿವಾರ್ಯವೂ ಆಗುತ್ತದೆ. ಪ್ರಮೋಶನ್ ನೀಡುವುದಾಗಿ ನಂಬಿಸುವ ಬಾಸ್‌ನಿಂದ ಮತ್ತೆ ಮತ್ತೆ ಶೋಷಣೆ ಮುಂದುವರೆದು, ಪ್ರಮೋಶನ್ ಜೊತೆಗೆ 'ಸಿಫಿಲಿಸ್' ಕಾಯಿಲೆಯೂ ಬಳುವಳಿಯಾಗಿ ದೊರೆಯುತ್ತದೆ. ಆಧುನಿಕತೆಯ ಪರಿಣಾಮ ಶಿಕ್ಷಣ, ಉದ್ಯೋಗ, ಬಾಹ್ಯ ಜಗತ್ತಿನ ಅರಿವಿನೊಂದಿಗೆ ಹೆಣ್ಣು ಸುಶಿಕ್ಷಿತಳಾಗುತ್ತಿದ್ದಾಳೆ ಎಂಬುದು ಸಮಾಧಾನಕರ ಸಂಗತಿ. ಆದರೆ ಇದರೊಂದಿಗೆ ಔದ್ಯೋಗಿಕ ಕ್ಷೇತ್ರದಲ್ಲಿ ಹೆಣ್ಣು ಅನುಭವಿಸುವ ಶೋಷಣೆಯ ಸ್ವರೂಪವನ್ನು ಸಹ ಪ್ರಸ್ತುತ ಕಥೆ ಕಟ್ಟಿಕೊಡುತ್ತದೆ. ದಶಕಗಳು ಕಳೆದರೂ ಇತ್ತೀಚಿನ ದಿನಮಾನಗಳಲ್ಲಿ ಸಹ ಔದ್ಯೋಗಿಕ ಕ್ಷೇತ್ರದಲ್ಲಿ ಹೆಣ್ಣಿನ ಸುರಕ್ಷತೆ ಬಿಕ್ಕಟ್ಟಿಗೆ ಸಿಲುಕಿರುವುದು ವಾಸ್ತವ. ಈ ಬಗೆಯ ಔದ್ಯೋಗಿಕ ಸ್ಥಳಗಳಲ್ಲಿ ಹೆಣ್ಣಿನ ಮೇಲಿನ ಲೈಂಗಿಕ ದೌರ್ಜನ್ಯ ತಡೆಗೆ ೧೯೯೭ರಲ್ಲಿ ಸುಪ್ರೀಂಕೋರ್ಟ್ ಉದ್ಯೋಗದ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಲೈಂಗಿಕ ದೌರ್ಜನ್ಯದಿಂದ ರಕ್ಷಣೆ ನೀಡುವ ಜವಾಬ್ದಾರಿ ಉದ್ಯೋಗದಾತರದ್ದು ಎಂದು ಸ್ಪಷ್ಟ ನಿರ್ದೇಶನಗಳನ್ನು ಹೊರಡಿಸಿತು. ಮುಂದೆ ಇವೇ ನಿರ್ದೇಶನಗಳು 'ಲೈಂಗಿಕ ದೌರ್ಜನ್ಯ ತಡೆ ಕಾಯ್ದೆ'ಯಾಗಿ ೨೦೧೩ರಲ್ಲಿ ಜಾರಿಗೆ ಬಂತು. ಮತ್ತೊಂದು ಗಮನಾರ್ಹ ಸಂಗತಿಯೆಂದರೆ ಇಂತಹ ಮಹತ್ವದ ಕಾಯ್ದೆಗೆ ಪರೋಕ್ಷವಾಗಿ ೧೯೮೫ರಲ್ಲಿ ಮಹಿಳಾ ಸಬಲೀಕರಣದಂತಹ ಕಾರ್ಯಕ್ರಮದಲ್ಲಿ ಸಾಮಾಜಿಕ ಕಾರ್ಯಕರ್ತೆಯಾಗಿ ಕೆಲಸ ಮಾಡುತ್ತಿದ್ದ 'ಭನ್ವಾರಿದೇವಿ'ಯಂತಹ ದಿಟ್ಟ ಹೆಣ್ಣುಮಕ್ಕಳ ಹೋರಾಟಗಳು ಸಹ ಪ್ರಬಲ ಕಾರಣವಾದವು ಎನ್ನುವುದನ್ನು ನಿರಾಕರಿಸು

ವಂತಿಲ್ಲ. ಹಾಗಾಗಿ ಅಂದಿನ ದಿನಮಾನಗಳಲ್ಲಿಯೇ ಉದ್ಯೋಗಸ್ಥ ಹೆಣ್ಣು ಎದುರಿಸುವ ಲೈಂಗಿಕ ದೌರ್ಜನ್ಯ ಹಾಗೆಯೇ ಇವುಗಳನ್ನು ಹೇಳಿಕೊಳ್ಳಲಾಗದ ಸ್ಥಿತಿಯಲ್ಲಿನ ಆಕೆಯ ತೊಳಲಾಟದಂತಹ ವಾಸ್ತವ ಸಂಗತಿಗಳನ್ನು ಅಂದಿನ ಕಾಲಮಾನಕ್ಕೆ ಗ್ರಹಿಸಿ ಬರೆದಿರುವುದು ವೀಣಾ ಅವರ ಸಾಧನೆಯೇ ಸರಿ.

ಗೀತಾ ಅವರ 'ನೀಲಗಂಗಾ' ಕಾದಂಬರಿಯಲ್ಲಿ ಕಾಳಿಂಗಪ್ಪ ಸಾವ್ಕಾರ ತನ್ನ ಆಳುಮಗ ಮಲ್ಲೇಶಿಯ ಹೆಂಡತಿ 'ನೀಲಗಂಗಾ'ಳನ್ನು ಅಸಹಾಯಕಳನ್ನಾಗಿಸಿ, ಲೈಂಗಿಕ ಶೋಷಣೆ ಎಸಗುತ್ತಾನೆ. ತನ್ನ ಗಂಡನ ಮೇಲೆ ಸಾವ್ಕಾರ ಒಡ್ಡಿದ ಜೀವ ಬೆದರಿಕೆ ಸತ್ಯ ಹೇಳುವ ಆಕೆಯ ಧೈರ್ಯವನ್ನು ಕುಗ್ಗಿಸುತ್ತದೆ. ಇದನ್ನು ಅರಿಯದ ಮಲ್ಲೇಶಿ ಮತ್ತು ಸಾವ್ಕಾರನ ದೌರ್ಜನ್ಯದ ನಡುವೆ ನೀಲಗಂಗಾ ನಲುಗಿ ಹೋಗುತ್ತಾಳೆ. ಆದರೆ ಮುಂದೊಂದು ದಿನ ಮಲ್ಲೇಶಿ ವಿಷಯ ತಿಳಿದು ಆತ್ಮಹತ್ಯೆ ಮಾಡಿಕೊಂಡಾಗ ನೀಲಗಂಗಾ ಅರೆಹುಚ್ಚಿಯಾಗುತ್ತಾಳೆ. ಇದೇ ಕಾದಂಬರಿಯ ಮತ್ತೊಂದು ಪಾತ್ರವಾದ 'ಲಚ್ಚಿ' ಹಾರುವರ ರಾಮಪ್ಪನಿಂದ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಸುದ್ದಿ ತಿಳಿದ ಗಂಡ ಮಾನಿಂಗ ಪಂಚಾಯತಿ ಸೇರಿಸಿದಾಗ "ನ್ಯಾಯದ ಪರಕಾರ ಮಾನಿಂಗನಾಗಲಿ ರಾಮಪ್ಪ ಆಗಲಿ ಇಬ್ಬರೂ ತಪ್ಪಿತಸ್ಥರಲ್ಲ. ಲಚ್ಚಿನೇ ಇದಕ್ಕೆಲ್ಲ ತಪ್ಪಿತಸ್ಥಳು, ಹೆಣ್ಣಾಂಬಾದು ಭಾಳ ಕೆಟ್ಟದು, ಮಾಯಾ ಮೋಹಾ ಹುಟ್ಟಸ್ತಾದ. ಗಂಡಸರ ಬಾಯಿಗಿ ಜೊಲ್ಲ ಸುರಸ್ತದ, ಇದರವ್ವನಾ ಈ ಲಚ್ಚಿಗೆ ಹೊಡೀಬೇಕು ಮಚ್ಚೀಲಿ ನಮ್ಮೂರ ಮಾನಮರ್ವಾದಿ ಕಳ್ಯಾ ಕೆಲಸ ಮಾಡ್ಯಾಳಿಕಿ. ಈಕಿಗಿ ಇನ್ನ ನಮ್ ಹಳ್ಳ್ಯಾಗ ಜಾಗ ಇಲ್ಲ"[೩೩] ಎಂದು ಊರಿನ ಮುಖಂಡರು ಬಹಿಷ್ಕಾರ ಹಾಕುತ್ತಾರೆ. ಇದರಿಂದ ನೊಂದ ಲಚ್ಚಿ ಮಾರನೆಯ ದಿನ 'ನ್ಯಾಯದ ಚಾವಡಿ' ಮುಂದಿನ ಆಲದ ಮರಕ್ಕೆ ಉರುಳು ಹಾಕಿಕೊಂಡು ಸಾಯುತ್ತಾಳೆ. ಕಾದಂಬರಿಯಲ್ಲಿ 'ನ್ಯಾಯದ ಚಾವಡಿ', ಆಲದ ಮರಗಳನ್ನು ಪ್ರತಿಮಾತ್ಮಕವಾಗಿ ತೆಗೆದುಕೊಳ್ಳುವ ಲೇಖಕಿ ಲಚ್ಚಿಯ ಸಾವಿನಲ್ಲೂ ವ್ಯವಸ್ಥೆಯ ವಿರುದ್ಧದ ಪ್ರತಿರೋಧದ ದನಿಯನ್ನು ಎತ್ತಿದ್ದಾರೆ.

ಇಂತಹದೇ ಸನ್ನಿವೇಶ 'ಕಾಗೆಮುಟ್ಟಿತು' ಕಾದಂಬರಿಯಲ್ಲಿಯೂ ಗಮನಿಸಲಾಗಿದೆ. 'ಮೂಕ್ಯಾ' ಮಾಡಿದ ಸಾಲಕ್ಕಾಗಿ ಆತನ ಹೆಂಡತಿ 'ಚೆನ್ನಿ' ಕುಲಕರ್ಣಿಯ ಕಾಮದಾಹಕ್ಕೆ ಬಲಿಯಾಗುತ್ತಾಳೆ. ವಿಷಯ ತಿಳಿದ ಮೂಕ್ಯಾ ಗೌಡನ ವಿರುದ್ಧ ಪಂಚಾಯತಿ ಸೇರಿಸುತ್ತಾನೆ. ಆದರೆ, ಮೂಕ್ಯಾನಿಂದ ಚೆನ್ನಿಯನ್ನು ದೂರಮಾಡಿ, ಆಕೆಯನ್ನು ಕುಲಕರ್ಣಿಯೇ ಸಾಕಬೇಕೆಂದು ತೀರ್ಪನ್ನು ನೀಡಲಾಗುತ್ತದೆ. ಇದನ್ನು ಸುಲಭವಾಗಿ ಒಪ್ಪಿದ ಮೂಕ್ಯಾ ಹೆಂಡತಿಯನ್ನು ಕುಲಕರ್ಣಿ ಮನೆಗೆ ಕಳಿಸುತ್ತಾನೆ. ಆದರೆ ಚೆನ್ನಿ ಒತ್ತಾಯದಿಂದ ನನ್ನ ಮೇಲೆ ದೌರ್ಜನ್ಯ ಎಸಗಿದ ಗೌಡ ಹಾಗೂ ತನ್ನನ್ನು ಮಾರಿಕೊಂಡ ಮೂಕ್ಯಾನಿಗೆ ಶಿಕ್ಷೆ ಕೊಡಬೇಕೆಂದು ಪ್ರತಿಪಾದಿಸುತ್ತಾಳೆ. ಲಚ್ಚಿಯ ಮೇಲಿನ

ದೌರ್ಜನ್ಯ ಆಕೆಯ ಸಾವಿನಲ್ಲಿ ಕೊನೆಯಾದರೆ, ಚೆನ್ನಿಯಲ್ಲಿ ಪ್ರತಿಭಟನೆಯ ರೂಪ ತಾಳುವ ವೈವಿಧ್ಯ ಚಿತ್ರಣಗಳು ಗೀತಾ ಅವರ ಈ ಎರಡು ಕಾದಂಬರಿಗಳಲ್ಲಿವೆ.

ಲಲಿತಾನಾಯಕ್ ಅವರ 'ಲೂಟಿ' ಕಥೆಯಲ್ಲಿ 'ಖೀರು' ಗೌಡರ ಹೊಲಕ್ಕೆ ಗೊಬ್ಬರ ಹೊರಲು ಹೋದಾಗ ಸಂಭವಿಸಿದ ದುರಂತದಲ್ಲಿ ಹಾಸಿಗೆ ಹಿಡಿಯುತ್ತಾನೆ. ಸಂಸಾರದ ಇಡೀ ಜವಾಬ್ದಾರಿ ಹೆಂಡತಿ 'ರಾಮಿ'ಯದ್ದಾಗುತ್ತದೆ. ಗೌಡನ ನೆರವೂ ಸಿಗದೆ, ಆತನ ಚಿಕಿತ್ಸೆ, ಜೀವನ ನಿರ್ವಹಣೆ ಕಷ್ಟವಾಗುತ್ತದೆ. ಒಮ್ಮೆ ಕಟ್ಟಿಗೆಗಾಗಿ ರಾಮಿ ದುರ್ಗಕ್ಕೆ ಹೋಗುತ್ತಾಳೆ. ಕಾಡು ಪ್ರಾಣಿಗಳ ಕುರಿತು 'ಬಾಬಣ್ಣ' ನೀಡಿದ್ದ ಎಚ್ಚರಿಕೆಗಿಂತಲೂ ಆಕೆಯ ಗಂಡ ಮಗುವಿನ ಚಿಕಿತ್ಸೆಯೇ ಮುಖ್ಯವಾಗುತ್ತದೆ. ಅದೇ ಧೈರ್ಯದಲ್ಲಿ ಕಟ್ಟಿಗೆ ಸಂಗ್ರಹಿಸಿದ ರಾಮಿ ಕಾಡಿನಲ್ಲಿ ಕರಡಿಯ ವಿಪತ್ತಿನಿಂದ ಪಾರಾಗುತ್ತಾಳೆ. ನಂತರ ಅಲ್ಲಿಗೆ ಬಂದ ಇಬ್ಬರು ಗಂಡಸರನ್ನು ನೋಡಿ ಆಕೆಗೆ "ಎರಡನೆಯ ಬಾರಿ ಕರಡಿಯ ದರ್ಶನವಾದಂತೆ ಅನ್ನಿಸುತ್ತದೆ". ರಾಮಿಯ ಮೇಲೆ ದೌರ್ಜನ್ಯ ಎಸಗಿ, ಇಬ್ಬರೂ ಆಕೆಯ ಕಾಲಿನ ಗೆಜ್ಜೆ, ಮಾನದ ಜೊತೆಗೆ ಜೀವನಾಧಾರವಾದ ಕೊಡಲಿಯನ್ನೂ ಅಪಹರಿಸುತ್ತಾರೆ. ಇದರಿಂದ ರೋಷಗೊಂಡ ರಾಮಿ "ನೀವು ಯಾವ ಗವಿಯಾಗ ಹೋಗಿ ಅವಿತುಕೊಂಡ್ರೂ ನಾ ಬಿಡಂಗಿಲ್ರೋ! ನನ್ನ ಕೊಡ್ಲಿ ಕಸಗೊಂಡು ಅದರಿಂದ ನಿಮ್ಮನ್ನ ಸಣ್ಣಗ್ ಕಡಿದು ಚೂರ್ ಚೂರ್ ಮಾಡಿದಮ್ಯಾಲೇ ನಾ ಮನಿಗ ಹೋಗ್ತಿನ್ರೋ!"[೫೬] ಎಂದು ಚೀತ್ಕರಿಸುತ್ತಾ ದಟ್ಟಡವಿಯಲ್ಲಿ ಓಡ ತೊಡಗುತ್ತಾಳೆ. ಹಸಿವು, ಬಡತನಗಳ ನಡುವೆ ತನ್ನ ಮೇಲೆ ದೌರ್ಜನ್ಯವೆಸಗುವರ ವಿರುದ್ಧ ಪ್ರತೀಕಾರದ ಕಿಚ್ಚು ರಾಮಿಯ ಈ ಮಾತುಗಳಲ್ಲಿ ವ್ಯಕ್ತವಾಗುತ್ತದೆ.

ಹೀಗೆ ಸಮ್ಮತವಲ್ಲದ ವಿವಾಹಬಾಹಿರ ಸಂಬಂಧ, ಲೈಂಗಿಕ ದೌರ್ಜನ್ಯಗಳಿಗೆ ಒಳಗಾಗುವ ಸ್ತ್ರೀಪಾತ್ರಗಳಲ್ಲಿ ಪುರುಷ ಸಮುದಾಯದ ವಿರುದ್ಧ ಪ್ರತಿಭಟನೆಯಿದ್ದರೂ ಸಾಮಾಜಿಕ ಸಂದರ್ಭದಲ್ಲಿ ಸಫಲವಾಗದೆ ದುರಂತ ಕಾಣುತ್ತವೆ. ಮತ್ತೆ ಕೆಲವೆಡೆ ಶೋಷಣೆಗಳ ವಿರುದ್ಧ ಹೊಸದೊಂದು ಜಾಗೃತಿ, ಪಾತ್ರಗಳಲ್ಲಿ ಅಭಿವ್ಯಕ್ತಗೊಂಡಿವೆ. ಆದರೆ ಈ ಬಗೆಯ ಶೋಷಣೆಗೆ ಸಂಬಂಧಿಸಿದ ಸನ್ನಿವೇಶಗಳು ಭಾವನಾತ್ಮಕ, ದೈಹಿಕ, ಮಾನಸಿಕವಾಗಿ ನರಳಿಸುವುದು ಹೆಣ್ಣನ್ನೇ ಹೊರತು ಗಂಡನ್ನಲ್ಲ. ಅದೇ ರೀತಿ ಅತ್ಯಾಚಾರ, ಲೈಂಗಿಕ ದೌರ್ಜನ್ಯಗಳ ಕುರಿತಾಗಿ ಕಾನೂನಾತ್ಮಕವಾಗಿ ಕಠಿಣ ಕ್ರಮಗಳೇನೋ ಜಾರಿಯಲ್ಲಿವೆ. ಆದರೆ ಹಣ, ಅಧಿಕಾರ, ಪ್ರತಿಷ್ಠೆಗಳ ಬಲಪ್ರಯೋಗದ ಮೂಲಕ ಎಷ್ಟೋ ಪ್ರಕರಣಗಳು ಕಾನೂನಿನ ಅರಿವಿನಲ್ಲಿ ಬರದೆ ಮುಚ್ಚಿ ಹೋಗುತ್ತವೆ. ಮತ್ತೆ ಕೆಲವು ಪ್ರಕರಣಗಳು ಕಾನೂನಿನ ನೆರವನ್ನು ಬಯಸಿ ಹೋದರೂ ಗೆಲುವು ಸಾಧಿಸಿ ತಾರ್ಕಿಕ ಅಂತ್ಯವನ್ನು ಕಾಣದೆ ಸೋಲುತ್ತವೆ. ಇದಕ್ಕೆಲ್ಲ ಕಾರಣ ಕಾನೂನು, ಆಡಳಿತ ವ್ಯವಸ್ಥೆ ಇತ್ಯಾದಿಗಳೆಲ್ಲವೂ ಬಹುತೇಕ ಪುರುಷ ವ್ಯವಸ್ಥೆಯ ಪರವಾಗಿ ನಿಂತಿರುವುದು. ಹಾಗೆಯೇ ಎಷ್ಟೋ ಸಲ ಇಂತಹ ದೌರ್ಜನ್ಯಗಳಿಗೆ ಒಳಗಾದ ಹೆಣ್ಣನ್ನೇ ಸಮಾಜ ದೋಷಿಯನ್ನಾಗಿ,

ಪೂರ್ವಗ್ರಹ ಪೀಡಿತವಾಗಿ ಕಾಣುತ್ತದೆ. ಇದೇ ಕಾರಣಕ್ಕೆ ಮಹಿಳೆಯ ಪರವಾದ ಎಷ್ಟೇ ಕಠಿಣ ಕಾನೂನು ಕ್ರಮಗಳು ಜಾರಿಯಾದರೂ ಅವುಗಳು ಪರಿಣಾಮಕಾರಿ ಅನ್ವಯ ಇನ್ನೂ ಸುಲಭ ಸಾಧ್ಯವಾಗಿಲ್ಲ.

### ೪.೫. ಮಾದರಿ ಪಾತ್ರ ವಿವೇಚನೆ: ವಿಧವೆ, ಅವಿವಾಹಿತೆ, ಪರಿತ್ಯಕ್ತೆ

ಸಾಮಾಜಿಕ ವ್ಯವಸ್ಥೆಯಲ್ಲಿ ತನ್ನ ಜೀವಿತದ ಏಕೈಕ ಗುರಿ ಆಸರೆ ಎಂದು ಭಾವಿಸಿರುವ ಪುರುಷ ಶಕ್ತಿಯ ಹೊರತಾಗಿ ಬದುಕುವುದು ಅಸಾಧ್ಯ ಎಂಬಷ್ಟು ಕೀಳರಿಮೆಯನ್ನು ಯಜಮಾನ ಸಂಸ್ಕೃತಿ ಹೆಣ್ಣಿನಲ್ಲಿ ತುಂಬಿಸಿದೆ. ಹಾಗಾಗಿ ವಿವಾಹ ಸಂಸ್ಥೆಯನ್ನು ತಿರಸ್ಕರಿಸಿ ಬದುಕುವ ಅವಿವಾಹಿತೆಯರು, ಗಂಡನ ಅನುಪಸ್ಥಿತಿಯಲ್ಲಿ ಬದುಕುವ ಪರಿತ್ಯಕ್ತೆಯರು ಮತ್ತು ವಿಧವೆಯರ ಜೀವನ ಸವಾಲಿನದಾಗಿರುತ್ತದೆ. ಸಾಲದೆಂಬಂತೆ ಪಿತೃಪ್ರಧಾನ ಸಂಸ್ಕೃತಿ ಆರೋಪಿಸಿರುವ ನಿಷ್ಠುರದ ನೀತಿ-ನಿಯಮ, ಸಾಮಾಜಿಕ, ಲೈಂಗಿಕ ನಿರ್ಬಂಧಗಳಲ್ಲಿ ಬದುಕುವ ಸಂದಿಗ್ಧತೆ ಇವರದಾಗಿದೆ.

ವಿವಾಹೇತರ ಸಂಬಂಧ, ತಾಯ್ತನ, ವೈಯಕ್ತಿಕ ಹಿತಾಸಕ್ತಿಗಳ ಹೆಸರಿನಲ್ಲಿ ಗಂಡನಿಂದ ದೂರವಾಗುವ ಪರಿತ್ಯಕ್ತೆಯರು, ಗಂಡನನ್ನು ಕಳೆದುಕೊಂಡು ವೈಧವ್ಯದ ಕಟ್ಟುಪಾಡುಗಳಲ್ಲಿ ಬದುಕುವ ವಿಧವೆಯರು, ನಾನಾ ಕಾರಣಗಳಿಂದ ವಿವಾಹದ ಚೌಕಟ್ಟಿನಿಂದ ವಿಮುಖರಾದ ಅವಿವಾಹಿತೆಯರ ಪಾತ್ರಗಳು ಸಹ ಆಯಾ ಕಾಲಮಾನದ ಲೇಖಕಿಯರ ಕಥಾಸಾಹಿತ್ಯದಲ್ಲಿ ವಿಭಿನ್ನ ರೀತಿಯಲ್ಲಿ ಚಿತ್ರಣಗೊಂಡಿವೆ. ಈ ಚಿತ್ರಣಗಳು ಹಲವು ಬಾರಿ ಪಿತೃಪ್ರಧಾನ ಸಂಸ್ಕೃತಿಗೆ ಅಧೀನವಾಗಿ ಮತ್ತೆ ಕೆಲವು ಕಡೆ ಮೀರುವಂತೆಯೂ ಕಾಣಿಸಿಕೊಂಡಿವೆ. ಈ ಬಗೆಯ ವೈರುಧ್ಯಗಳನ್ನು ಮಹಿಳಾ ದಶಕದ ಚಿಂತನೆಗಳ ಹಿನ್ನೆಲೆಯ ಪ್ರಾತಿನಿಧಿಕ ಲೇಖಕಿಯರ ಕಥಾ ಸಾಹಿತ್ಯವನ್ನಾಧರಿಸಿ ಸ್ತ್ರೀವಾದಿ ವಿಮರ್ಶೆಯನ್ನು ಕೈಗೊಳ್ಳಲಾಗಿದೆ.

#### ೪.೫.೧. ವಿಧವೆ

ಪಿತೃ ಸಂಸ್ಕೃತಿಯು ಗಂಡಿನ ಯಜಮಾನಿಕೆಯ ಪ್ರಾತಿನಿಧಿಕ ರೂಪಕವಾಗಿದೆ. ಹೆಣ್ಣಿನ ವ್ಯಕ್ತಿತ್ವ ನಿಯಂತ್ರಣ, ತಾಯ್ತನ ಹಾಗೂ ಪಾತಿವ್ರತ್ಯ ಸಾಮಾಜಿಕ ಮೌಲ್ಯಗಳ ಹೆಸರಿನಲ್ಲಿ ಅಸ್ತಿತ್ವದಲ್ಲಿರುವ ಪಿತೃರೂಪಿ ರಾಜಕಾರಣದ ಪ್ರಮುಖ ಅಂಶಗಳಾಗಿವೆ. ಆದರೆ ಸಾಮಾಜಿಕ ಮೌಲ್ಯಗಳು ಮೇಲ್ನೋಟಕ್ಕೆ ಗಂಡು-ಹೆಣ್ಣಿಗೆ ಸಮಾನ ನೆಲೆಯಲ್ಲಿ ರೂಪಿತವಾಗಿವೆ ಎನಿಸಿದರೂ ಅವುಗಳ ಪಾಲನೆಯಲ್ಲಿ ತಾರತಮ್ಯ ಇದ್ದೇ ಇದೆ. ಇಂತಹ ಮೌಲ್ಯಗಳಲ್ಲಿ ಗಂಡನ ಮರಣದ ನಂತರದಲ್ಲಿ ಹೆಣ್ಣು ಆಚರಿಸುವ ವೈಧವ್ಯವೂ ಒಂದು. "ಹೆಣ್ಣಿಗೆ ಲೈಂಗಿಕ ಸ್ವಾತಂತ್ರ್ಯವಿಲ್ಲ.

ಆದ್ದರಿಂದ ಅವಳಿಗೆ ಪುನರ್ವಿವಾಹವಿಲ್ಲ"(ಮನುಸ್ಮೃತಿ ೫–೧೫೮, ೧೬೦, ೯–೬೫) ಎಂದು ಪೂರ್ವಕಾಲದಿಂದಲೇ ಹೇಳಲಾಗಿದೆ.

ವೈಧವ್ಯದ ಅಸ್ತಿತ್ವವನ್ನು ಕುರಿತಾಗಿ ಶೈಲಜಾ ಹಿರೇಮಠ ಅವರು "ವೈದಿಕ ಮೂಲದಿಂದಲೇ ವೈಧವ್ಯದ ಪರಿಕಲ್ಪನೆ ಮೂಡಿದೆ. ಮಾತೃಪ್ರಧಾನ ಘಟ್ಟದಲ್ಲಿ ವಿವಾಹ, ವೈಧವ್ಯ ಎರಡೂ ರೂಪಗಳು ಅಸ್ತಿತ್ವದಲ್ಲಿರಲಿಲ್ಲ. ವೈದಿಕ ಸಂಸ್ಕೃತಿ ಪ್ರಬಲವಾಗಿ ಶ್ರೇಷ್ಠತೆಯ ಹಣೆಪಟ್ಟಿ ಕಟ್ಟಿಕೊಂಡು ಮೆರೆಯತೊಡಗಿದಾಗ ಮಾತೃಪ್ರಧಾನ ಘಟ್ಟದ ಎಲ್ಲ ಆಚರಣೆಗಳು ಕಣ್ಮರೆಯಾದವು. ಭಾರತದಲ್ಲಿನ ಅನೇಕ ಜಾತಿಧರ್ಮಗಳಿಗೆ ವೈದಿಕ ಸಂಪ್ರದಾಯದ ಪ್ರಭಾವ ವಲಯದಿಂದ ಬಿಡಿಸಿಕೊಳ್ಳಲಾಗಲಿಲ್ಲ. ಇದರ ಪರಿಣಾಮದಿಂದಲೇ ಭಾರತದಲ್ಲಿ ವೈಧವ್ಯ ಎನ್ನುವುದು ತೀವ್ರತರ ಸಮಸ್ಯೆಯಾಗಿ ಕಾಡಿದೆ"[೫೭] ಎಂದು ಹೇಳುತ್ತಾರೆ. ವೈಧವ್ಯದ ಆಚರಣೆಗಳು ಹೆಣ್ಣನ್ನು ದೈಹಿಕ, ಮಾನಸಿಕ ಹಿಂಸೆಗೆ ಒಳಗು ಮಾಡುತ್ತಲೇ ಬಂದಿವೆ. ಜೊತೆಗೆ ಅವರಿಗೆ ಸಿಗಬಹುದಾದ ಕನಿಷ್ಠ ಗೌರವ, ಸಾಂತ್ವನಗಳೂ ಇಲ್ಲದಾಗಿವೆ. ಹೊಸದೊಂದು ಜೀವನವನ್ನು ಮರುಮದುವೆಯ ಮೂಲಕ ಕಟ್ಟಿಕೊಳ್ಳುವ ಅವಕಾಶವನ್ನು ಸಹ ಸಮಾಜ ತಿರಸ್ಕರಿಸುತ್ತಾ ಬಂದಿದೆ. ಈ ಹಂತದಲ್ಲಿಯೇ ಆಕೆಯ ಮೇಲೆ ಇತರೆ ಪುರುಷರಿಂದ ಅಧಿಕಾರ ಸ್ಥಾಪಿಸಲು ಪ್ರಯತ್ನಿಸುವ, ಲೈಂಗಿಕ ದೌರ್ಜನ್ಯ ನಡೆಸುವ, ಸ್ವಾತಂತ್ರ್ಯಹರಣ ಮಾಡುವ, ಕೀಳಾಗಿ ಕಾಣುವ ಪ್ರಯತ್ನಗಳಾಗುತ್ತವೆ. ಇದೇ ವೇಳೆ ಸಮಾಜ ಹೇರುವ ವೈಧವ್ಯದ ಆಚರಣೆಯ ರೀತಿ–ರಿವಾಜುಗಳು ಮತ್ತೊಂದು ಕಡೆ ಹಿಂಸೆಯಾಗಿ ಪರಿಣಮಿಸುತ್ತವೆ. ಈ ಎಲ್ಲ ವಿಚಾರಗಳು ಮಹಿಳಾ ದಶಕದ ಲೇಖಕಿಯರ ಕಥಾಸಾಹಿತ್ಯದ ಸ್ತ್ರೀಪಾತ್ರಗಳಲ್ಲಿ ಅನಾವರಣಗೊಂಡ ಬಗೆಯನ್ನು ಪ್ರಾತಿನಿಧಿಕ ಕಥೆ–ಕಾದಂಬರಿಗಳ ಮೂಲಕ ತಿಳಿಯಲಾಗಿದೆ.

ವೀಣಾ ಅವರ 'ಬಿಡುಗಡೆ' ಕಥೆಯಲ್ಲಿ ಕಥಾನಾಯಕಿ ಸರೋಜಾ ಆರಂಭದಲ್ಲಿ ದಾಂಪತ್ಯದ ಬಗ್ಗೆ ತನ್ನದೇ ಕಲ್ಪನೆಗಳನ್ನು ಹೊಂದಿದವಳು. ಗಂಡನಾದವನು ತನ್ನ ಪ್ರತಿಯೊಂದು ಭಾವನೆಗಳಿಗೆ ಸ್ಪಂದಿಸಿ, ಪಾಲುದಾರನಾಗಬೇಕೆಂದುಕೊಳ್ಳುತ್ತಾಳೆ. ಆದರೆ ವಾಸ್ತವದಲ್ಲಿ ಸರೋಜಾಳ ಭಾವನೆ, ಕ್ರಿಯೆಗಳು ಯಾವುವೂ ಸ್ವತಂತ್ರವಲ್ಲ ಎಲ್ಲವೂ ಆಕೆಯ ವಿರುದ್ಧವಾಗಿವೆ. ಆಕೆಯ ಉದ್ಯೋಗದ ಪ್ರತಿಫಲದಿಂದ ಆರಂಭವಾಗಿ ಉಡುಗೆ, ತೊಡುಗೆ, ಮಾತು, ಆರೋಗ್ಯ ಎಲ್ಲವುಗಳ ಮೇಲೂ ಗಂಡನಾದವನು ನಿಯಂತ್ರಣ ಸಾಧಿಸುತ್ತಾನೆ. ಮುಂದೊಂದು ದಿನ ಆತನ ಸಾವು ಸಂಭವಿಸಿದಾಗ "ದುಃಖವಾಗುತ್ತಿದ್ದರೆ, ಕಸಿವಿಸಿಯಾಗುತ್ತಿದ್ದರೆ, ಸಂತಾಪವಾಗುತ್ತಿದ್ದರೆ ಅದು ಈ ಗಂಡ ಸತ್ತು ಹೋದುದಕ್ಕಾಗಿ ಅಲ್ಲ. ಆತ ಸಾಯಿಸಿದ ತನ್ನ ಅಸಂಖ್ಯ ಕನಸುಗಳಿಗಾಗಿ..."[೫೮] ಎಂದುಕೊಳ್ಳುತ್ತಾ ಅಡಿಗೆ ಮನೆಗೆ ಹೋಗಿ ಹಾಲಿಗೆ ಸಕ್ಕರೆ ಬೆರೆಸಿ ಗಟಗಟ ಕುಡಿದು ಗಂಡನ ಹೆಣವಿರುವ ಪಡಸಾಲೆಗೆ ಬರುತ್ತಾಳೆ.

ಇದೇ ಬಗೆಯ ಕಥಾವಸ್ತು ವೈದೇಹಿ ಅವರ 'ಅಮ್ಮಚ್ಚಿಯೆಂಬ ನೆನಪು' ಕಥೆಯಲ್ಲಿ ಬರುತ್ತದೆ. ತಂದೆಯಿಲ್ಲದೆ ಅಮ್ಮನ ಆಶ್ರಯದಲ್ಲಿ ಬೆಳೆಯುತ್ತಿದ್ದ ಅಮ್ಮಚ್ಚಿಯ ಮೇಲೆ ಅತ್ಯಾಚಾರವೆಸಗಿ ವೆಂಕಪ್ಪಯ್ಯ ಗಂಡನೆಂಬ ಹಕ್ಕು ಸ್ಥಾಪಿಸುತ್ತಾನೆ. ಆತನೊಂದಿಗೆ ಇಷ್ಟವಿಲ್ಲದ ಮದುವೆಯಾಗಿ ತಿರುಪತಿಗೆ ಹೋದ ಅಮ್ಮಚ್ಚಿ ಕೆಲವೇ ದಿನಗಳಲ್ಲಿ ತಾಯಿಯ ಮನೆಗೆ ಮರುಳುತ್ತಾಳೆ. ಒಬ್ಬಳೇ ಏಕೆ ಬಂದೆ ಎಂದು ತಾಯಿ ಸೀತತ್ತೆ ಪ್ರಶ್ನಿಸಿದಾಗ "ಒಬ್ಬಳೇ ಬರದೆ ಮತ್ತೆಂತ ಮಾಡ್ಸದ್ ಅಲ್ಲಿದ್ದ್? ನಿನ್ನ ಯಂಕಪ್ಪಯ್ಯ ನೇಣು ಹಾಕಿಂಡ!"[೫೯] ಎಂದು ನೇರ ಹೋದವಳೇ ನೀರನ್ನು ಮುಖಕ್ಕೆ ಬೀಸಿ ಬಡಿದುಕೊಳ್ಳುತ್ತ ತಿರುಗಿ ತಾಯಿಯನ್ನು ನೋಡುತ್ತಾಳೆ. ಈ ವೇಳೆ ವೆಂಕಪ್ಪಯ್ಯನಿಂದ ತನ್ನ ಬದುಕು ಹೀಗಾಗಲು ತಾಯಿಯೇ ಕಾರಣ ಎಂಬ ಕೋಪದ ನೋಟ ಆಕೆಯದಾಗಿತ್ತು. ಅಲ್ಲಿಯೇ ಇದ್ದ ನಿರೂಪಕಿ ಹಿಂದೆ ಅಮ್ಮಚ್ಚಿ ಇಷ್ಟಪಟ್ಟಿದ್ದ ಶಂಭಟ್ಟರ ಮಗ 'ಸೇಸ' ಬಂದಿರುವ ವಿಷಯ ತಿಳಿಸಿದಾಗಲೂ "ಸಾಯಡ್ ಎಲ್ ಸಾಯಡ್ ಸತ್ತ್ ಮಣ್ಣ್ ತಿನ್ನದ್" ಎನ್ನುವಳು. ಈ ಮೂಲಕ ವೆಂಕಪ್ಪಯ್ಯನಿಂದ ತನಗಾದ ಅನ್ಯಾಯಕ್ಕೆ ಸೇಸನಲ್ಲಿಯೂ ಪ್ರತೀಕಾರ, ತಿರಸ್ಕಾರ ಭಾವ ತಾಳುತ್ತಾಳೆ.

'ಬಿಡುಗಡೆ' ಕಥೆಯ ನಾಯಕಿ ಸರೋಜ ತನ್ನ ಗಂಡನ ಸಾವಿನ ನಿರಾಳತೆಯನ್ನು ಹಾಲು, ಸಕ್ಕರೆ ಕುಡಿಯುವ ಕ್ರಿಯಾತ್ಮಕ ಪ್ರತಿಮೆಯ ಮೂಲಕ ತೋರಿದರೆ, ಅಮ್ಮಚ್ಚಿ ವೆಂಕಪ್ಪಯ್ಯನ ಸಾವಿನ ಸುದ್ದಿಯನ್ನು ತೀರಾ ಸಹಜವೆಂಬಂತೆ ನಿರ್ಭಾವುಕವಾಗಿ ಹೇಳುವ ಮೂಲಕ ಸ್ವಾತಂತ್ರ್ಯದ ಭಾವವನ್ನು ಅನುಭವಿಸುತ್ತಾಳೆ. ಈ ಇಬ್ಬರಿಗೂ ವೈಧವ್ಯ ಬದುಕಿನ ಅತಂತ್ರ, ದುಃಖದ ಸನ್ನಿವೇಶವೆನಿಸದೆ, 'ಬಿಡುಗಡೆ'ಯ ಭಾವವನ್ನು ತಂದುಕೊಡುತ್ತದೆ. ಪ್ರಸ್ತುತ ಕಥೆಗಳಲ್ಲಿ ಲೇಖಕಿಯರು ಈ ಪಾತ್ರಗಳ ಮೂಲಕ ಗ್ರಹಿಸಿರುವ ಸೂಕ್ಷ್ಮ ಸ್ತ್ರೀ ಸಂವೇದನೆಯ ಪರಿಚಯವೂ ಆಗುತ್ತದೆ.

ವೀಣಾ ಅವರ 'ನೆರಳು' ಕಥೆ ವೈಧವ್ಯದ ವಿಭಿನ್ನ ಆಯಾಮವನ್ನು ಕಟ್ಟಿಕೊಡುತ್ತದೆ. ವಿಧಿಯನ್ನೇ ತನ್ನ ಮನಬಂದ ಹಾಗೆ ತಿರುಗಿಸಿ ನಡೆಸುವ ಶಕ್ತಿಯುಳ್ಳ ಮಾಲತಿಯ ತಾಯಿ ವಿದ್ಯಾವಂತೆ, ಶಾಲೆಯ ಮುಖ್ಯಸ್ಥೆಯಾಗಿದ್ದವಳು. ಆದರೆ ಮಾಲತಿಗೆ ತನ್ನ ಅವ್ವನ ಮನಸ್ಸಿನಲ್ಲಿ ಸದಾಶಿವರಾಯನೊಂದಿಗಿನ ಬಾಲ್ಯದ ಪ್ರೀತಿ ಸುಪ್ತಾವಸ್ಥೆಯಲ್ಲಿರುವುದು ತಿಳಿಯದ ವಿಚಾರ. ತನ್ನ ಅಪ್ಪ ಸತ್ತಾಗಲೂ ವಿಚಲಿತವಾಗದಿದ್ದ ಅವ್ವನಿಗೆ ಸದಾಶಿವರಾಯರ ಸಾವಿನಿಂದ ಮತಿಭ್ರಮಣೆಯಾಗುತ್ತದೆ. ಸದಾಶಿವರಾಯನ ಆಕಸ್ಮಿಕ ಮರಣದ ಬಗ್ಗೆ ವಿನೋದವಾಗಿ ಚರ್ಚಿಸಿದಾಗ ಕೆದರಿದ ಕೂದಲು, ಒಡೆದ ಬಳೆ, ಕರಗಿದ ಕುಂಕುಮದ ಅವತಾರ ಹೊತ್ತು ಕೂಗಾಡಿದ್ದಳು. ಅಂದು ಮಾಲತಿ ತನ್ನ ಅವ್ವನನ್ನು ಪೀಡಿಸಿ ಸತ್ಯಾಂಶ ಕೇಳಿದಾಗ "ಮಾಲಿ ನಾ ಇವತ್ತ ವಿಧವಾ ಆದೆ" ಎಂದು ಅತ್ತಿದ್ದಳು. ಇದೇ ಕೊರಗಿನಲ್ಲಿ ಹುಚ್ಚಾಸ್ಪತ್ರೆಗೂ ಸೇರುತ್ತಾಳೆ. "ಸದಾಶಿವ

ನನ್ನ ಇಡೀ ಜೀವನ ನಿನ್ನ ಮರೀಲಿಕ್ಕೆ ಪ್ರಯತ್ನ ಮಾಡೋದ್ರಾಗ ವ್ಯರ್ಥ ಕಳೆದೆ. ನೀ ನನ್ನ ನೆರಳಾಗಿ ನನಗೆ ಬೆನ್ನು ಹತ್ತಿರುವಿ. ನಿನ್ನ ನೆನಪಿನಿಂದ ನನಗ ಬಿಡುಗಡೀನೇ ಇಲ್ಲ. ಇಗಾ ನಾನು ಬಂದೆ ತಡಿ"[೬೦] ಎಂದು ಡೈರಿಯಲ್ಲಿ ಬರೆದಿಟ್ಟ ಅವ್ವನ ಮಾತುಗಳನ್ನು ಮುಂದೊಂದು ದಿನ ಮಾಲತಿ ಓದುತ್ತಾಳೆ. ಇದರಿಂದ ತನ್ನ ಅಪ್ಪನ ಮರಣದ ಬದಲಾಗಿ ಸದಾಶಿವರಾಯನ ಮರಣದ ಮೂಲಕ ತಾಯಿಯ ಅನುಭವಕ್ಕೆ ಬಂದ ವೈಧವ್ಯವೇ ಈ ಸ್ಥಿತಿಗೆ ಕಾರಣವೆಂಬುದನ್ನು ಕೊನೆಯಲ್ಲಿ ಕಂಡುಕೊಳ್ಳುತ್ತಾಳೆ.

ಸಾರಾ ಅಬೂಬಕ್ಕರ್ ಅವರ 'ಯುದ್ಧ' ಕಥೆಯಲ್ಲಿ ಶತ್ರು ರಾಷ್ಟ್ರಗಳ ನಡುವೆ ಯುದ್ಧ ನಡೆಯುವಾಗ ಸೈನಿಕ ವೈದ್ಯನಾದ ರಾಹಿಲ್ ಗಾಯಗೊಂಡು ಮನೆಯೊಂದರಲ್ಲಿ ಆಶ್ರಯ ಕೇಳಿಕೊಂಡು ಬರುತ್ತಾನೆ. ಆಗ ಮನೆಯಲ್ಲಿದ್ದ ಮುದುಕಿ ತನ್ನ ಸೊಸೆಗೆ ಹೆರಿಗೆ ಮಾಡಿಸಲಾಗದೆ ಅಸಹಾಯಕ ಸ್ಥಿತಿಯಲ್ಲಿರುತ್ತಾಳೆ. ರಾಹಿಲ್ ಪ್ರಾಣಾಪಾಯದಲ್ಲಿದ್ದ ಸೊಸೆಯನ್ನು ಕಾಪಾಡುತ್ತಾನಾದರೂ ಮಗು ತೀರಿ ಹೋಗುತ್ತದೆ. ಯುದ್ಧದ ದುರಂತದಲ್ಲಿ ರಾಹಿಲ್ ಹೆಂಡತಿ ಮತ್ತು ಮಗುವನ್ನು ಕಳೆದುಕೊಂಡಿದ್ದರೆ, ಮುದುಕಿ ತನ್ನ ಮಗನನ್ನು ಕಳೆದುಕೊಳ್ಳುತ್ತಾಳೆ. ರಾಜಕೀಯ ಹಿತಾಸಕ್ತಿಗಾಗಿ ನಡೆಯುವ ಯುದ್ಧಗಳು ಎಷ್ಟೆಲ್ಲಾ ಜನರ ಬದುಕನ್ನು ಹಾಳು ಮಾಡುತ್ತವೆಂಬ ಪಶ್ಚಾತ್ತಾಪ, ನೋವಿನ ನಡುವೆ ಮುದುಕಿ ರಾಹಿಲ್‌ನೊಂದಿಗೆ ತನ್ನ ವಿಧವೆ ಸೊಸೆಗೆ 'ಮರುಮದುವೆ' ಮಾಡಿಸುತ್ತಾಳೆ. ವೃದ್ಧಾಪ್ಯದಲ್ಲಿ ಆಕೆಯ ಸಾಮಾಜಿಕ ಸ್ಥಾನಮಾನ, ಧರ್ಮ ಸಂಪ್ರದಾಯಗಳ ಘನತೆಗಿಂತ ಸೊಸೆಯ ಬದುಕು ಮುಖ್ಯವಾಗುವುದು ಆಕೆಯ ಹೊಸ ಬಗೆಯ ಚಿಂತನೆಯಾಗಿ ಲೇಖಕಿ ದಾಖಲಿಸಿದ್ದಾರೆ.

ಗೀತಾ ಅವರ 'ಬದುಕು' ಕಾದಂಬರಿಯಲ್ಲಿ ಸಹ 'ನಾಗವ್ವ', 'ಪಾರ್ವತಿ', 'ರುಕುಂಬಿ', 'ಕೊರವರ ಈರವ್ವ' ಇವರಿಗೆ ವೈಧವ್ಯ ಒಂದು ಶಾಪವಾಗಿ ಕಾಡಿಲ್ಲ. ಕಾರಣ ಇವರೆಲ್ಲ 'ಕೂಡಿಕೆ'ಯ ಮೂಲಕ ಹೊಸ ಸಂಬಂಧವನ್ನು ಸಾಧಿಸಿಕೊಂಡು ನೆರೆ-ಹೊರೆಯವರ ಮಾನ್ಯತೆಯೊಂದಿಗೆ ಬದುಕು ನಡೆಸುತ್ತಾರೆ. ಕೆಳವರ್ಗದ ಹೆಣ್ಣುಮಕ್ಕಳಲ್ಲಿ ವೈಧವ್ಯ ಎಂಬುದು ಗಂಭೀರ ಸಮಸ್ಯೆಯಾಗಿ ಕಾಣಿಸದೆ ಉಡಕಿ/ಕೂಡಕಿ ಪದ್ಧತಿಗಳ ಮೂಲಕ ಒಂದು ನೆಲೆಯನ್ನು ಕಂಡುಕೊಳ್ಳುತ್ತದೆ. ಆದರೆ ಸುಶಿಕ್ಷಿತ, ಮೇಲ್ವರ್ಗದಲ್ಲಿ 'ಮರು ಮದುವೆ'ಯ ಸಂದರ್ಭ ಹಾಗೂ ವೈಧವ್ಯದ ಆಚರಣೆಗಳು ಇನ್ನೂ ಜಟಿಲವಾಗಿಯೇ ಇವೆ ಎನ್ನಿಸುತ್ತದೆ.

ಲಲಿತಾನಾಯಕ್ ಅವರ 'ತಾಯಿ ಸಾಕೀ ಬಾಯಿ' ಕಥೆಯಲ್ಲಿ 'ಸಾಕೀಬಾಯಿ' ಚಿಕ್ಕ ವಯಸ್ಸಿನಲ್ಲಿಯೇ ಎರಡನೆಯ ಹೆಂಡತಿಯಾಗಿ ಮಲಮಗ ಶಂಕರನಿಗೆ ದಿಕ್ಕಾಗಿ ಬಂದವಳು. ತನ್ನ ಸ್ವಂತಮಗ 'ದೇವಲ್ಯ' ಹುಟ್ಟುವಲ್ಲಿಗೆ ಸಾಕೀಬಾಯಿಗೆ ವೈಧವ್ಯ ಎದುರಾಗುತ್ತದೆ. ಇದೇ

ವೇಳೆ ಆಕೆಯ ಪ್ರತಿಯೊಂದು ಸುಖ-ದುಃಖಗಳಲ್ಲಿ ಭಾಗಿಯಾಗುತ್ತಿದ್ದ ಮುನಿಯನೊಂದಿಗೆ ಸ್ನೇಹ ಬೆಳೆಯುತ್ತದೆ. ಆದರೆ ಮರ್ಯಾದೆಯ ನೆಪದಲ್ಲಿ ಸ್ವಂತ ಮಗ, ಸೊಸೆ ತನ್ನ ಮೇಲೆ ಹಲ್ಲೆ ಮಾಡಿ, ಅಪಮಾನಿಸಿದರೂ ವಿದ್ಯಾವಂತ ಅದರಲ್ಲೂ ಪ್ರೇಮವಿವಾಹವಾದ ಮಲಮಗ ಶಂಕರ ತನ್ನನ್ನು ಬೆಂಬಲಿಸುವನೆಂದೆಣಿಸುತ್ತಾಳೆ. ಸಾಕೀಬಾಯಿಯ ನಂಬಿಕೆ ತಪ್ಪಾಗಿ ಶಂಕರ ದೇವಲ್ಯನೊಂದಿಗೆ ಸೇರಿ ತಾಯಿಯನ್ನೇ ಕೊಲ್ಲುವ ಯೋಜನೆ ರೂಪಿಸುತ್ತಾನೆ. ಸಾಕೀಬಾಯಿಗೆ ನೆರವಾಗಿ ನಿಂತ ಸೊಸೆ 'ಸೀತೆ' ಮುನಿಯ ಮತ್ತು ಅತ್ತೆಯನ್ನು ದೂರ ಕಳುಹಿಸಲು ಮುಂದಾಗುತ್ತಾಳೆ. ಆದರೆ ದೇವಲ್ಯ ಮತ್ತು ಶಂಕರನ ತಂತ್ರಕ್ಕೆ ಸಾಕೀಬಾಯಿ ಮತ್ತು ಮುನಿಯನ ಕೊಲೆಯಾಗುತ್ತದೆ. ಸಾಕೀಬಾಯಿ ಮತ್ತು ಮುನಿಯನನ್ನು ಒಂದು ಮಾಡುವ ಮೂಲಕ ಆಕೆಯ ಬದುಕನ್ನು ಹಸನು ಮಾಡುವ ಅವಕಾಶವಿದ್ದರೂ ಸ್ವಂತ ಮಕ್ಕಳೇ ಕ್ರೌರ್ಯ ಮೆರೆಯುತ್ತಾರೆ. ಕಥೆಯಲ್ಲಿ ಸಾಕೀಬಾಯಿ ಮುನಿಯನೊಟ್ಟಿಗೆ ಬದುಕಬೇಕೆಂದು ನೆರವಾಗುವ ಸೊಸೆ ಸೀತಾ ಸ್ತ್ರೀಶಕ್ತಿಯ ಅನಂತ ಸಾಧ್ಯತೆಗಳ ನಿಲುವಾಗಿ ಕಾಣಿಸುತ್ತಾಳೆ.

ಹೀಗೆ ಮಹಿಳಾ ದಶಕದ ಕಥಾ ಸಾಹಿತ್ಯದಲ್ಲಿ ವೈಧವ್ಯವನ್ನು ಗಂಡಿನ ಕ್ರೌರ್ಯ, ಶೋಷಣೆಗಳಿಂದ ತಮಗೆ ದೊರೆತ ಬಿಡುಗಡೆಯಾಗಿ 'ಅಮ್ಮಚ್ಚಿಯೆಂಬ ನೆನಪು' ಕಥೆಯ 'ಅಮ್ಮಚ್ಚಿ' ಹಾಗೂ 'ಬಿಡುಗಡೆ' ಕಥೆಯ ಸರೋಜಳ ಪಾತ್ರಗಳ ಮೂಲಕ ಚಿತ್ರಿಸಿದ್ದು, ಸಂಪ್ರದಾಯಿಕ ಸಮಾಜಕ್ಕೆ ಲೇಖಕಿಯರು ಒಡ್ಡಿದ ಸವಾಲೇ ಸರಿ. ಗಂಡನ ಮರಣಾನಂತರ ಹೆಣ್ಣು ತನ್ನ ಎಲ್ಲ ಮನೋ ದೈಹಿಕ ಇಷ್ಟಾನಿಷ್ಟಗಳನ್ನು ನಿಗ್ರಹಿಸಿಕೊಂಡು ವೈಧವ್ಯದ ಆಚರಣೆಯಲ್ಲಿ ಬಾಳಬೇಕೆಂಬ ನಿರ್ದೇಶನ ಸಮಾಜದಲ್ಲಿ ಜಾರಿಯಿದೆ. ಹೀಗಿರುವಾಗ ಪುನರ್ವಿವಾಹದ ಮೂಲಕ ತನ್ನ ಸೊಸೆಯ ಬದುಕು ರೂಪಿಸಲು ಮುಂದಾಗುವ 'ಯುದ್ಧ' ಕಥೆಯ ಅತ್ತೆಯ ಪಾತ್ರ, ವೈಧವ್ಯದ ಹೊಸ ವ್ಯಾಖ್ಯಾನವನ್ನೇ ನೀಡುವ 'ನೆರಳು' ಕಥೆಯ ಮಾಲತಿಯ ಅವ್ವ, ಗಂಡ ಸತ್ತರೂ ಕೂಡಿಕೆ ಪದ್ಧತಿಯ ಮೂಲಕ ಪರ್ಯಾಯ ಜೀವನ ಕಂಡುಕೊಳ್ಳುವ 'ಬದುಕು' ಕಾದಂಬರಿಯ ಸ್ತ್ರೀ ಪಾತ್ರಗಳು ವೈಧವ್ಯದ ಕುರಿತಾಗಿ ಅಂದಿನ ಕಾಲಮಾನದ ಲೇಖಕಿಯರಲ್ಲಿದ್ದ ಮಹಿಳಾ ದಶಕದ ಚಿಂತನೆಗಳಲ್ಲಿ ಒಂದಾದ 'ವಿಧವಾ ವಿವಾಹ'ದ ಒತ್ತಾಸೆಯ ಪ್ರಭಾವವನ್ನು ಪ್ರಚುರಪಡಿಸುತ್ತವೆ. ಈ ಕಾಲಮಾನಕ್ಕೂ ಹಿಂದೆಯೇ ಅನೇಕ ಹಿರಿಯ ಲೇಖಕಿಯರ ಕಥಾಸಾಹಿತ್ಯದಲ್ಲಿ 'ವಿಧವಾ ವಿವಾಹ'ದ ಆಶಯಗಳು ಕಾಣಿಸಿವೆಯಾದರೂ, ಪ್ರಸ್ತುತ ಲೇಖಕಿಯರ ವೈಧವ್ಯದ ಬಗೆಗಿನ ದೃಷ್ಟಿಕೋನ ವಿಭಿನ್ನ ನಿಲುವನ್ನು ಸಾಧಿಸಿದೆ. 'ವಿಧವಾ ವಿವಾಹ' ಅಧಿನಿಯಮವನ್ನು ೧೮೫೬ರಲ್ಲಿ ಜಾರಿಗೆ ತಂದು ೧೮೫೭ರ ವೇಳೆಗೆ ಕಾನೂನುಬದ್ಧಗೊಳಿಸಲಾಯಿತು. ಆದರೆ 'ವಿಧವಾ ವಿವಾಹ'ದ ಕುರಿತಾದ ಸಕಾರಾತ್ಮಕ ಧೋರಣೆ, ಪರಿಮಾಣಾತ್ಮಕ ಏರಿಕೆ ಕಂಡುಬಂದಿರು

ವುದು ಇತ್ತೀಚಿನ ಆಧುನಿಕ ದಿನಗಳಲ್ಲಿಯೇ ಆಗಿದೆ. ಹಾಗಾಗಿ ಲೇಖಕಿಯರ ಕಥಾಸಾಹಿತ್ಯದಲ್ಲಿನ ಈ ಬೆಳವಣಿಗೆಯನ್ನು ಮಹಿಳಾ ದಶಕದ ಚಿಂತನೆಗಳ ಪರಿಣಾಮವಾಗಿ ದಾಖಲಿಸಲಾಗಿದೆ.

**೪.೫.೨. ಅವಿವಾಹಿತೆ**

ಪರಂಪರೆಯಿಂದ ಹೆಣ್ಣಿಗೆ ಬಳುವಳಿಯಾಗಿ ಬಂದಿರುವ ಹೊಣೆಗಾರಿಕೆ ವಿವಾಹ. ಹೆಣ್ಣಿನ ಅವಿವಾಹಿತ ಸ್ಥಿತಿಯನ್ನು ಸಮಾಜಬಾಹಿರ ಕೃತ್ಯವೆಂದು ಪರಿಗಣಿಸುವ ಸ್ಥಿತಿ ನಮ್ಮ ಸಮಾಜದಲ್ಲಿದೆ. ವಿವಾಹ ವ್ಯವಸ್ಥೆಯಿಂದ ದೂರ ಉಳಿದರೆ ಹೆಣ್ಣು ನೂರಾರು ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಇದಲ್ಲದೆ ಕುಟುಂಬ ಮತ್ತು ಸಮಾಜ ಎರಡೂ ವಲಯಗಳಿಂದ ತಿರಸ್ಕಾರ, ಟೀಕೆಗಳಿಗೆ ಗುರಿಯಾಗಬೇಕಾಗುತ್ತದೆ. ಇಂದಿಗೂ ಸಹ ಅವಿವಾಹಿತ ಹೆಣ್ಣು ಮನೆಯಲ್ಲಿದ್ದರೆ ಅವಮಾನ ಎಂಬ ನಂಬಿಕೆ ಅಸ್ತಿತ್ವದಲ್ಲಿದೆ. ಈ ಕಾರಣಕ್ಕಾಗಿ ವಿವಾಹ ಕಡ್ಡಾಯದ ವಿಧಿಯಾಗಿ ರೂಪುಗೊಂಡಿದೆ.

ಅವಿವಾಹಿತೆಯರಲ್ಲಿ ಆರ್ಥಿಕವಾಗಿ ಸ್ವಾವಲಂಬಿಯಲ್ಲದ ಮಹಿಳೆಯರು ಕುಟುಂಬದಿಂದ ತಿರಸ್ಕಾರ, ಚುಚ್ಚುಮಾತುಗಳಿಗೆ ಒಳಗಾಗಿ, ಅವರ ಅಸ್ತಿತ್ವಕ್ಕೆ ಗೌರವ ಸಿಗದಂತಾಗುತ್ತದೆ. ಒಂದು ವೇಳೆ ಆರ್ಥಿಕ ಸ್ವಾವಲಂಬಿಗಳಾಗಿ ಸಮಾಜದ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಂಡರೆ ಕುಟುಂಬವಲ್ಲದೆ, ಸಾಮಾಜಿಕವಾಗಿಯೂ ನಿಂದನೆ, ಟೀಕೆಗಳು ಎದುರಾಗುತ್ತವೆ. ಎಲ್ಲ ಕಡೆಯೂ ಅಭದ್ರತೆಯ ಭಾವ ಕಾಡುತ್ತದೆ. ಎಷ್ಟೋ ವೇಳೆ ಅವರ ದುಡಿಮೆ, ಶ್ರಮದ ಫಲಗಳು ಸಹ ಇತರರಿಗೆ ಸಂದಾಯವಾಗುತ್ತವೆ. ಹೆಣ್ಣು ಮಕ್ಕಳು ಅವಿವಾಹಿತೆಯರಾಗಿ ಉಳಿಯಲು ವ್ಯವಸ್ಥೆ ಒಂದು ಕಾರಣವಾದರೆ, ಅವರ ವ್ಯಕ್ತಿಗತ ಮನೋಧೋರಣೆಗಳು ಮತ್ತೊಂದು ಕಾರಣವಾಗುತ್ತವೆ. ಈ ಎರಡೂ ಸಂದರ್ಭಗಳಲ್ಲೂ ಅವಿವಾಹಿತ ಹೆಣ್ಣುಮಕ್ಕಳ ಬದುಕು ಕೌಟುಂಬಿಕ, ಸಾಮಾಜಿಕ, ಔದ್ಯೋಗಿಕ, ಆರ್ಥಿಕ ಇತ್ಯಾದಿ ಆಯಾಮಗಳಲ್ಲಿ ಸವಾಲಿನದಾಗಿರುತ್ತದೆ. ಹೀಗಾಗಿ ಲೇಖಕಿಯರ ಕಥಾಸಾಹಿತ್ಯದಲ್ಲಿ ಅವಿವಾಹಿತ ಹೆಣ್ಣಿನ ಪಾತ್ರಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.

ವೈದೇಹಿಯವರ 'ಚಿಪ್ಪು', 'ಬೀಳು-ಬೇರು' ಹಾಗೂ 'ಅಂತರಂಗದ ಪುಟಗಳು' ಅವಿವಾಹಿತ ಹೆಣ್ಣುಗಳ ಮಾನಸಿಕ ಸ್ಥಿತಿಗಳನ್ನು, ಭಾವಲೋಕವನ್ನು ಅನಾವರಣಗೊಳಿಸುವ ವಿಭಿನ್ನ ಕಥೆಗಳಾಗಿವೆ. 'ಚಿಪ್ಪು' ಕಥೆಯ ನಾಯಕಿ 'ಯಶೀ'ಯ ಮದುವೆಗಾಗಿ ವರಾನ್ವೇಷಣೆ ನಡೆದಿದೆ. ಆದರೆ 'ವಿವಾಹ' ವ್ಯವಸ್ಥೆಯ ಬಗ್ಗೆ ಯಶೀಗೆ ತಿರಸ್ಕಾರ. ತನ್ನ ದಾಂಪತ್ಯ ಯಾಂತ್ರಿಕತೆಯನ್ನು ಮೀರಿದ, ದೈಹಿಕ ಆಕರ್ಷಣೆಗಿಂತಲೂ ಮಾನಸಿಕ ಹೊಂದಾಣಿಕೆಯದ್ದಾಗಬೇಕೆಂಬುದು ಆಕೆಯ ಆದರ್ಶಗಳಾಗಿದ್ದವು. ರಂಗಜ್ಜಿಯ ತತ್ವಸಿದ್ಧಾಂತಗಳಿಗೆ ಬಾಗಿ ಕುಳಿತಿದ್ದ ಯಶೀ ಎಂತವರೊಟ್ಟಿಗೂ ಬದುಕಬಲ್ಲಳು ಎಂಬ ರಂಗಜ್ಜಿಯ ಆತ್ಮವಿಶ್ವಾಸದ ಬಗ್ಗೆ ಆಕೆಯ ಅಂತರಂಗ ಕಿಡಿಕಾರುತ್ತದೆ. "ರಂಗಜ್ಜಿ ಒಮ್ಮೆ ಸಾಯುತ್ತೀಯಾ? ಜೀವನದಲ್ಲಿದ್ದು ನನ್ನನ್ನೇಕೆ ಕೊಲ್ಲುತ್ತಿ? ನಿನಗೆ ಹೇಗೆ

ಗೊತ್ತು ಯಾರೊಂದಿಗೂ ಜೀವನ ತೆಗೆಯುವವಳೆಂದು? ನೀನು ಹೇಗೆ ಅಂದೆ. ಅನ್ನುತ್ತಲೆ ನನ್ನನ್ನು ಬೆಳೆಸಿದೆ. ಆ ಚಿಪ್ಪಿನಲ್ಲಿಯೇ ನಾನೀಗ ಸಮಾಧಿಯಾಗುತ್ತಿದ್ದೇನೆ ನೋಡು. ಈಗಲಾದರೂ ಸುಮ್ಮನಿರು. ತಲೆ ಗಾರೆದ್ದು ಹೋಗಿದೆ. ಇದೀಗ ನಡೆಯುತ್ತಿರುವುದು ನನ್ನ ಭವಿಷ್ಯದ ಚರ್ಚೆ. ಮಾತನಾಡಲು ನಾನಿದ್ದೇನೆ ಸತ್ತಿಲ್ಲ"[೬೧] ಎಂದುಕೊಳ್ಳುತ್ತಾಳೆ. ಈ ಮೂಲಕ ಹೆಣ್ಣು ಎಂತವರೊಟ್ಟಿಗೂ ಮದುವೆಯಾಗಬಲ್ಲಳು, ಆಕೆಗೆ ಆಯ್ಕೆ ಸ್ವಾತಂತ್ರ್ಯದ ಅಗತ್ಯವಿಲ್ಲವೆಂದು ಚಿಪ್ಪಿನಲ್ಲಿ ಬಂಧಿಸುವ ಹಳೆಯ ಸಿದ್ಧಾಂತ, ತರ್ಕಗಳನ್ನು ಯಶೀ ತನ್ನ ಅಂತರಂಗದ ಮಾತುಗಳಿಂದ ವಿರೋಧಿಸುತ್ತಾಳೆ. ಯಶೀಯ ಸ್ನೇಹಿತೆ ಉಷಾ ತನ್ನ ಆಯ್ಕೆಯಂತೆಯೇ ಮದುವೆಯಾದವಳು. "ಮನಸ್ಸಿಗೊಪ್ಪಿಗೆ ಯಾಗುವವರೆಗೂ ನಾವು ಬಯಸುವ ವಿಷಯ–ವಸ್ತು–ವ್ಯಕ್ತಿ ಏನೇ ಇರಲಿ ಅದನ್ನು ಅರಸು ತ್ತಿರಬೇಕು"[೬೨] ಎನ್ನುವ ಆಶಾವಾದಿ. ವಿವಾಹದ ಆಯ್ಕೆ ನಮ್ಮದಾದರೂ ನಮಗೆ ಸರಿಯಾದ ವ್ಯಕ್ತಿ ಸಿಗಬೇಕಲ್ಲ ಎಂಬ ಆತಂಕವೂ ಉಷಾಳಲ್ಲಿದೆ. ಕಾರಣ ಆಕೆಯ ಮನಸ್ಸೊಪ್ಪಿದ ಮದುವೆ ಮುರಿದುಬಿದ್ದಿದೆ. ಯಶೀ ಮತ್ತು ಉಷಾ ವಿವಾಹ ವ್ಯವಸ್ಥೆಯಲ್ಲಿ ತಮ್ಮ ಸಂಗಾತಿಯ ಆಯ್ಕೆ ಕುರಿತಾದ ಎರಡು ದ್ವಂದ್ವ ನಿಲುವುಗಳ ರೂಪಕದಂತೆ ಕಾಣಿಸುತ್ತಾರೆ. ವಿವಾಹ ನನ್ನ ಸಮ್ಮತದಂತಿರಬೇಕೆನ್ನುವ ಯಶೀಗೆ ತನ್ನ ಗಂಡನಾಗುವನ ಬಗ್ಗೆ ತಂದೆಗಿರುವ ಉಪೇಕ್ಷೆ ಕಂಡು ಆಶ್ಚರ್ಯವಾಗುತ್ತದೆ. "ತುದಿಯಲ್ಲಿ ಮುಟ್ಟಲಾರೆ ಬುಡದಲ್ಲಿ ಇರಲಾರೆ ನಡುವಿನಲ್ಲಿ ನಿಲ್ಲಲಾರೆ"[೬೩] ಎನ್ನುವ ತನ್ನ ಪರಿಸ್ಥಿತಿಯಿಂದ ಕಣ್ಣಲ್ಲಿ ನೀರು ಹರಿಯುತ್ತದೆ. ಮದುವೆ, ಸಂಸಾರ ಬೇಕು, ಬೇಡ, ಏಕೆ? ಎಂಬ ತೊಳಲಾಟದಲ್ಲಿಯೇ ಯಶೀಯ ಮನಸ್ಸು ಉಳಿಯುತ್ತದೆ.

'ಬೀಳು–ಬೇರು' ಕಥೆಯಲ್ಲಿ ಎಮ್ಮೆ ವ್ಯಾಪಾರದ ಪ್ರತಿಮಾತ್ಮಕತೆಯ ಮೂಲಕ ಮದುವೆಯೂ ವ್ಯಾಪಾರವೆಂಬಂತೆ ಚಿತ್ರಿಸಲಾಗಿದೆ. ಎಮ್ಮೆ ವ್ಯಾಪಾರದ ಮಾತು ನಡೆಯುತ್ತಲೇ 'ಇಂದಿ'ಯ ಮದುವೆ ಪ್ರಸ್ತಾಪವಾಗುತ್ತದೆ. 'ಯಶೀ'ಯಂತೆ 'ಇಂದಿ'ಯೂ ಸಹ ತನ್ನ ಮನಸ್ಸಿನ ಬಯಕೆಯನ್ನು ತಂದೆಯ ಮುಂದೆ ಹೇಳಲಾಗದೆ ಕೊರಗುವಳು. ವಧು ಪರೀಕ್ಷೆಗಾಗಿ ಪದೇ ಪದೇ ಹುಡುಗರ ಮುಂದೆ ಕೂಡುವುದು ಆಕೆಗೆ ಇಷ್ಟವಾಗದ ಸಂಗತಿ. "ಇಸ್ಸಿ ನಾನು ಇನ್ನು ಮೇಲೆ ಹಾಗೆ ಕೂಡುವುದಿಲ್ಲ. ನಾನೇನು ವಸ್ತುವಲ್ಲ ಪ್ರಾಣಿಯಲ್ಲ"[೬೪] ಎಂದು ಮೊದಲ ಸಲವೇ ಅತ್ತಿದ್ದಳು. ಆದರೆ ಮದುವೆ ಯಾಗಲು ವಧು ಪರೀಕ್ಷೆ ಅನಿವಾರ್ಯ ಪದ್ಧತಿ ಎಂದು ಅಮ್ಮ ಇಂದಿಯ ಬಾಯಿ ಮುಚ್ಚಿಸಿದ್ದಳು. ಇದರಿಂದ ನೋಡಲು ಬಂದ ಗಂಡಿನ ಕಡೆಯವರು ಕೇಳುವ ಪ್ರಶ್ನೆಗಳ ಇರಿತ ಒಂದೆಡೆಯಾದರೆ, ಅವರು ತನ್ನನ್ನು ಒಪ್ಪದಿರುವುದು ಮತ್ತೊಂದು ಬಗೆಯ ಹಿಂಸೆಯಾಗಿ ಕಾಡುತ್ತದೆ. ಆಗ ಇಂದಿಯ ತಂದೆ "ನನ್ನನ್ನು ನೋಡೀಗ ನಿನ್ನ ಅಮ್ಮ ನಾನು ನೋಡಿದ ಇಪ್ಪತ್ತನೆಯ ಹುಡುಗಿ ಗೊತ್ತಿದೆಯೆ? ಬೇಕಾದ ವಸ್ತುವನ್ನು ಹುಡುಕಿದರೆ ಮಾತ್ರ ಅಲ್ಲವೆ ಅದು ಸಿಗುವುದು?"[೬೫] ಎಂದು ಸಮಾಧಾನ ಹೇಳುತ್ತಾನೆ. ಆ ಕ್ಷಣದಲ್ಲಿ ತಂದೆಯನ್ನು ಸುಟ್ಟುಬಿಡುವಂತೆ

ದುರುಗಟ್ಟಿ ನೋಡಿದ ಇಂದಿಯ ಪ್ರತಿಕ್ರಿಯೆ ತನ್ನನ್ನು ವ್ಯಾಪಾರದ ವಸ್ತುವನ್ನಾಗಿ ಪರಿಗಣಿಸುವ ಪುರುಷ ವ್ಯವಸ್ಥೆಯ ವಿರುದ್ಧವೆಂಬಂತೆ ತೋರುತ್ತದೆ.

‘ಅಂತರಂಗದ ಪುಟಗಳು’ ಕಥೆಯ ‘ಅಚಲ’ಳದು ಯಶೀ ಮತ್ತು ಇಂದಿಯಂತಲ್ಲದ ಆಲೋಚನೆ. ತನ್ನ ಮದುವೆಯಾಗುವ ಹುಡುಗನ ಬಗೆಗಿನ ಅಂತರಂಗದ ಮಾತುಗಳನ್ನು ನಿರ್ಭಿಡತೆಯಿಂದ ಹೊರಹಾಕುವವಳು. ತನ್ನಪ್ಪ ಆಯ್ಕೆ ಮಾಡಿದ ಹುಡುಗನನ್ನು ಮದುವೆಯಾಗಲು ಹೊರಟ ಸರಿತಾಳಿಗೆ “ಸರಿತಾ, ನೀನು ವ್ಯಾಪಾರಕ್ಕೆ ಹೊರಟಿದ್ದಿ. ಅಗ್ಗಕ್ಕೆ ಮಾಲು ಸಿಕ್ಕಾಗ ಗಪ್ಪೆಂತ ಹಿಡಿದುಕೊಳ್ಳುವವರಂತೆ, ಮದುವೆಯಾದರೆ ಎಂತಹವನನ್ನು ಗೊತ್ತುಂಟ? ಅವನನ್ನು ಒರಗಿದರೆ ಸಾಕು, ಆಹ! ಎನಿಸುವಂತಿರಬೇಕು”[೬೬] ಎಂದು ಹೇಳುತ್ತಾಳೆ. ಮದುವೆಯೊಂದು ಯಾಂತ್ರಿಕವಾದ ವ್ಯಾಪಾರವಲ್ಲ ಅದೊಂದು ಭಾವನಾತ್ಮಕವಾದ ಸಂಗತಿ ಎಂಬುದು ಅಚಲಾಳ ಸಿದ್ಧಾಂತವಾಗಿದೆ. ಇದೇ ಸಿದ್ದಾಂತದಲ್ಲಿ ಮದುವೆಯೇ ಇಲ್ಲದೆ ದಿನ ಕಳೆಯುತ್ತಿದ್ದ ಅಚಲಾಳನ್ನು ಕೊನೆಗೆ ಒಪ್ಪಿ ಬಂದ ಶಂಕರನಲ್ಲೂ ಆಕೆ ತನ್ನ ಮನಸ್ಸು ಬಯಸಿದ ಸಂಗಾತಿಯ ಗುಣಗಳನ್ನು ಕಾಣದಾಗುತ್ತಾಳೆ.

ವೀಣಾ ಅವರ ‘ಗಂಡಸರು’ ಕಾದಂಬರಿ ಹೆಣ್ಣು ಅವಿವಾಹಿತ ಸ್ಥಿತಿಯಲ್ಲಿ ಎದುರಿಸುವ ಅವಮಾನ, ಶೋಷಣೆಗಳ ಸ್ವರೂಪವನ್ನು ತಿಳಿಸುವ ಸಶಕ್ತ ಚಿತ್ರಣವಾಗಿದೆ. ಕಥಾನಾಯಕಿ ಶಾಂತಿ ಶಂಕರನಿಂದ ಪ್ರೇಮ ವೈಫಲ್ಯಕ್ಕೆ ಒಳಗಾದಾಗ “ಹೀಗೆ ಕೈಕೊಡುವ ವಂಚಕನಿಂದ ಪಾರಾದುದು ಒಳ್ಳೆಯದೇ ಆಗಲಿಲ್ಲವೆ? ತನಗಿಂತವನು ಗಂಡನಾಗದಿದ್ದುದು ತನ್ನ ಪುಣ್ಯವೇ ಸರಿ”[೬೭] ಎಂದು ಸಮಾಧಾನ ತಾಳುತ್ತಾಳೆ. ಆದರೆ ಮುಂದೆ ತನ್ನ ಬದುಕಿನಲ್ಲಿ ಬಂದ ಎಲ್ಲ ಗಂಡಸರೂ ದೇಹದ ನೆಲೆಯಲ್ಲಿ ಆಕೆಯನ್ನು ಪ್ರೀತಿಸಿ, ಕಾಳಜಿ ತೋರಿಸಿ ದುರುಪಯೋಗ ಪಡೆಯುತ್ತಾರೆ. ಆಗ “ನಿಜವಾದ ಪ್ರೀತಿ ದೈಹಿಕ ಸಂಬಂಧಗಳನ್ನು ಮೀರಿದ್ದು” ಎನ್ನುವ ಶಾಂತಿಯ ಆದರ್ಶ ಕಳಚಿ ಬಿದ್ದಂತಾಗುತ್ತದೆ. ತನ್ನ ಆದರ್ಶವನ್ನು ಮೀರಿ ವಿವಾಹ ವ್ಯವಸ್ಥೆಯ ಆಚೆಗೆ ಜೀವನ ಕಟ್ಟಿಕೊಳ್ಳುತ್ತಾ ಹೊರಡುವ ಶಾಂತಿಗೆ ಪ್ರೊ.ಮಠದ, ರಮಾಕಾಂತ ಸಿಂಥೆ, ಜಾನ್ ಎಲ್ಲರಿಂದಲೂ ಮೋಸವಾಗಿ ಅವಿವಾಹಿತ ಸ್ಥಿತಿಯಲ್ಲಿಯೇ ಉಳಿಯುವಂತಾಗುತ್ತದೆ. ಇಲ್ಲಿ ಶಾಂತಿಗೆ ತನ್ನ ಸಂಗಾತಿಯ ಆಯ್ಕೆ ಸ್ವಾತಂತ್ರ್ಯ ಇದ್ದರೂ ವಿವಾಹ ವ್ಯವಸ್ಥೆಯ ನಿರೀಕ್ಷೆಗಳು ಆಕೆಯ ಬದುಕನ್ನು ಅತಂತ್ರವಾಗಿಸುತ್ತವೆ. ಹೆಣ್ಣಿಗೆ ಮದುವೆಯ ವಿಚಾರದಲ್ಲಿ ವೈಯಕ್ತಿಕ ನಿರ್ಧಾರ, ಅಭಿಪ್ರಾಯಗಳ ಕುರಿತು ಮನ್ನಣೆ ನೀಡದ ಸಮಾಜ, ವೈವಾಹಿಕ ಬಂಧನಕ್ಕೆ ಒಳಪಡುವ ಗಂಡು-ಹೆಣ್ಣಿನಲ್ಲಿ ಆಪೇಕ್ಷಣೀಯ ಅರ್ಹತೆಗಳನ್ನು ಕಟ್ಟಿಕೊಡುತ್ತದೆ. ವಿಪರ್ಯಾಸವೆಂದರೆ ಗಂಡಿನಲ್ಲಿ ‘ಆತ ಒಬ್ಬ ಗಂಡು’ ಎಂಬ ಅರ್ಹತೆಯೇ ಪ್ರಧಾನ. ಆದರೆ ಹೆಣ್ಣಿನಲ್ಲಿ ನಿರೀಕ್ಷಿಸಲಾಗುವ ವಿಧೇಯತೆ, ಮನೆವಾರ್ತೆ, ತಾಯ್ತನದ ಸಾಮರ್ಥ್ಯ, ಚಾರಿತ್ರ್ಯ

ಇತ್ಯಾದಿಗಳು ಆಕೆಯ ವ್ಯಕ್ತಿಗತ ಸ್ವಾತಂತ್ರ್ಯವನ್ನೇ ಹರಣ ಮಾಡುವಂತಹವು. ಇವೆಲ್ಲವೂ ಹೆಣ್ಣನ್ನು ತನ್ನ ಅಧೀನದಲ್ಲೇ ಉಳಿಸುವ ಪಿತೃರಾಜಕಾರಣದ ಚಿಂತನೆಗಳಾಗಿವೆ.

ವೀಣಾ ಅವರು ಮೂರು ಜನ ಅವಿವಾಹಿತ ಮಹಿಳೆಯರ ವೈರುಧ್ಯ ವ್ಯಕ್ತಿತ್ವ, ಮನೋ ಧೋರಣೆಗಳನ್ನು 'ಒಂದು ರವಿವಾರ' ಕಥೆಯಲ್ಲಿ ನಿರೂಪಿಸಿದ್ದಾರೆ. ಇಲ್ಲಿ ಮೂರು ಜನ ಹೆಣ್ಣುಮಕ್ಕಳು ವಿದ್ಯಾವಂತರು, ಸ್ವಾವಲಂಬಿಗಳು ಆದರೆ ವಿವಾಹದ ಕುರಿತಾದ ದೃಷ್ಟಿಕೋನಗಳು ಭಿನ್ನವಾದವು. "ಯಾಕ ಎಲ್ಲಾ ಹೆಂಗಸ್ರೂ ಲಗ್ನ-ಲಗ್ನ ಅಂತ ಬಡಕೋತಾರೋ ಅಂತೀನಿ. ಏನದ ಅದರಾಗ? ಒಬ್ಬ ಹುಂಬ ಗಂಡಸಿನ ಆಳಾಗಿ ಇರೋದು. ಅವರಿಗೆ ಹೆಂಗ್ಸರ ಮನಸು understand ಆಗೋದಿಲ್ಲ, ಬಿಡೋದಿಲ್ಲ, ಇವ್ರು ಬರೇ ಮಕ್ಕಳ್ನ ಹಡಕೋತ ಸಾಯೋದು. Disgusting! ನನಗಂತೂ ಅವರನ್ನ ಕಂಡರೆ ಆಗೋದಿಲ್ಲ. ನಾ ಹಿಂಗ ಇರಬೇಕು ಅಂತ decide ಮಾಡಿಬಿಟ್ಟೀನಿ"[೬೮] ಎಂದು ವಾದಿಸುವ ಗಿರಿಜಾಳದು ಮದುವೆಯ ಬಗ್ಗೆ ವಿರಕ್ತಿ ಭಾವ. ಆದರೆ ಈ ವೈರಾಗ್ಯ ಹುಟ್ಟಿರುವುದು ತನ್ನ ರೂಪ, ಕಾಯಿಲೆ, ವಯಸ್ಸಿನ ಕುರಿತಾದ ಕೀಳರಿಮೆಯ ಭಾವದಿಂದಲೇ ಆಗಿದೆ. ಮತ್ತೊಬ್ಬ ಕಥಾನಾಯಕಿ ಶಾಂತಿ "ಲಗ್ನ ಮಾಡಿಕೊಳ್ಳೋದು ಮೂರ್ಖತನ ಅಲ್ಲ ಅದೊಂದು ಪವಿತ್ರ ಬಂಧನ" ಎನ್ನುತ್ತಾಳೆ. ಹಾಗಾಗಿ ಮದುವೆಯಿಲ್ಲದೆ ಮತ್ತೊಂದು ಗಂಡಿನೊಂದಿಗಿನ ಸ್ನೇಹ ಸಮ್ಮತವಲ್ಲ ಎಂದು ವಾದಿಸುತ್ತಾಳೆ. ಕಥೆಯ ಕೊನೆಯಲ್ಲಿ ಸ್ವತಃ ಶಾಂತಾಳೇ ಈ ಮೌಲ್ಯವನ್ನು ಮೀರುವುದು ಆಕೆಯ ಮಾತು ಮತ್ತು ಕೃತಿಗಳ ನಡುವಿನ ಅಂತರವನ್ನು ತೋರುತ್ತದೆ. ಸಾಧಾರಣ ರೂಪವಿರುವ ರೇಖಾ ಶಾಂತಳಂತೆ ಶೀಲದ ಮೌಲ್ಯವನ್ನು ಮೀರುವ ಹಂಬಲವುಳ್ಳವಳು ಎನಿಸುತ್ತಾಳೆ. ಆದರೆ ವಾಸ್ತವದಲ್ಲಿ ವಯಸ್ಸಾದ ತಾಯಿ, ಪುಡಾರಿ ತಮ್ಮಂದಿರು, ಲಗ್ನವಾಗದ ತಂಗಿಗಾಗಿ ತನ್ನೆಲ್ಲ ಭಾವನೆ, ಕನಸುಗಳನ್ನು ಅದುಮಿಟ್ಟುಕೊಂಡು ಬದುಕುತ್ತಾಳೆ. ಇಷ್ಟಾದರೂ ಆಕೆಯ ವ್ಯಕ್ತಿತ್ವದ ಕುರಿತಾದ ಅಪಪ್ರಚಾರಗಳು ರೇಖಾಗೆ ಘಾಸಿಯನ್ನುಂಟು ಮಾಡುತ್ತವೆ.

ಇಲ್ಲಿನ ಕಥಾನಾಯಕಿಯರ ಅವಿವಾಹಿತ ಸ್ಥಿತಿಗೆ ಕೀಳರಿಮೆ, ವ್ಯಕ್ತಿಗತ ಸಮಸ್ಯೆಗಳು, ವೈಯಕ್ತಿಕ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದೆಂಬ ವಿಚಾರಗಳು ಕಾರಣವಾಗಿವೆ. ಶ್ರೀಮತಿ ಅವರು ಹೇಳುವಂತೆ "ವೀಣಾರವರಿಗೆ ಗಂಡು ಹೆಣ್ಣಿನ ಸಂಬಂಧಗಳಲ್ಲಿ ಹುಟ್ಟಿಕೊಳ್ಳುವ ಬಿಕ್ಕಟ್ಟು ಹಾಗೂ ತಾಕಲಾಟಗಳ ವಿಶ್ಲೇಷಣೆ ಮುಖ್ಯವಾಗಿದೆಯೇ ಹೊರತು ನೈತಿಕ ಕಟ್ಟುಪಾಡು ಹಾಗೂ ಬಂಧನಗಳ ವಿಷಯ ಅವರಿಗೆ ಪ್ರಸ್ತುತವೆನಿಸುವುದಿಲ್ಲ"[೬೯] ಹಾಗಾಗಿ ವೈವಾಹಿಕ ಚೌಕಟ್ಟಿನ ಆಚೆಗೆ ನೈತಿಕ ಮೌಲ್ಯಗಳನ್ನು ಮೀರಿ ಬದುಕಬಲ್ಲೆವೆಂಬ ಧೋರಣೆಯ ಈ ಪಾತ್ರಗಳು ವೀಣಾ ಅವರ ಹೊಸದೊಂದು ಮಾದರಿಯ ವೈಚಾರಿಕತೆಯನ್ನು ಹುಟ್ಟು ಹಾಕಿವೆ. ಆದಾಗ್ಯೂ ವಿವಾಹ ವ್ಯವಸ್ಥೆಯ ಹೊರಗೆ ಬದುಕುವ ಬಗ್ಗೆ ಅಲ್ಲಲ್ಲಿ ಅಭದ್ರತೆ, ಆತಂಕಗಳು, ಸಹ ಪಾತ್ರಗಳಲ್ಲಿ

ಹಾದು ಹೋಗುತ್ತವೆ. ಇದರಿಂದಾಗಿ ಹೆಣ್ಣಿನ ವೈಚಾರಿಕತೆ ದಿಟ್ಟತನದ ಹಾದಿ ತುಳಿದರೂ, ಪರೋಕ್ಷವಾಗಿ ಆಗೋಚರ ರೀತಿಯಲ್ಲಿ ಪಿತೃಪ್ರಧಾನತೆ ಆಕೆಯ ಮೇಲೆ ತನ್ನ ಹಿಡಿತ ಸಾಧಿಸಿಯೇ ಇರುತ್ತದೆ.

'ಮುಳ್ಳುಗಳು' ಕಥೆಯ ನಾಯಕಿ ಶಾಂತಿ ಅವಿವಾಹಿತೆ. ಹಾಸ್ಟೆಲ್‌ನಲ್ಲಿ ವಾಸಿಸುತ್ತಿರುವ ಈಕೆಗೆ ತನ್ನ ವಿದ್ಯಾರ್ಥಿಗಳು, ದಾರಿಹೋಕರು, ಕೆಲಸದ ಮಾದ, ಅಷ್ಟೇ ಅಲ್ಲದೆ ಹಾಸ್ಟೆಲಿನ ಮುಂದೆ ಸದಾ ಬಾಲ ಅಲ್ಲಾಡಿಸುತ್ತಾ ಬಿದ್ದಿರುವ ಗಂಡು ನಾಯಿ ಎಲ್ಲರ ಕಣ್ಣುಗಳ ನೋಟಗಳು ಮುಳ್ಳಾಗಿ ಕಾಣಿಸುತ್ತವೆ. ಇಂತಹ ಮುಳ್ಳಿನ ನೋಟದ ವ್ಯಕ್ತಿಗಳ ನಡುವೆ ಸೊರಗುವ ಶಾಂತಿಯ ಅರ್ಥದಲ್ಲಿ 'ಮುಳ್ಳು' ಎಂದರೆ ಕಾಮದ ದೃಷ್ಟಿಯಿಂದಲೇ ಕಾಣುವ ಪುರುಷರ ನೋಟವಾಗಿದೆ. ಅವಿವಾಹಿತೆ ಎನ್ನುವ ಕಾರಣಕ್ಕೆ ಶಾಂತಿಯನ್ನು ದುರುಪಯೋಗ ಪಡೆಯಲು ಬಯಸುವ ಗಂಡುಗಳು ಆಯೋಗ್ಯರಾಗಿ ಕಾಣಿಸುತ್ತಾರೆ. ಅವರನ್ನು ಒದ್ದು ಕಳಿಸಬೇಕು ಎನ್ನುವ ಆಕ್ರೋಶ ಆಕೆಯದು. "ಈ ಮುಳ್ಳಿನಂಥ ದೃಷ್ಟಿಯೊಂದೇ ಸತ್ಯ, ಉಳಿದೆಲ್ಲ ಭ್ರಮೆ, ರಸ್ತೆಯಲ್ಲಿ, ಕಾಲೇಜಿನಲ್ಲಿ, ಬಸ್ಸಿನಲ್ಲಿ, ಟ್ರೇನಿನಲ್ಲಿ, ಮಾರ್ಕೆಟ್ಟಿನಲ್ಲಿ ಈ ಇಡೀ ಜಗತ್ತಿನ ತುಂಬ ಸತ್ಯವಾದುದೆಂದರೆ ಅದೊಂದೆ"[೨೦] ಎಂದು ಪರಿಭಾವಿಸುವ ಶಾಂತಿಯ ಕಣ್ಣುಗಳಲ್ಲಿ ಮುಳ್ಳಿನ ನೋಟವಿಲ್ಲದ ಗಂಡಸಿಗಾಗಿ ನಿರಂತರ ಹುಡುಕಾಟ ನಡೆದಿದೆ. ಇಷ್ಟಾದರೂ ಆಕೆಯನ್ನು ಕಾಡುವ ದೇಸಾಯಿಯ ನೆನಪಿನಲ್ಲಿ ತನ್ನ ಗಂಡನಾಗುವವನ ಬಗ್ಗೆ ಬರುವ ಕಲ್ಪನೆಯನ್ನು ದೂರತಳ್ಳಲು ಪ್ರಯತ್ನಿಸುತ್ತಾಳೆ. ಒಟ್ಟಿನಲ್ಲಿ 'ಶಾಂತಿ'ಯ ಪಾತ್ರದ ಮೂಲಕ ಅವಿವಾಹಿತ ಹೆಣ್ಣಿನ ಸೂಕ್ಷ್ಮ ಸಂವೇದನೆ, ಆಯ್ಕೆಯ ತಾಕಲಾಟಗಳು ಪ್ರಸ್ತುತ ಕಥೆಯಲ್ಲಿದೆ. ಈ ಕಥೆಯ ಕುರಿತಾಗಿ "ಇಲ್ಲಿ ವ್ಯಕ್ತವಾಗುವ ದ್ವೇಷ ಪ್ರೀತಿ, ಗೌರವ, ಅರ್ಪಣೆ ಇಂಥ ಮೌಲ್ಯಗಳ ಸಂಪರ್ಕವೇ ಇಲ್ಲದ ಕಾಮುಕತೆಯ ವಿರುದ್ಧದ ದ್ವೇಷವೇ ಹೊರತು ಪುರುಷ ಜಾತಿಯ ದ್ವೇಷವಲ್ಲ"[೨೧] ಎಂದು ಹೇಳುವ ಅಮೂರ್ ಅವರ ಮಾತುಗಳು ಒಪ್ಪಿತವೆನಿಸುತ್ತವೆ. ಕಾರಣ ಕಥಾನಾಯಕಿಗೆ ಹೆಣ್ಣು, ಗಂಡಿನ ಸಂಬಂಧ, ವಿವಾಹ ವ್ಯವಸ್ಥೆಯ ಬಗ್ಗೆ ತಿರಸ್ಕಾರವಿಲ್ಲ. ಬದಲಾಗಿ ಆಕೆಯ ಅರಿವಿಗೆ ದೊರೆತ ಗಂಡಿನ ಸ್ವಾರ್ಥ, ಕಾಮಲಾಲಸೆ, ಮೋಸಗಳ ವಿರುದ್ಧ ತಿರಸ್ಕಾರವಿದೆ. ಅವಿವಾಹಿತ ಸ್ಥಿತಿಯಲ್ಲಿಯೇ ಉಳಿಯಲು ಬಯಸುವ ಶಾಂತಿಯದು ಪುರುಷರ ಮೇಲಿನ ದ್ವೇಷವಲ್ಲ ಅದು ಹೆಣ್ಣಿನ ವಿರುದ್ಧ ಪಿತೃ ಸಂಸ್ಕೃತಿ ರೂಪಿಸಿರುವ ಹುನ್ನಾರಗಳ ಬಗೆಗಿರುವ ವಿರೋಧವಾಗಿದೆ.

ಹೆಣ್ಣು ವಿವಾಹಿತೆಯಾಗಿ ವ್ಯವಸ್ಥೆಯೊಳಗೆ ಬದುಕನ್ನು ನಿಭಾಯಿಸುವುದು ಸವಾಲಿನ ಸಂಗತಿಯೇ ಆಗಿದೆ. ಎಷ್ಟೋ ಸಲ ಹೆಣ್ಣಿನ ಮೇಲಿನ ಅತ್ಯಾಚಾರ, ವೇಶ್ಯಾವೃತ್ತಿ, ವಿವಾಹದಂತಹ ಆಶ್ವಾಸನೆಗಳ ಮೂಲಕ ಲೈಂಗಿಕ ಸಂಬಂಧ ಸ್ಥಾಪಿಸುವ ಪುರುಷರಿಂದ ಮೋಸಕ್ಕೆ ಒಳಗಾಗಿ ಹಾಗೂ ಆಕಸ್ಮಿಕ ಘಟನೆಗಳಿಂದ ಅವಿವಾಹಿತೆಯರಾಗಿ ಉಳಿಯುವ ಸಂದರ್ಭ ಬಂದರೂ

ಸಹ, ಸ್ವಾಭಿಮಾನಿಯಾಗಿ ಬದುಕು ನಡೆಸುವ ಹೆಣ್ಣುಗಳ ಚಿತ್ರಣವೂ ಪ್ರಸ್ತುತ ಲೇಖಕಿಯರ ಕಥನಗಳಲ್ಲಿವೆ. ಇವುಗಳಲ್ಲಿ ಗೀತಾ ನಾಗಭೂಷಣ ಅವರ 'ಅಗ್ಗಿ' ಹಾಗೂ 'ಚಿತ್ತಿ ಮತ್ತು ರಿಕ್ಷಾ' ಪ್ರಮುಖವಾದವು.

'ಅಗ್ಗಿ' ಕಥೆಯಲ್ಲಿ ಊರ ಗೌಡನ ಮಗ ಈಸೂರನ ದುರ್ನಡತೆಯ ವಿರುದ್ಧ 'ಸೀನಿಂಗ'ನ ಮಗಳು 'ಸ್ವಾತಿ' ಪ್ರತಿಭಟಿಸುತ್ತಾಳೆ. ಇದೇ ವೇಳೆ 'ಮಲ್ಲೇಶಿ'ಯೊಂದಿಗೆ ಸ್ವಾತಿಯ ಮದುವೆ ನಿಶ್ಚಯವಾಗಿ, ಮದುವೆಯ ಹಿಂದಿನ ದಿನ ಅಪಘಾತದಲ್ಲಿ ಮಲ್ಲೇಶಿ ಸಾವನ್ನಪ್ಪುತ್ತಾನೆ. ಮಲ್ಲೇಶಿಯ ಮಗುವಿಗೆ ತಾನು ಮದುವೆಗೆ ಮುನ್ನವೇ ತಾಯಿಯಾಗಿದ್ದ ಸ್ವಾತಿ, ಆತ ಸತ್ತರೂ ಮಗುವನ್ನು ಉಳಿಸಿ, ಬೆಳೆಸುವ ಹಠ ಹಿಡಿಯುತ್ತಾಳೆ. ವಿಷಯ ನ್ಯಾಯ ತೀರ್ಮಾನಕ್ಕಾಗಿ ಪಂಚಾಯಿತಿಯ ಮುಂದೆ ಬರುತ್ತದೆ. ಈ ಹಿಂದೆಯೇ ಸ್ವಾತಿಯಿಂದ ಅವಮಾನಿತನಾಗಿದ್ದ ಸೀನಿಂಗ ಮತ್ತು ಗೌಡ ಸ್ವಾತಿಯು ಬಸಿರು ತೆಗೆಸಿಕೊಳ್ಳಬೇಕು, ಇಲ್ಲವಾದರೆ ನೂರೊಂದು ರೂಪಾಯಿ ದಂಡ ಕಟ್ಟಿ ಹಳ್ಳಿಯಿಂದ ಹೊರ ನಡೆಯಬೇಕೆಂದು ತೀರ್ಪು ನೀಡುತ್ತಾರೆ. ಇದರಿಂದ ನೊಂದ ಸ್ವಾತಿಯ ತಂದೆ ಅಸಹಾಯಕತೆಯಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಅಂತ್ಯಸಂಸ್ಕಾರಕ್ಕೆ ಮುಂದೆ ಬಂದ ಗೌಡನ ವಿರುದ್ಧ ಸ್ವಾತಿ ಕೆರಳುತ್ತಾಳೆ. "ನಮ್ಮಪ್ಪ ಸುಮ್ಮನೇ ಸತ್ತಿಲ್ಲ ನಿನ್ನ ನ್ಯಾಯ ಕೇಳಿ ಸತ್ತಾನೆ. ನೀನೇ ನನ್ನಪ್ಪಗೆ ಕೊಲ್ಲಿಸಿದ್ದು ನಿನ್ ಹಲ್ಕಟ್ ನ್ಯಾಯವೇ ನನ್ನಪ್ಪಗ ಹೆಣ ಮಾಡಿದ್ದು ನಿನ್ ಕೈಯಾಗ ಬೇಡಿ ಬೀಳಾತನಕಾ ನಮ್ಮಪ್ಪಗ ಮಣ್ಣ ಮಾಡಂಗಿಲ್ಲ ನಾನು..."[೨೨] ಎಂದು ವಿರೋಧಿಸುತ್ತಾಳೆ. ಅಷ್ಟರೊಳಗೆ ಅಲ್ಲಿಗೆ ಬಂದ ಪೊಲೀಸರು ಗೌಡ, ಈಸೂರ, ಕುಕ್ಕಣ್ಣಿಯರನ್ನು ಬಂಧಿಸುತ್ತಾರೆ. ಮುಂದೆ ಸ್ವಾತಿ ತನ್ನ ಮಗುವನ್ನು ಉಳಿಸಿ, ಬೆಳೆಸಲಿಕ್ಕೆ ಆದರೂ ನಾನು ಬದುಕುತ್ತೇನೆಂದು ಅಲ್ಲಿಂದ ಸ್ವತಂತ್ರ ಜೀವನ ರೂಪಿಸಿಕೊಳ್ಳಲು ಹೊರಡುತ್ತಾಳೆ.

'ಚಿತ್ತಿ ಮತ್ತು ರಿಕ್ಷಾ' ಕಥೆಯಲ್ಲಿ ಫಕೀರಪ್ಪನ ಆಶ್ರಯದಲ್ಲಿದ್ದ 'ಚಿತ್ತಿ' ರಿಕ್ಷಾ ಎಳೆದು ಸ್ವಾವಲಂಬಿ ಬದುಕು ಕಟ್ಟಿಕೊಂಡವಳು. ಫಕೀರಪ್ಪ ಸತ್ತ ಮೇಲೂ ರಿಕ್ಷಾದ ಮೂಲಕ ಬದುಕು ನಡೆಸಲು ನಿರ್ಧರಿಸುತ್ತಾಳೆ. ಇದಕ್ಕಾಗಿ ಊರಿನ ಮಂದಿ, ಪೋರರು 'ರಿಕ್ಷಾವಾಲೀ' ಎಂದು ಅಪಹಾಸ್ಯ ಮಾಡುತ್ತಾರೆ. ಕೇರಿಯ ಹೆಂಗಸರು "ಇದೆಲ್ಲಾ ಹೆಣ್ಣು ಮಕ್ಕಳಿಗಲ್ಲವಾ ಚಿತ್ತೀ... ಸುಮ್ಮನೆ ನಾಕುಮನಿ ಭಾಂಢಿ ಬಟ್ಟಿ ಮಾಡು, ಕಸಾ ಮುಸುರಿ ಮಾಡು ಗಂಡ ರಾಮಿ ಹಂಗ ರಿಕ್ಷಾ ಎಳಿಬ್ಯಾಡ.... ಹೆಣ್ಣು ಜಾತಿಗೇ ಅಪಮಾನ ಇದು"[೨೩] ಎಂದು ಬುದ್ಧಿ ಹೇಳುತ್ತಾರೆ. ಆದರೆ ಚಿತ್ತಿಗೆ ಇದು ಅವಮಾನದ ಕೆಲಸವಾಗಿ ಕಾಣುವುದಿಲ್ಲ. ತನ್ನ ಬಳಿ ಅಸಭ್ಯವಾಗಿ ವರ್ತಿಸುವ 'ಖಾಸಿಂ'ನಂತಹ ಗಂಡಸರನ್ನು ಪೊಲೀಸ್ ಸ್ಟೇಷನ್‌ಗೆ ಕರೆದೊಯ್ಯುವ ಛಾತಿ ಚಿತ್ತಿಯದು. ತಾನು ಪ್ರೀತಿಸಿದ 'ಸೋಮು'ವನ್ನು ಮದುವೆಯಾಗಲು ಹೊರಟ ಚಿತ್ತಿಗೆ ಆತನ ಆಕಸ್ಮಿಕ ಸಾವು ಆಘಾತ ತರುತ್ತದೆ. ಆದರೂ ಅವಿವಾಹಿತಳಾಗಿಯೇ ಉಳಿದು ರಿಕ್ಷಾದೊಂದಿಗೆ

ಮತ್ತೆ ಬದುಕು ಆರಂಭಿಸುತ್ತಾಳೆ. ಈ ಎರಡೂ ಕಥೆಗಳಲ್ಲಿ ಕಥಾನಾಯಕಿಯರು ತಮ್ಮ ಮದುವೆಯ ಸಂದರ್ಭಕ್ಕೆ ಎದುರಾದ ದುರಂತವನ್ನು ಧೈರ್ಯವಾಗಿ ನಿಭಾಯಿಸುತ್ತಾರೆ. ಅಕ್ಷರಸ್ಥರಲ್ಲದಿದ್ದರೂ ದುಡಿಯುವ ಛಲ, ಕಾನೂನಿನ ಅರಿವುಗಳೇ ಅವರಿಗೆ ಆಧಾರವಾಗುತ್ತವೆ. ಹಾಗಾಗಿ ಪ್ರಗತಿಪರ ಮಾದರಿಯ ಪಾತ್ರಗಳಾಗಿ 'ಚಿತ್ತಿ' ಮತ್ತು 'ಸ್ವಾತಿ'ಯನ್ನು ಪ್ರಸ್ತುತ ಕಥೆಗಳಲ್ಲಿ ಗುರುತಿಸಬಹುದಾಗಿದೆ.

ಒಟ್ಟಾರೆ ಹೆಣ್ಣಿನ ಅವಿವಾಹಿತ ಸ್ಥಿತಿ ಆಕೆಯನ್ನು ಅವಮಾನ, ಶೋಷಣೆಗಳಲ್ಲಿಯೇ ಉಳಿಸುತ್ತದೆ. ಇದಕ್ಕೆ ಕಾರಣ 'ವಿವಾಹ ಸಂಸ್ಥೆ'ಗೆ ಇರುವ ಅತಿಯಾದ ಪ್ರಾಧಾನ್ಯತೆಯಾಗಿದೆ. ಇದರಿಂದ ವಿವಾಹವಿಲ್ಲದೆ ಬದುಕುವ ಹೆಣ್ಣು ಕುಟುಂಬ ಹಾಗೂ ಸಮಾಜದ ಟೀಕೆ-ಟಿಪ್ಪಣಿಗಳನ್ನು ಎದುರಿಸುತ್ತಲೇ ಬದುಕಬೇಕಾಗುತ್ತದೆ. ಅದರಲ್ಲೂ ಅವಿವಾಹಿತ ತಾಯ್ತನದಲ್ಲಿ ತಾನು ಹೆತ್ತ ಮಗುವನ್ನು ಸಹ ವಂಶಾವಳಿಯಿಂದ ಗುರುತಿಸದ ಸಮಾಜದಿಂದ ಅವಮಾನ-ನೋವುಗಳನ್ನು ಸಹಿಸಬೇಕಾಗುತ್ತದೆ. ಎಷ್ಟೋ ಸಲ ಲೈಂಗಿಕ ಶೋಷಣೆಗಳಿಗೂ ಒಳಗಾಗುವ ಸಂದರ್ಭಗಳು ಎದುರಾಗುತ್ತವೆ. ಹಾಗಾಗಿ ಹೆಣ್ಣಿಗೆ ಸ್ವಯಂ ಅರಿವು, ಶಿಕ್ಷಣ, ಉದ್ಯೋಗ, ಕಾನೂನಿನ ತಿಳುವಳಿಕೆ ಎಷ್ಟೇ ಇದ್ದರೂ ಸಹ ವಿವಾಹಿತ ಮತ್ತು ಅವಿವಾಹಿತ ಎರಡೂ ಸ್ಥಿತಿಗಳಲ್ಲಿ ಶೋಷಿತಳೇ ಆಗಿದ್ದಾಳೆ. ಆದ್ದರಿಂದ ಕುಟುಂಬ ಹಾಗೂ ಸಮಾಜ ಎರಡೂ ಸಂಸ್ಥೆಗಳಲ್ಲಿ ಪುರುಷ ಪ್ರಧಾನ ಸಂಸ್ಕೃತಿಯ ಕಟ್ಟಳೆ, ಮೌಲ್ಯಗಳನ್ನು ಮೀರಿ ಹೆಣ್ಣು ವ್ಯಕ್ತಿ ಸ್ವಾತಂತ್ರ್ಯ ಪಡೆಯುವುದಾಗಲೀ, ಸ್ಥಾಪಿಸುವುದಾಗಲೀ ಸುಲಭ ಸಾಧ್ಯವಾಗಿಲ್ಲ.

### ೪.೫.೩. ಪರಿತ್ಯಕ್ತೆ

ಸಮಾಜದಲ್ಲಿ ಹೆಣ್ಣಿಗೆ ವಿವಾಹ ಕಡ್ಡಾಯ ಮಾತ್ರವಲ್ಲದೆ ಆ ವಿವಾಹ ಯಶಸ್ವಿಯಾಗುವಲ್ಲಿ ಹೆಣ್ಣನ್ನೇ ನೇರ ಹೊಣೆಗಾರಳನ್ನಾಗಿ ಮಾಡಲಾಗುತ್ತದೆ. ಹೀಗಿರುವಾಗ ಹೆಣ್ಣು ಗಂಡಿನಿಂದ ಪರಿತ್ಯಕ್ತೆಯಾಗಿ ಬದುಕುವುದು ಸಾಮಾಜಿಕ ವ್ಯವಸ್ಥೆಯಲ್ಲಿ ಗೌರವದ ವಿಚಾರವಾಗಿ ಕಾಣಿಸುವುದಿಲ್ಲ. ಹೆಂಡತಿಯಿಂದ ಬಿಡುಗಡೆ ಹೊಂದಿದ ಪತಿ ತನ್ನಿಚ್ಛೆಯಂತೆ ಬದುಕಲು ಸಮಾಜದಲ್ಲಿ ಆದ್ಯತೆಯನ್ನು ಕಲ್ಪಿಸಲಾಗಿದೆ. ಆದರೆ ಹೆಣ್ಣಿಗೆ ಇದೇ ಸಮಾನತೆ ಸಾಧ್ಯವಾಗದೆ ವೈರುಧ್ಯಗಳು ಎದುರಾಗುತ್ತವೆ. ಸಾಮಾನ್ಯವಾಗಿ ವರದಕ್ಷಿಣೆ, ಅಸಮ್ಮತ ವಿವಾಹ, ವಿಷಮ ದಾಂಪತ್ಯ, ಅನಾರೋಗ್ಯ, ಮಾನಸಿಕ ಅಸ್ವಸ್ಥತೆ, ಕುಡಿತ, ಹಿಂಸೆ, ಗಂಡು ಸಂತಾನದ ಬಯಕೆ, ಸ್ವೇಚ್ಛೆ, ಭಾವನಾತ್ಮಕ ಅಂತರ ಇತ್ಯಾದಿಗಳು ವಿಚ್ಛೇದನಕ್ಕೆ ಕಾರಣಗಳಾಗಿರುತ್ತವೆ. ಇಂತಹ ಪ್ರಸಂಗಗಳು ಎದುರಾದಾಗ ಕೆಲವು ಹೆಣ್ಣುಮಕ್ಕಳು ಧೈರ್ಯದಿಂದ ಪರಿಸ್ಥಿತಿಯನ್ನು ನಿಭಾಯಿಸಿದರೆ, ಕೆಲವರು ಮಾನಸಿಕ ಅಸ್ವಸ್ಥತೆ, ಆತ್ಮಹತ್ಯೆ, ಅನಾರೋಗ್ಯದಂತಹ ದುರಂತಗಳಿಗೆ ಒಳಗಾಗುತ್ತಾರೆ. ಆದರೆ ಹೆಣ್ಣಿಗೆ ಹೋಲಿಸಿದಾಗ ಗಂಡಿಗೆ ವಿಚ್ಛೇದನ ಅಂತಹದ್ದೊಂದು ಗುರುತರ ಸಮಸ್ಯೆಯಾಗಿ ಕಾಡುವುದಿಲ್ಲ. ಈ ಬಗೆಯ

ವಸ್ತುವಿಚಾರಗಳನ್ನು ಮಹಿಳಾ ದಶಕದ ಲೇಖಕಿಯರು ತಮ್ಮ ಕಥಾಸಾಹಿತ್ಯದಲ್ಲಿ ಒರೆಗೆ ಹಚ್ಚಿ ನೋಡುವ ಪ್ರಯತ್ನ ಮಾಡಿದ್ದಾರೆ.

ಸಾರಾ ಅಬೂಬಕ್ಕರ್ ಅವರ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ತಂದೆ ಮತ್ತು ಗಂಡನ ಆತ್ಮಪ್ರತಿಷ್ಠೆಗಳ ನಡುವಿನ ಗುದ್ದಾಟದಲ್ಲಿ 'ನಾದಿರಾ' ಪರಿತ್ಯಕ್ತೆಯಾಗಿ ತವರು ಸೇರುತ್ತಾಳೆ. ನಾದಿರಾ ಹಾಗೂ ರಶೀದ್‌ನದು ಅನ್ಯೋನ್ಯ ದಾಂಪತ್ಯ. ತಲಾಖ್‌ನಿಂದ ಸಂಬಂಧ ಮುರಿದು ಬಿದ್ದರೂ ಇಬ್ಬರಿಗೂ ದೂರವಾಗುವಲ್ಲಿ ಮನಸ್ಸಿಲ್ಲದೆ ಪುನಃ ಒಂದಾಗಿ ಬದುಕಲು ಬಯಸುತ್ತಾರೆ. ಕೊನೆಗೂ ನಾದಿರಾಳ ತಂದೆ ಮಹಮ್ಮದ್‌ಖಾನ್ ಮಗಳ ಜೀವನವನ್ನು ಮರಳಿ ಸರಿಪಡಿಸಲು ಧರ್ಮದ ಮೊರೆ ಹೋಗುತ್ತಾನೆ. ಆಗ ಮೌಲ್ವಿಯಿಂದ ಖಾನ್‌ರು ತಂದ ಪರಿಹಾರ ನಾದಿರಾಳಿಗೆ ಆಘಾತ ತರುತ್ತದೆ. ಕಾರಣ 'ತಲಾಖ್‌ನಿಂದ ಒಂದು ಸಲ ಮದುವೆ ಮುರಿದುಬಿದ್ದ ಮೇಲೆ ಮತ್ತೆ ಪುನಃ ಅವರು ಒಂದಾಗಬೇಕಾದರೆ ತಲಾಖ್ ಪಡೆದ ಹೆಣ್ಣು "ಬೇರೊಬ್ಬನನ್ನು ಮದುವೆಯಾಗಿ ಅವನಿಂದಲೂ ತಲಾಖ್ ಪಡೆದಿರಬೇಕು. ಹಾಗೆ ಅವಳು ಬೇರೊಬ್ಬನನ್ನು ಮದುವೆಯಾಗಿಲ್ಲದಿದ್ದರೆ ಒಂದು ದಿನಕ್ಕಾದರೂ ಒಬ್ಬನನ್ನು ಮದುವೆಯಾಗಬೇಕು; ಒಂದು ರಾತ್ರಿಯನ್ನು ಅವನೊಡನೆ ಕಳೆಯಬೇಕು, ಮರುದಿನ ಅವನಿಂದ ತಲಾಖ್ ಹೇಳಿಸಿಕೊಂಡು ಮೂರು ತಿಂಗಳು ಕಾಯಬೇಕು. ಅವನಿಂದ ಆಕೆ ಗರ್ಭಿಣಿಯಾಗಿಲ್ಲ ಎಂದು ನಿಶ್ಚಯವಾದ ಮೇಲೆ ಮೊದಲ ಗಂಡನು ಅವಳನ್ನು ಮದುವೆಯಾಗಬಹುದು. ಇದು ನಮ್ಮ ಸಮಾಜ ರೂಪಿಸಿದ ನಿಯಮ ಇದನ್ನು ಮೀರುವಂತೆ ಇಲ್ಲ ಮಗೂ"[೭೪] ಎಂದು ಮಹಮ್ಮದ್‌ಖಾನ್ ನಾದಿರಾಳಿಗೆ ಹೇಳುತ್ತಾರೆ. ಮತ್ತೊಂದು ಕಡೆ ಮೌಲ್ವಿ ನೀಡಿದ ಪರಿಹಾರದಿಂದ ರಶೀದ್ ಸಹ ಕೆರಳುತ್ತಾನೆ. ಕೊನೆಗೆ ಅನಿವಾರ್ಯವಾಗಿ ರಶೀದ್ ಮತ್ತು ನಾದಿರಾ ವ್ಯವಸ್ಥೆಯ ನಡುವೆ ಅಸಹಾಯಕರಾಗುತ್ತಾರೆ. ನಾದಿರಾಗೆ ಶೇಕಾಲಿ ಎಂಬ ವ್ಯಕ್ತಿಯೊಂದಿಗೆ ಒಂದು ದಿನದ ವಿವಾಹವೂ ನೆರವೇರುತ್ತದೆ. "ತಾನು ಎರಡು ವರ್ಷ ಜೊತೆಯಲ್ಲಿ ಬಾಳಿ ಒಂದು ಮಗುವನ್ನು ಪಡೆದ ತನ್ನ ನ್ಯಾಯವಾದ ಪತಿಯನ್ನು ಸೇರಬೇಕಾದರೆ ಈ ಮೃಗದಂತಿರುವಾತನಿಗೆ ಈ ಒಂದು ರಾತ್ರಿಗೆ ತನ್ನ ಮೈಯನ್ನು ಒಪ್ಪಿಸಬೇಕೇ?"[೭೫] ಎಂದು ನೋವಿನಿಂದ ನರಳುತ್ತಾಳೆ. ಈ ವೇಳೆಗೆ ಒಲ್ಲದ ವ್ಯವಸ್ಥೆಯ ನಿಯಮವನ್ನು ಮೀರುವ ನಿರ್ಧಾರ ಆಕೆಯಲ್ಲಿ ರೂಪುತಳೆದಿತ್ತು. ಇದಕ್ಕೆ ಪ್ರತಿಕ್ರಿಯೆಯಾಗಿ ಚಿಕ್ಕಂದಿನಿಂದಲೂ ತನ್ನ ಪ್ರೀತಿಪಾತ್ರವಾದ ಚಂದ್ರಗಿರಿ ನದಿಯನ್ನು ಬಿಟ್ಟು ಮಸೀದಿಯ ಕೊಳದಲ್ಲಿ ಧುಮುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಂತಹದೊಂದು ತೀರ್ಮಾನದ ಮೂಲಕ ನಾದಿರಾ ಸಾಧಿಸಲು ಹೊರಟ್ಟಿದ್ದೇನು ಎಂಬುದನ್ನು ಲೇಖಕಿ ಕಾದಂಬರಿಯ ಕೊನೆಗೆ ಹೇಳುವ ಮಾತುಗಳ ಮೂಲಕ ಗ್ರಹಿಸಬಹುದು. "ತನಗೆ ನ್ಯಾಯ ದೊರೆಯಬೇಕೆಂದು

ಅಲ್ಲಾಹನ ನ್ಯಾಯಸ್ಥಾನದಲ್ಲಿ ಅರ್ಜಿಸಲ್ಲಿಸ ಹೊರಟಿದ್ದಾಳೇನೋ ಈ ಕೊನೆಯ ಗಳಿಗೆಯಲ್ಲಿ ಪ್ರಶ್ನೆ ಕೇಳಲು ಧರ್ಮದ ಸಂಕೇತವಾದ ಮಸೀದಿಯನ್ನೇ ಇದಕ್ಕಾಗಿ ಆರಿಸಿಕೊಂಡಳೇನೊ ಊಹಾತೀತವಾದ ಒಂದು ಲೋಕ ಅವಳನ್ನು ಕೈ ಬೀಸಿ ಕರೆಯುತ್ತಿತ್ತು."[೨೬] ಹೀಗೆ ನಾದಿರಾಳ ಬದುಕಿನ ದುರಂತ ಬಹುತೇಕ ಸಂದರ್ಭಗಳಲ್ಲಿ ವಿವಾಹ ಮತ್ತು ವಿಚ್ಛೇದನ ಎರಡೂ ನೆಲೆಯಲ್ಲಿ ಹೆಣ್ಣಿಗೆ ನಿರ್ಧಾರಕ ಶಕ್ತಿಯಾಗಲಿ, ಅಭಿವ್ಯಕ್ತಿ ಸ್ವಾತಂತ್ರ್ಯವಾಗಲಿ ಇಲ್ಲವೆಂಬುದನ್ನು ತಿಳಿಸಿಕೊಡುತ್ತದೆ. ಗಮನಿಸುವ ಅಂಶವೆಂದರೆ ಇಲ್ಲಿ ನಾದಿರಾಳ ನಿರ್ಧಾರ ಪಲಾಯನವಲ್ಲ. ತನ್ನನ್ನು ಒಂದು ಸರಕಿನಂತೆ ಮತ್ತೊಬ್ಬರಿಗೆ ಒಪ್ಪಿಸಿಕೊಳ್ಳಲು ಒಲ್ಲದೆ ಅವಳು ತೋರಿಸುವ ಧೈರ್ಯ, ಪರಂಪರಾಗತ ಧಾರ್ಮಿಕ ನಂಬಿಕೆಗಳ ವಿರುದ್ಧದ ಮೌನ ಬಂಡಾಯವಾಗಿದೆ.

'ನಿಯಮ ನಿಯಮಗಳ ನಡುವೆ' ಇದೇ ತೆರನಾದ ವಸ್ತುವನ್ನೊಳಗೊಂಡ ಕಥೆಯಾಗಿದೆ. 'ಜೋಹಾರ'ಳನ್ನು ತಾಯಿ 'ಖಾದರ್'ಗೆ ಕೊಟ್ಟು ವಿವಾಹ ಮಾಡುತ್ತಾಳೆ. ಮೊದಲು ದಾಂಪತ್ಯ ಅನ್ಯೋನ್ಯವಾಗಿದ್ದರೂ ಒಡವೆಗಳ ವಿಚಾರಕ್ಕೆ ಖಾದರ್‌ನಿಂದ ದೂರಾಗಿ ಜೋಹಾರಾ ತವರು ಸೇರುತ್ತಾಳೆ. ಕೆಲ ದಿನಗಳ ನಂತರ ಖಾದರ್ ಆಕೆಗೆ ತಲಾಖ್ ಕಳುಹಿಸುತ್ತಾನೆ. ಗಂಡನಿಂದ ದೂರವಾಗುವುದರ ಜೊತೆಗೆ ತಾಯಿಯ ಮನೆಯಲ್ಲಿ ನಾನಾ ಕಷ್ಟಗಳಲ್ಲಿ ಆಕೆ ಬದುಕುವಂತಾಗುತ್ತದೆ. ಮುಂದೆ ಮಧ್ಯಸ್ಥರ ಮೂಲಕ 'ಒಬ್ಬತ್'(ಮರು ವಿವಾಹ) ಪ್ರಸ್ತಾಪ ಬರುತ್ತದೆ. ಆಗ ತಾನೆ ಬಾಣಂತಿಯಾಗಿದ್ದ ಜೋಹಾರಳಿಗೆ ಋತುಸ್ನಾನ ಮಾಡಿಸಿ ಮರುಮದುವೆ ಮಾಡುವ ಪ್ರಸ್ತಾಪ ಬಂದಾಗ ಧೈರ್ಯವಾಗಿ ಪ್ರತಿಭಟಿಸುತ್ತಾಳೆ.

'ಧ್ವನಿಯಿಲ್ಲದ ನೋವುಗಳು' ಕಥೆಯಲ್ಲಿ ಊರಿನ ಮಸೀದಿಯ ಮೌಲ್ವಿಯ ತಂಗಿಯಾದ 'ಜರೀನ'ಳನ್ನು 'ಮುಸ್ತಾಫ್'ನಿಗೆ ಮದುವೆ ಮಾಡಿಕೊಡಲಾಗುತ್ತದೆ. ನಿರುದ್ಯೋಗಿ, ಬೇಜವಾಬ್ದಾರಿ ಗಂಡನೊಂದಿಗೆ ತವರಿಗೆ ಬಂದ ಜರೀನಳ ಬದುಕನ್ನು ಸರಿಪಡಿಸಲು ಮೌಲ್ವಿಯಾದ ಅಣ್ಣ ಮುಸ್ತಾಫನನ್ನು ದುಡಿಮೆಗಾಗಿ ಕೊಲ್ಲಿ ರಾಷ್ಟ್ರಕ್ಕೆ ಕಳುಹಿಸುತ್ತಾನೆ. ಒಂದೂವರೆ ವರ್ಷದ ನಂತರ ಮುಸ್ತಾಫ್ ಸೂಕ್ತ ಕಾರಣ ತಿಳಿಸದೆ ಪತ್ರದ ಮೂಲಕ ವಿಚ್ಛೇದನ ಕಳುಹಿಸುತ್ತಾನೆ. ಆಗ "ಒಮ್ಮೆಯೂ ನನ್ನ ಮುಖ ನೋಡದೆ ಕಡಲಾಚೆಗಿದ್ದವರು ನನ್ನ ಯಾವ ತಪ್ಪು ಇಲ್ಲದೆ ನ್ಯಾಯ ವಿಚಾರಣೆಯನ್ನು ಮಾಡದೆ ನನ್ನನ್ನು ಸಮರ್ಥಿಸಿಕೊಳ್ಳಲು ನನಗೆ ಒಂದು ಅವಕಾಶವನ್ನು ಕೊಡದೆ ಒಂದೇ ಬಾರಿ ಈ ರೀತಿ ಮೂರು ತಲಾಖ್‌ಗಳನ್ನು ಹೇಳಿ ಬಿಡುಗಡೆ ಮಾಡಬಹುದು ಎಂದು ಧರ್ಮ ಗ್ರಂಥ ಬೋಧಿಸುತ್ತದೆಯೇ?"[೨೭] ಎಂದು ಜರೀನ ಅಣ್ಣನನ್ನು ಪ್ರಶ್ನಿಸುತ್ತಾಳೆ. ಆಕೆಯ ಈ ಮಾತುಗಳು ಹೆಣ್ಣಿನ ಬದುಕು ಮತ್ತು ಧರ್ಮದ ನಡುವಿನ ಜಿಜ್ಞಾಸೆಯಂತೆ ಕಾಣಿಸುತ್ತದೆ.

‘ಅಂಕುರ’ ಕಥೆಯಲ್ಲಿ ಮದುವೆಯಾದ ಏಳೇ ದಿನಕ್ಕೆ ಪತಿ ‘ಸಲೀಂ’ ದುಬೈಗೆ ಹೋದ ಮೇಲೆ ಕಥಾನಾಯಕಿ ‘ಶಕೀಲ’ಳಿಗೆ ವರದಕ್ಷಿಣೆ ಕಾರಣಕ್ಕೆ ಅತ್ತೆ, ಮೈದುನರಿಂದ ಕಿರುಕುಳ ಆರಂಭವಾಗುತ್ತದೆ. ಇವರ ಕುತಂತ್ರದಿಂದ ಅನಕ್ಷರಸ್ಥೆಯಾದ ಶಕೀಲ ದೂರದ ಗಂಡನೊಂದಿಗೆ ಸಂಪರ್ಕ ಸಾಧ್ಯವಾಗದೆ ನೊಂದುಕೊಳ್ಳುತ್ತಾಳೆ. ಆಕೆಯ ಅಸಹಾಯಕತೆಯ ದುರುಪಯೋಗ ಪಡೆದ ಮೈದುನ ಅನೈತಿಕ ನಡತೆಯ ಆರೋಪ ಹೊರಿಸಿ ಗಂಡನಿಂದ ವಿಚ್ಛೇದನ ಕೊಡಿಸುತ್ತಾನೆ. ಆದರೆ ಆಕೆಯ ವಿರುದ್ಧವಾಗಿ ವಿಚ್ಛೇದನ ಕೊಡಿಸುವ ಮೈದುನನ ದಬ್ಬಾಳಿಕೆ ಮತ್ತು ಕುತಂತ್ರಗಳ ಪೂರ್ವಾಪರವನ್ನು ತಿಳಿಯದೆ ವಿಚ್ಛೇದನ ನೀಡಿ ಮರುಮದುವೆಯಾಗುವ ಗಂಡನಿಂದ ಶಕೀಲಳ ಬದುಕು ಅಸಹಾಯಕತೆಯಲ್ಲಿ ಕೊನೆಗೊಳ್ಳುತ್ತದೆ.

ಹೀಗೆ ಕುಟುಂಬದ ಹಿರಿಯರು, ಧಾರ್ಮಿಕ ಮುಖಂಡರ ಸಮ್ಮುಖದಲ್ಲಿ ನೆರವೇರುವ ವಿವಾಹಗಳಲ್ಲಿಯೂ ಎಷ್ಟೋ ಸಲ ಹೆಣ್ಣಿಗೆ ಅಭದ್ರತೆ, ಅಸ್ಥಿರತೆಗಳು ಎದುರಾಗುತ್ತವೆ. ಆದರೆ ಈ ಸಂದರ್ಭಗಳಲ್ಲಿ ಕುಟುಂಬ, ಸಮಾಜದ ವ್ಯವಸ್ಥೆ, ಧಾರ್ಮಿಕ ಕಟ್ಟುಪಾಡುಗಳು ಪುರುಷ ಪರವಾಗಿ ನಿಲ್ಲುವ, ಆಕೆಗೆ ಯಾವುದೇ ನ್ಯಾಯ ಒದಗಿಸಿಕೊಡಲಾರದ ಸ್ಥಿತಿಗೆ ತಲುಪುತ್ತವೆಂಬುದನ್ನು ಸಾರಾ ಅವರ ಕಥೆಗಳು ಪರಿಶೀಲನೆಗೆ ಒಳಪಡಿಸುತ್ತವೆ. ಅಲ್ಲದೆ ಹೆಣ್ಣು ತನ್ನದಲ್ಲದ ತಪ್ಪಿಗೆ ವಿಚ್ಛೇದನಕ್ಕೆ ಒಳಗಾಗುವ ದುರಂತವನ್ನು ಮೇಲಿನ ಪಾತ್ರಗಳಲ್ಲಿ ಕಾಣುತ್ತೇವೆ. ‘ನಾದಿರಾ’ ಸಾವಿನಲ್ಲೂ ಪ್ರತಿರೋಧವನ್ನು ಸಾರಿದರೆ, ‘ಜರೀನಾ’ ಮತ್ತು ‘ಜೋಹಾರಾ’ ಧಾರ್ಮಿಕ ಮೂಲಭೂತವಾದಿ ನಿಲುವುಗಳನ್ನು ಪ್ರಶ್ನಿಸುವ ಹಂತಕ್ಕೆ ತಲುಪುತ್ತಾರೆ. ‘ಶಕೀಲ’ ವ್ಯವಸ್ಥೆಯ ದಾಳಕ್ಕೆ ಸಿಕ್ಕು ಅಸಹಾಯಕಳಾಗುತ್ತಾಳೆ. ಇಂತಹ ಪಾತ್ರಗಳನ್ನು ಸೃಷ್ಟಿಸಿದ ಸಾರಾ ಅವರು “ಹಿಂದೂ ಸಮಾಜದಲ್ಲಿ ವಿಧವೆಯರು ಶೋಷಣೆಗೊಳಗಾಗಿ ಮಾನಸಿಕ ಚಿತ್ರಹಿಂಸೆಗೆ ಗುರಿಯಾದರೆ, ಮುಸ್ಲಿಂ ಸ್ತ್ರೀಯರು ಸುಲಭದ ವಿವಾಹ ವಿಚ್ಛೇದನ ಮತ್ತು ಬಹುಪತ್ನಿತ್ವದ ರೂಪದಲ್ಲಿ ಶೋಷಣೆಗೊಳಾಗುತ್ತಾರೆ”[೭೮] ಎಂದಿದ್ದಾರೆ. ಇಸ್ಲಾಂ ಧರ್ಮದಲ್ಲಿ ಏಕಕಾಲಕ್ಕೆ ‘ತಲಾಖ್’ನ್ನು ಮೂರು ಬಾರಿ ನೀಡುವಂತಿಲ್ಲ, ಬದಲಾಗಿ ಮೂರು ತಿಂಗಳ ಅವಧಿಯಲ್ಲಿ ತಿಂಗಳಿಗೊಂದರಂತೆ ಕೊಡುವುದು. ಇಲ್ಲವಾದರೆ ಅದು ಧರ್ಮಬಾಹಿರ ಎಂದೂ ಸಹ ಹೇಳುತ್ತಾರೆ. ಆದ್ದರಿಂದ ಪುರುಷನಿಗೆ ವಿಚ್ಛೇದನ ಸುಲಭದ ವ್ಯಕ್ತಿ ನಿಯಮವಾಗಿದೆಯೇ ಹೊರತು, ಧರ್ಮದಲ್ಲಿ ಇಲ್ಲವೆನ್ನುವುದು ಸಾರಾ ಅವರ ಅಭಿಪ್ರಾಯ. ಇಲ್ಲಿನ ಕಥೆಗಳಲ್ಲಿ ಗಮನಿಸಲಾದ ಮತ್ತೊಂದು ಸಂಗತಿ ವಿಚ್ಛೇದಿತ ಮಹಿಳೆಯರು ತಮಗೆ ಪತಿಯಿಂದ ಸಿಗಬೇಕಾದ ಜೀವನಾಂಶದಿಂದ ವಂಚಿತರಾಗುವುದು. ಈ ಕುರಿತಂತೆ ‘ಅಂತಾರಾಷ್ಟ್ರೀಯ ಮಹಿಳಾ ದಶಕದ’ ೧೯೮೫ರ ಏಪ್ರಿಲ್ ೨೩ರ ಪ್ರಕರಣವನ್ನು ಉಲ್ಲೇಖಿಸಬಹುದಾಗಿದೆ. ಈ ಸಂದರ್ಭದಲ್ಲಿ ಭಾರತದ ಮುಸ್ಲಿಂ

ಮಹಿಳೆಯರ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು 'ಶಾ ಬಾನು' ಪ್ರಕರಣದಲ್ಲಿ ವಿಚ್ಛೇದಿತ ಮಹಿಳೆಗೆ ಗಂಡನಾದವನು ಜೀವನ ನಿರ್ವಹಣಾ ಭತ್ಯೆ ಕೊಡಬೇಕೆಂದು ನ್ಯಾಯಾಲಯ ಮಹತ್ವದ ತೀರ್ಪು ನೀಡಿತು. ಆದರೆ ವಿಚ್ಛೇದಿತ ಮಹಿಳೆಗೆ ಜೀವನ ನಿರ್ವಹಣಾ ಭತ್ಯೆ ನೀಡಬೇಕಾಗಿರುವುದು ಕೇವಲ 'ಇದ್ದತ್' ಅವಧಿಯಲ್ಲಿ ಮಾತ್ರ ಎಂದು ವಾದಿಸಲಾಯಿತು. ಈ ನಿರ್ಣಯವನ್ನು ವಿರೋಧಿಸಿ ಅನೇಕ ಪ್ರತಿಭಟನೆಗಳು ನಡೆದು, ಇದಕ್ಕೆ ಕಾರಣಳಾದ 'ಶಾ ಬಾನೋ'ವಿಗೆ ಸಾಮಾಜಿಕ ಮತ್ತು ಧಾರ್ಮಿಕ ಬಹಿಷ್ಕಾರವನ್ನು ಹಾಕಲಾಯಿತು. ನಂತರ ೧೯೮೭ರಲ್ಲಿ ದಾಖಲಾದ 'ಬೇಗಂ ಸಾಬಾನು' ಪ್ರಕರಣದಲ್ಲಿ ಸಹ ಮೊದಲ ಹೆಂಡತಿ ಬದುಕಿರುವಲ್ಲಿ ಎರಡನೆಯ ವಿವಾಹವಾದರೆ ಮೊದಲ ಹೆಂಡತಿಗೆ ನಿರ್ವಹಣಾ ಭತ್ಯೆ ಕೊಡಬೇಕೆಂದು ನ್ಯಾಯಾಲಯ ತೀರ್ಪನ್ನು ಕೊಟ್ಟಿತು. ಇದರಿಂದಾಗಿ ಮಹಿಳಾ ದಶಕದಲ್ಲಿ ಪ್ರಸ್ತುತವಾಗಿದ್ದ ಈ ಎಲ್ಲ ವಿಚಾರಗಳು ಲೇಖಕಿಯ ಕಥಾಸಾಹಿತ್ಯದ ಪಾತ್ರಗಳನ್ನು ಪ್ರಭಾವಿಸಿವೆ ಎಂಬುದಕ್ಕೆ ಸ್ಪಷ್ಟೀಕರಣ ದೊರೆತಂತಾಗುತ್ತದೆ. ಹೀಗೆ ಧರ್ಮವನ್ನು ಸಹ ತನ್ನ ವ್ಯಾಪ್ತಿಗೆ ಎಳೆದುಕೊಂಡ ಪಿತೃ ಸಂಸ್ಕೃತಿ, ಧರ್ಮದ ಹೆಸರಿನಲ್ಲಿ ಹೆಣ್ಣಿನ ಬದುಕನ್ನು ಹೇಗೆ ಮತ್ತಷ್ಟು ಅಸಹನೀಯಗೊಳಿಸುತ್ತದೆ ಎಂಬುದನ್ನು ಸಾರಾ ಅವರ ಕಥೆಗಳು ಸಮರ್ಥಿಸುತ್ತವೆ.

ವೈದೇಹಿ ಅವರ 'ಹಕ್ಕಿಲ್ಲದವರು' ಕಥೆಯಲ್ಲಿ ಎಂಬತ್ತು ವರುಷದ ಕಣ್ಣಿಲ್ಲದ 'ದೊಡ್ಡಕ್ಕ'ನ ಮಗಳು 'ಸಿರಿ' ಪರಿತ್ಯಕ್ತೆ. ಗಂಡನ ದುಡಿಮೆಯಿಲ್ಲದ ಸೋಮಾರಿತನ, ಹೆಂಡತಿ ಎಂದರೆ ದೇಹ ಸುಖಕ್ಕಾಗಿ ಎನ್ನುವ ಭಾವನೆಗಳಿಂದ ಬೇಸತ್ತು ಮಕ್ಕಳೊಂದಿಗೆ ತವರಿನಲ್ಲಿ ನೆಲೆಸುತ್ತಾಳೆ. ಆಶ್ರಯ ನೀಡಬೇಕಾದ ಅಣ್ಣನು ಸಹ ಬೇಜವಾಬ್ದಾರಿ ವ್ಯಕ್ತಿ. ಮೊದ ಮೊದಲು ತೋಟ, ಮನೆ, ಆಸ್ತಿ ಬೇಡ ಎಂದ ಅಣ್ಣನ ಜವಾಬ್ದಾರಿಯನ್ನು ಹೊತ್ತು ಹಾಳುಬಿದ್ದ ತೋಟವನ್ನು ಫಲವತ್ತಾಗಿಸುವಲ್ಲಿ ಕಷ್ಟಪಟ್ಟು ದುಡಿಯುತ್ತಾಳೆ. ಕಣ್ಣಿಲ್ಲದ, ಹುಚ್ಚಿಯಾದ ತಾಯಿಗೆ, ತನ್ನ ಮಕ್ಕಳಿಗೆ ಆಸರೆಯಾಗುತ್ತಾಳೆ. ಆದರೆ ಮುಂದೊಂದು ದಿನ ಆಸ್ತಿಯ ಹಕ್ಕಿನ ಪ್ರಶ್ನೆ ಬಂದಾಗ ಕಾನೂನಿನ ದೃಷ್ಟಿಯಲ್ಲಿ ಬೇಜವಾಬ್ದಾರಿ ಅಣ್ಣನೇ 'ಹಕ್ಕುದಾರ' ನಾಗುತ್ತಾನೆ. ಸಿರಿ 'ಹಕ್ಕಿಲ್ಲದವಳಾಗುತ್ತಾಳೆ. ಹೀಗೆ ಸಿರಿ ಪರಿತ್ಯಕ್ತೆಯಾಗಿ ಗಂಡ ಮತ್ತು ಅಣ್ಣ ಎರಡೂ ಕಡೆಗಳಿಂದಲೂ ಶೋಷಣೆ ಅನುಭವಿಸುವ ಚಿತ್ರಣ ಇಲ್ಲಿದೆ.

'ಅಕ್ಕು' ಕಥೆಯಲ್ಲಿ ಬಾಹ್ಯ ಜಗತ್ತಿಗೆ ಹುಚ್ಚಿಯಾಗಿ ಕಾಣುವ 'ಅಕ್ಕು' ವಿಷಮ ದಾಂಪತ್ಯ, ಪರಿತ್ಯಕ್ತ ಬದುಕಿನ ಪ್ರತೀಕ. ಆಕೆಯ ತಾಯ್ತನದ ಬಯಕೆ, ಸಮಾಜದ ಅಮಾನವೀಯತೆಯ ಬಗೆಗಿನ ಆಕ್ರೋಶ ಭ್ರಮೆಯ ಮಾತುಗಳ ಮೂಲಕ ವ್ಯಕ್ತವಾಗುತ್ತದೆ. 'ಸಿರಿಯತ್ತೆ'ಯ ಮದುವೆಯ ದಿನ ಆಕೆಯ ಅಲಂಕಾರವನ್ನು ಹಾಳು ಮಾಡುವ ಮೂಲಕ ಅಜ್ಜಯ್ಯ, ವಾಸುಚಿಕ್ಕಪ್ಪನನ್ನು ಮನಸೋ ಇಚ್ಛೆ ಬೈಯುವ ಮೂಲಕ ಅವರ ಅಧಿಕಾರಶಾಹಿ ಧೋರಣೆಯನ್ನೇ ಬುಡಮೇಲು

ಮಾಡುವಂತೆ ವ್ಯಂಗ್ಯವಾಡುತ್ತಾಳೆ. "ಅಕ್ಕುವಿನ ಈ ಅನಾವರಣ ಕ್ರಿಯೆ ಗಂಡಾಂತರದ್ದಾದರೂ ಅವಳನ್ನು ಬಿಟ್ಟುಕೊಡುವುದಿಲ್ಲ. ಕಾರಣ ಅದು ಅವಳ ಶಕ್ತಿ ಕೇಂದ್ರವಾಗಿದೆ"[೭೯] ಇಲ್ಲಿ ಅಕ್ಕುವಿನ ಮೂಲಕ ಪರಿತ್ಯಕ್ತ ಹೆಣ್ಣಿನ ನೋವು, ಶೋಷಣೆ, ಅಂತರಂಗದ ತುಡಿತ ಅನಾವರಣಗೊಳ್ಳುತ್ತದೆ. ಹಾಗಾಗಿ "ಅಕ್ಕುವಿನ ಅಸ್ವಸ್ಥತೆಗೆ ಅವಳ ವೈಯಕ್ತಿಕ ಬದುಕಿನ ದುರಂತ ಕಾರಣವಾಗಿರುವಂತೆ ಅವಳು ಬದುಕುತ್ತಿರುವ ಸಮಾಜದ ಕ್ರೌರ್ಯಕ್ಕೆ ಅವಳ ಹುಚ್ಚು ಒಂದು ಬಗೆಯ ಪ್ರತಿಕ್ರಿಯೆಯಾಗಿದೆ."[೮೦]

ಸಂನ್ಯಾಸಿಯಾಗಿ ಅಕ್ಕುವನ್ನು ಬಿಟ್ಟು ಹೋದ ಗಂಡ ಮರಳಿ ಬಂದಾಗಲೂ ಬೇರೆಯ ಗಂಡಿನೊಂದಿಗೆ ತನಗಿಲ್ಲದ ಸಂಬಂಧವನ್ನು ಕಲ್ಪಿಸುತ್ತಾಳೆ. "ಯೆಂತದ್? ಇನ್ನ್ ಇವ್ನೊಟ್ಟಿಗೆ ಹ್ವೋಪ್ದ! ನನ್ ಹ್ಯೆಣ ಸಮೇತ ಹೋಗ!"[೮೧] ಎಂದು ಆತನೊಂದಿಗೆ ಮರಳಿ ಹೋಗಲು ತಿರಸ್ಕರಿಸುತ್ತಾಳೆ. ಅಕ್ಕುವಿಗೆ ವೈರುಧ್ಯದಂತಿರುವ ಪಾತ್ರ 'ಒಂದು ಅಪರಾಧ ತನಿಖೆ' ಕಥೆಯಲ್ಲಿ ಬರುತ್ತದೆ. ಗಂಡ ಈ ಹಿಂದೆ ಮದುವೆಯಾದದ್ದನ್ನು ತಿಳಿಸದೆ ತನ್ನನ್ನು ವಂಚಿಸುತ್ತಿರುವುದನ್ನು ತಿಳಿದ 'ಬಾಬಿ'ಯೇ ಗಂಡನಿಂದ ಪರಿತ್ಯಕ್ತೆಯಾಗಿ ಬದುಕುವ ನಿರ್ಧಾರ ಮಾಡುತ್ತಾಳೆ. ಆದರೆ 'ಕುಸುಮಾ'ಳ ತಾಯಿ ಗೌರಕ್ಕ "ಎಷ್ಟಾದರು ನಿನ್ನ ಗಂಡನಲ್ಲವೆ?" ಎಂದು ನೀತಿ ಪಾಠ ಹೇಳಿದಾಗ ಗಂಡನ ಮನೆಗೆ ಮರಳುತ್ತಾಳೆ. ಇಲ್ಲಿ ನೀತಿ ಹೇಳುವ ಗೌರಕ್ಕ ಮತ್ತು ಆಕೆಯ ಮಾತುಗಳನ್ನು ಕೇಳಿ ಗಂಡನ ದಬ್ಬಾಳಿಕೆ, ಅನೈತಿಕತೆಯನ್ನು ಮತ್ತೆ ಸಹಿಸಲು ಹೊರಡುವ 'ಬಾಬಿ' ಪುರುಷ ಸಂಸ್ಕೃತಿಯ ಸಿದ್ಧ ಮಾದರಿ ಪಾತ್ರಗಳಾಗಿ ಕಾಣಿಸುತ್ತಾರೆ. ಆದ್ದರಿಂದ ಈ ಎರಡು ಕಥೆಗಳನ್ನು ಹೋಲಿಸಿದಾಗ 'ಬಾಬಿ' ಗಿಂತಲೂ ಹುಚ್ಚು, ಭ್ರಾಮಕ ಜಗತ್ತಿನ ಮೂಲಕ ಪುರುಷ ಹಿತಾಸಕ್ತಿಗಳಿಗೆ ಎದುರಾಗಿ ನಿಲ್ಲುವ ಅಕ್ಕುವೇ ನೊಂದ ಹೆಣ್ಣಿನ ಸಶಕ್ತ ಪಾತ್ರವಾಗುತ್ತಾಳೆ.

ಸಾರಾ ಅವರ 'ವಜ್ರಗಳು' ಮತ್ತು 'ಮೂಲೆ ಮುಟ್ಟಿದ ಹುಳು' ಕಥೆಗಳಲ್ಲಿನ ಕಥಾ ನಾಯಕಿಯರು ವಿಚ್ಛೇದಿತ ಬದುಕಿನ ಕಷ್ಟಗಳಿಂದ ನೊಂದು ಅಂತಿಮವಾಗಿ ತೆಗೆದುಕೊಳ್ಳುವ ನಿರ್ಧಾರಗಳಿಂದ ಗಮನ ಸೆಳೆಯುತ್ತಾರೆ. 'ವಜ್ರಗಳು' ಕಾದಂಬರಿಯ 'ನಫೀಜ' 'ಬದ್ರುದ್ದೀನ್' ನಿಂದ ವಿಚ್ಛೇದನ ಪಡೆದು ಹಳ್ಳಿಗೆ ಮರಳುತ್ತಾಳೆ. ಗಂಡು ಮಗು ಎಂಬ ಕಾರಣಕ್ಕೆ ನಫೀಜಳ ಮಗನೂ ಬದ್ರುದ್ದೀನ್‌ನ ಪಾಲಾಗುತ್ತಾನೆ. ಮುಂದೆ ತಂದೆಯ ವಯಸ್ಸಿನ 'ಉಸ್ಮಾನ್'ರನ್ನು ಎರಡನೆಯ ಮದುವೆಯಾಗಿ ಪುನಃ ಮಲಮಗನ ವಂಚನೆಯಿಂದ ನಫೀಜ ವಿಚ್ಛೇದಿತಳಾಗುತ್ತಾಳೆ. ಎಲ್ಲ ಅಪಮಾನ, ಶೋಷಣೆಯ ನಡುವೆಯೂ ಅನಾಥ ಮಗುವೊಂದನ್ನು ದತ್ತು ಪಡೆದು ಮರಳಿ ಬದುಕನ್ನು ರೂಪಿಸಿಕೊಳ್ಳುತ್ತಾಳೆ. 'ಮೂಲೆ ಮುಟ್ಟಿದ ಹುಳು' ಕಥೆಯಲ್ಲಿ 'ಸರಸಮ್ಮ' ಗಂಡನಿಂದ ದೂರಾಗಿ ಅವರಿವರ ಮನೆಯ ಚಾಕರಿ ಮಾಡಿ ಮಗನನ್ನು ಬೆಳೆಸುತ್ತಾಳೆ. ಆದರೆ ಆಕೆಯ ಕಷ್ಟಕ್ಕೆ ನೆರವಾಗಬೇಕಿದ್ದ ಮಗ ಬೇಜವಾಬ್ದಾರಿಯಾಗಿ ಅಲೆದಾಗ ಪುತ್ರ ವ್ಯಾಮೋಹದಿಂದ

ಇದನ್ನೆಲ್ಲ ಸಹಿಸಿಕೊಳ್ಳುವಂತಾಗುತ್ತದೆ. ಈ ಹಿಂದೆ ಮಗ ಚಿಕ್ಕವನಿದ್ದಾಗ ವಿದುರನಾದ 'ಅಪ್ಪಣ್ಣ' ತನ್ನನ್ನು ಮದುವೆಯಾಗುವಂತೆ ಕೇಳಿದಾಗ ತಿರಸ್ಕರಿಸುತ್ತಾಳೆ. ಆದರೆ ಮುಂದೊಂದು ದಿನ ಮಗನ ಕುಡಿತ, ವ್ಯಭಿಚಾರಗಳಿಗೆ ಬೇಸತ್ತ ಸರಸಮ್ಮ ಆತನನ್ನು ತೊರೆದು ಅಪ್ಪಣ್ಣನ ಆಶ್ರಯ ಬಯಸಿ ಹೋಗುತ್ತಾಳೆ. 'ನಫೀಜಾ' ಅನಾಥ ಮಗುವಿನಲ್ಲಿ ಹಾಗೂ ಸರಸಮ್ಮ ತನ್ನನ್ನು ಬಯಸಿದ ಅಪ್ಪಣ್ಣನಲ್ಲಿ ಪರಿತ್ಯಕ್ತ ಬದುಕಿನ ನೋವುಗಳಿಗೆ ಪರಿಹಾರ ಕಂಡುಕೊಳ್ಳುತ್ತಾರೆ.

ಗೀತಾ ಅವರ 'ಆಸರೆಗಳು' ಕಾದಂಬರಿಯಲ್ಲಿ 'ಮಾನಿಂಗ' ಸೇಂದಿ, ಹೆಂಡ, ತೆರವುಗಳ ಆಸೆಗಾಗಿ ಮಗಳು 'ತಾಳವ್ವ'ನನ್ನು 'ಈಸೂರ'ನೊಂದಿಗೆ ಮದುವೆ ಮಾಡಿಕೊಡುತ್ತಾನೆ. ಈಸೂರ ತಾಳವ್ವನಿಗೆ ವಿಚ್ಛೇದನ ನೀಡಿದಾಗ ಆಕೆಯ ತಾಯಿಗೆ 'ನೀ ಯಾಕ್ ಈ ಪಾಟೀ ಅಳ್ತಿ ಬಿಡೇ ಗಂಗಾ... ಪೋರಿ ಎದಿ ಒಡಕೊಂಡೆತ್ತು. ಅವನಿಗೊಂದು ಹೆಣ್ತಿ ಸಿಕ್ಕರೆ ಈಕೆಗೊಂದು ಗಂಡ ಸಿಕ್ತಾನ ಬಿಡು ನಾವೇನು ಹಾರ್ರುರ್ಜ, ಕ್ಯಾಮಟಗೇರು ಕೆಟ್ಟು ಹ್ವಾದೇವಾ... ಸುಮ್ನಿರು"[೮೨] ಎಂದು ಸುತ್ತಲಿನ ಜನ ಸಂತೈಸುತ್ತಾರೆ. ಅದರಂತೆ 'ಕೂಡಿಕೆ'ಯ ಮೂಲಕ 'ಕಾಡ್ಯಾ'ನೊಂದಿಗೆ ತಾಳವ್ವನ ಮರುಮದುವೆಯಾಗುತ್ತದೆ. ಈ ಮಾತುಗಳ ಮೂಲಕ ಕೆಳವರ್ಗದ ಮಹಿಳೆಯರಲ್ಲಿ ವಿಚ್ಛೇದನ, ವೈಧವ್ಯ ಹೊಂದಿದ ಹೆಣ್ಣಿಗೆ ಮರುಮದುವೆಯು ಸಾಮಾಜಿಕವಾಗಿ ಸಮ್ಮತವಾಗಿದ್ದು, ಹೊಸ ಬದುಕನ್ನು ರೂಪಿಸಿಕೊಳ್ಳಲು ಹೆಚ್ಚು ಅವಕಾಶಗಳನ್ನು ಒದಗಿಸಿದೆ ಎಂಬುದು ತಿಳಿದುಬರುತ್ತದೆ.

ಇದೆ ರೀತಿ 'ಬದುಕು' ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರ 'ಸಾಬವ್ವ' ವಿಚ್ಛೇದಿತೆ. 'ಹನುಮಪ್ಪ' ಗಂಡು ಸಂತಾನವಾಗಲಿಲ್ಲವೆಂದು ಈಕೆಯಿಂದ ದೂರವಾಗಿ ಎರಡನೆಯ ಮದುವೆಯಾಗುತ್ತಾನೆ. ಇದರಿಂದ ಎಷ್ಟೋ ಅವಮಾನ, ನಿಂದೆ, ವ್ಯಂಗ್ಯಗಳನ್ನು ಆಕೆ ಎದುರಿಸಬೇಕಾಗುತ್ತದೆ. ಆದರೆ ವಿಚಲಿತಳಾಗದ "ಸಾಬವ್ವ ಹಳ್ಳಿ ಬಿಟ್ಟಿಲ್ಲ ಯಾವ ಗಂಡಸಿಗೂ ತನ್ನ ಕಚ್ಚಿ ಸಡಿಲಿಸಿಲ್ಲ. ಕಟ್ಟು ನಿಟ್ಟಿನ ಬದುಕಿನಲ್ಲಿ ತನ್ನ ಮೈಯ ಹರೆಯ ಹತ್ತಿಕ್ಕಿ ದಿನಗಳೆದು ಈಗ ಮುಪ್ಪಿನ ಹೊಸ್ತಿಲಿಗೆ ಬಂದು ನಿಂತ ದಿಟ್ಟ ಹೆಂಗಸು. ಹೆಣ್ಣು ಆಕಾರದ ಗಂಡಿನಂತೆ ದುಡಿಯುತ್ತಾ ಎಲ್ಲೋರಿಗೆ ಬೇಕಾದವಳಾಗಿ ಬದುಕುತ್ತಿದ್ದಾಳೆ"[೮೩] ಎಂದು ವಿವರಿಸುವ ಲೇಖಕಿಯ ಮಾತುಗಳಿಂದಲೇ ಸಾಬವ್ವನ ಸ್ವಾಭಿಮಾನ, ಗಟ್ಟಿತನದ ಬದುಕು ಪರಿಚಯವಾಗುತ್ತದೆ. ಹೀಗೆ ಪರಿತ್ಯಕ್ತೆಯರಾದ ನಫೀಜಾ, ಸಾಬವ್ವ ಸ್ವತಂತ್ರ ಬದುಕನ್ನು ಕಟ್ಟಿಕೊಂಡರೆ, ನರಸಮ್ಮ, ತಾಳವ್ವನಂತವರು ಮತ್ತೊಂದು ಗಂಡಿನಲ್ಲಿ ನೆಲೆ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಇಷ್ಟು ಮಾತ್ರಕ್ಕೆ ಪರಿತ್ಯಕ್ತೆಯರ ಬದುಕು ಸರಳವೆಂದು ಹೇಳಲು ಸಾಧ್ಯವಿಲ್ಲ. ಎಷ್ಟೊ ಸಲ ಈ ಸಂದರ್ಭಗಳು ಹೆಣ್ಣನ್ನು ಅವಮಾನ, ಮಾನಸಿಕ ಹಿಂಸೆಗೆ ಒಳಗು ಮಾಡುತ್ತವೆ. ಕಾರಣ ಹೆಣ್ಣಿನ ಸ್ವಾವಲಂಬಿ ಬದುಕು,

ಮದುಮದುವೆ, ಕೂಡಿಕೆಯಂತಹ ಪದ್ಧತಿಗಳು ನೊಂದ ಮಹಿಳೆಯರಿಗೆ ಆಸರೆಯಾಗುವ ಬದಲು ಅಲ್ಲಿಯೂ ಗಂಡಿನ ಸ್ವಹಿತಾಸಕ್ತಿಗಳು ಮೇಲಾಗುತ್ತವೆ.

ಒಟ್ಟಿನಲ್ಲಿ ಪರಿತ್ಯಕ್ತ ಬದುಕಿನಲ್ಲಿ ಗಂಡಿಗಿಂತಲೂ ಹೆಚ್ಚು ಸಮಸ್ಯೆಗೆ ಒಳಗಾಗುವವಳು ಹೆಣ್ಣು. ವಿಚ್ಛೇದಿತ ಗಂಡಿಗೆ ಮರುಮದುವೆಯ ಅವಕಾಶ, ಸಹಾನುಭೂತಿ, ಮರ್ಯಾದೆಗಳು ಧಾರ್ಮಿಕ, ಸಾಮಾಜಿಕ ಇತರೆ ಎಲ್ಲಾ ನೆಲೆಗಳಿಂದಲೂ ದೊರೆಯುತ್ತವೆ. ಆದರೆ ಹೆಣ್ಣು ಇವುಗಳಿಗೆ ವಿರುದ್ಧ ಸನ್ನಿವೇಶದಲ್ಲಿ ಬದುಕುವಂತಾಗುತ್ತದೆ. ಸಾಮಾಜಿಕ, ಕೌಟುಂಬಿಕ ಸ್ಥಾನಮಾನ ಗಳನ್ನು ಕುಗ್ಗಿಸುವ ಮೂಲಕ ಆಕೆಯನ್ನು ನಿಯಂತ್ರಿಸಲಾಗುತ್ತದೆ. ಪರಿತ್ಯಕ್ತ ಹೆಣ್ಣು ಸುಶಿಕ್ಷಿತೆ, ಸ್ವಾವಲಂಬಿ, ಉದ್ಯೋಗಿ, ಅನಕ್ಷರಸ್ಥೆ, ಬಡತನ, ಶ್ರೀಮಂತಿಕೆ ಹೀಗೆ ಯಾವುದೇ ಸ್ತರದಲ್ಲಿದ್ದರೂ ಪುರುಷ ಪ್ರಾಧಾನ್ಯತೆಯ ನಿಯಂತ್ರಣ ತಪ್ಪಿದ್ದಲ್ಲ ಎಂಬುದು ಇಲ್ಲಿನ ಕಥೆಗಳಿಂದ ತಿಳಿದುಬರುವ ವಾಸ್ತವ ಸಂಗತಿಯಾಗಿದೆ.

**ಅಡಿಟಿಪ್ಪಣಿಗಳು**

೧. ಗಾಯತ್ರಿ ನಾವಡ, ೧೯೯೭, ವಿರಚನೆ, ಪು.೨೭

೨. ಸೀಮಂತಿನಿ ನಿರಂಜನ ಮತ್ತು ತೇಜಸ್ವಿನಿ ನಿರಂಜನ, ೧೯೯೪, ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಪು.೧೯

೩. ಗಾಯತ್ರಿ ನಾವಡ, ೧೯೯೭, ಪೂರ್ವೋಕ್ತ, ಪು.೪

೪. ಕೇಶವಶರ್ಮ, ೨೦೧೩, ಸ್ತ್ರೀವಾದಿ ಪರಿಕಲ್ಪನೆಗಳು, ಪು.೯೭

೫. ಸಾರಾ ಅಬೂಬಕ್ಕರ್, ೨೦೧೦, ಚಪ್ಪಲಿಗಳು, ಪು.೫೨

೬. ಅದೇ, ಪು.೫೭

೭. ವೀಣಾಶಾಂತೇಶ್ವರ, ೨೦೧೧, ನಡೆದದ್ದೇ ದಾರಿ, ಪು.೭೫

೮. ಅದೇ, ಪು.೨೫೪

೯. ರಾಘವೇಂದ್ರರಾವ್ ಎಚ್.ಎಸ್., ೨೦೧೨, ಕಣ್ಣಕಹನಿಗಳೆ ಕಾಣಿಕೆ, ಪು.೧೭೨

೧೦. ಗೀತಾ ನಾಗಭೂಷಣ, ೨೦೧೪, ಧುಮ್ಮಸು, ಪು.೧೩೪

೧೧. ವೀಣಾಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೪೧೧

೧೨. ಗೀತಾ ನಾಗಭೂಷಣ, ೨೦೧೦, ಹಸಿಮಾಂಸ ಮತ್ತು ಹದ್ದುಗಳು, ಪು.೮೯

೧೩. ಗಾಯತ್ರಿ ಸ.ನ. ಮತ್ತು ಶಶಿಕಲಾ ಎಸ್.ಡಿ.(ಸಂ), ೨೦೦೪, ಮಹಿಳಾ ಸಾಹಿತ್ಯ ಸಮೀಕ್ಷೆ, ಪು.೧೬೧

೧೪. ಗೀತಾ ನಾಗಭೂಷಣ, ೨೦೧೦, ಅವ್ವ ಮತ್ತು ಇತರ ಕಥೆಗಳು, ಪು.೩೯

೧೫. ಸುಮಿತ್ರಾಬಾಯಿ ಬಿ.ಎನ್., ೨೦೦೯, ಸರಹದ್ದುಗಳ ಆಚೆ ಈಚೆ, ಪು.೧೮೫

೧೬. ಗೀತಾ ನಾಗಭೂಷಣ, ೨೦೧೨, ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ, ಪು.೨೬೭

೧೭. ಅದೇ, ಪು.೨೭೧

೧೮. ವೀಣಾ ಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೪೧೨

೧೯. ಗೀತಾ ನಾಗಭೂಷಣ, ೨೦೧೨, ಪೂರ್ವೋಕ್ತ, ಪು.೩೮೯

೨೦. ಅದೇ, ಪು.೬೪೨

೨೧. ಲಲಿತಾ ನಾಯಕ್ ಬಿ.ಟಿ., ೨೦೧೦, ನೆಲೆ-ಬೆಲೆ, ಪು.೩೯

೨೨. ಲಲಿತಾ ನಾಯಕ್ ಬಿ.ಟಿ., ೧೯೯೮, ಹಬ್ಬ ಮತ್ತು ಬಲಿ, ಪು.೬೦

೨೩. ಸಾರಾ ಅಬೂಬಕ್ಕರ್, ೨೦೦೨, ಸಹನಾ, ಪು.೯೮

೨೪. ಸಾರಾ ಅಬೂಬಕ್ಕರ್, ೨೦೦೯, ವಜ್ರಗಳು, ಪು.೧೦೧

೨೫. ಲಲಿತಾ ನಾಯಕ ಬಿ.ಟಿ., ೨೦೧೦, ಪೂರ್ವೋಕ್ತ, ಪು.೮೪

೨೬. ಗೀತಾ ನಾಗಭೂಷಣ, ೨೦೧೨, ಪೂರ್ವೋಕ್ತ, ಪು.೧೮೭

೨೭. ಸುಮಿತ್ರಾಬಾಯಿ ಬಿ.ಎನ್., ೨೦೦೯, ಪೂರ್ವೋಕ್ತ, ಪು.೧೮೬

೨೮. ಶ್ರೀಮತಿ ಎಚ್.ಎಸ್., ೨೦೦೪, ಹೆಣ್ಣು-ಹೆಂಗಸು, ಪು.೭೩

೨೯. ಇಂದಿರಾ ಆರ್., ೨೦೦೨, ಮಹಿಳೆ, ಸಮಾಜ ಮತ್ತು ಸಂಸ್ಕೃತಿ, ಪು.೨೮

೩೦. ಶ್ರೀಮತಿ ಎಚ್.ಎಸ್., ೨೦೦೪, ಪೂರ್ವೋಕ್ತ, ಪು.೫೮

೩೧. ವೀಣಾ ಶಾಂತೇಶ್ವರ, ೨೦೦೬, ಪೂರ್ವೋಕ್ತ, ಪು.೧೮೭

೩೨. ಅಶೋಕ ಟಿ.ಪಿ., ೨೦೧೩, ಕಥನ ಪ್ರೀತಿ, ಪು.೨೦೯

೩೩. ವೀಣಾ ಶಾಂತೇಶ್ವರ, ೨೦೦೬, ಪೂರ್ವೋಕ್ತ, ಪು.೪೩೭

೩೪. ಅದೇ, ಪು.೪೪೯

೩೫. ಸಾರಾ ಅಬೂಬಕ್ಕರ್, ೨೦೧೦, ಪೂರ್ವೋಕ್ತ, ಪು.೧೦

೩೬. ಅದೇ, ಪು.೯೭

೩೭. ಸಾರಾ ಅಬೂಬಕ್ಕರ್, ೨೦೦೨, ಸಹನಾ, ಪು.೧೬೫

೩೮. ವೈದೇಹಿ, ೨೦೦೬, ಅಲೆಗಳಲ್ಲಿ ಅಂತರಂಗ, ಪು.೧೯೪

೩೯. ಸಾರಾ ಅಬೂಬಕ್ಕರ್, ೨೦೦೨, ಪೂರ್ವೋಕ್ತ, ಪು.೪೮

೪೦. ಸಾರಾ ಅಬೂಬಕ್ಕರ್, ೧೯೯೪, ಪೂರ್ವೋಕ್ತ, ಪು.೪೮

೪೧. ಲಲಿತಾ ನಾಯಕ ಬಿ.ಟಿ., ೧೯೯೮, ಹಬ್ಬ ಮತ್ತು ಬಲಿ, ಪು.೫೯

೪೨. ಗೀತಾ ನಾಗಭೂಷಣ, ೨೦೧೦, ಮಾಪುರ ತಾಯಿಯ ಮಕ್ಕಳು, ಪು.೬೧

೪೩. ಗೀತಾ ನಾಗಭೂಷಣ, ೨೦೦೬, ಕ್ಯಾದಿಗಿ ಬನದಾಗ ಕಥೆಯಾಗಿ ನಿಂತವರು, ಪು.೨೩೨

೪೪. ಅದೇ, ಪು.೨೩೨

೪೫. ಗೀತಾ ನಾಗಭೂಷಣ, ೨೦೧೦, ಪೂರ್ವೋಕ್ತ, ಪು.೪೮

೪೬. ಶ್ರೀಮತಿ ಎಚ್.ಎಸ್., ೨೦೦೩, ಪೂರ್ವೋಕ್ತ, ಪು.೩೫

೪೭. ಗೀತಾ ನಾಗಭೂಷಣ, ೨೦೧೦, ಜ್ವಲಂತ, ಪು.೧೧೨

೪೮. ಗೀತಾ ನಾಗಭೂಷಣ, ೨೦೧೦, ಬದುಕು, ಪು.೬೨

೪೯. ಅದೇ, ಪು.೨೨೫

೫೦ ಶ್ರೀಮತಿ ಎಚ್.ಎಸ್.(ಅನು), ೨೦೧೧, ದಿ ಸೆಕೆಂಡ್ ಸೆಕ್ಸ್, ಪು.೩೪೬

೫೧. ವೀಣಾ ಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೩೩೮

೫೨. ಅದೇ, ಪು.೩೦೬

೫೩. ಗೀತಾ ನಾಗಭೂಷಣ, ೨೦೧೨, ಪೂರ್ವೋಕ್ತ, ಪು.೭೮

೫೪. ಲಲಿತಾ ನಾಯಕ್ ಬಿ.ಟಿ., ೨೦೧೦, ಪೂರ್ವೋಕ್ತ, ಪು.೯೨

೫೫. ಗೀತಾ ನಾಗಭೂಷಣ, ೨೦೧೦, ನೀಲಗಂಗಾ, ಪು.೪೨

೫೬. ಲಲಿತಾ ನಾಯಕ್ ಬಿ.ಟಿ., ೧೯೯೮, ಹಬ್ಬ ಮತ್ತು ಬಲಿ, ಪು.೧೧

೫೭. ಶೈಲಜಾ ಹಿರೇಮಠ, ೨೦೦೩, ಸ್ತ್ರೀಕಥನ, ಪು.೨೨

೫೮. ವೀಣಾ ಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೨೪೯

೫೯. ವೈದೇಹಿ, ೨೦೦೬, ಅಲೆಗಳಲ್ಲಿ ಅಂತರಂಗ, ಪು.೫೮೪

೬೦. ವೀಣಾ ಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೧೧೭

೬೧. ವೈದೇಹಿ, ೨೦೦೬, ಅಲೆಗಳಲ್ಲಿ ಅಂತರಂಗ, ಪು.೮೨

೬೨. ಅದೇ, ಪು.೭೯

೬೩. ಅದೇ, ಪು.೮೩

೬೪. ಅದೇ, ಪು.೧೦೬

೬೫. ಅದೇ, ಪು.೧೧೦

೬೬. ಅದೇ, ಪು.೨೨೧

೬೭. ವೀಣಾ ಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೩೪೧

೬೮. ಅದೇ, ಪು.೧೫೫

೬೯. ಶ್ರೀಮತಿ ಎಚ್.ಎಸ್., ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪು.೪೦೬

೭೦. ವೀಣಾ ಶಾಂತೇಶ್ವರ, ೨೦೧೧, ಪೂರ್ವೋಕ್ತ, ಪು.೧೦

೭೧. ಅಮೂರ ಜಿ.ಎಸ್., ೨೦೧೨, ಕನ್ನಡ ಕಥನ ಸಾಹಿತ್ಯ: ಸಣ್ಣ ಕಥೆ, ಪು.೪೯೫

೭೨. ಗೀತಾ ನಾಗಭೂಷಣ, ೨೦೦೬, ಕ್ಯಾದಿಗಿ ಬನದಾಗ ಕಥೆಯಾಗಿ ನಿಂತವರು, ಪು.೫೫೯

೭೩. ಗೀತಾ ನಾಗಭೂಷಣ, ೨೦೧೦, ಅವ್ವ ಮತ್ತು ಇತರ ಕಥೆಗಳು, ಪು.೯೬

೭೪. ಸಾರಾ ಅಬೂಬಕ್ಕರ್, ೨೦೧೭, ಚಂದ್ರಗಿರಿ ತೀರದಲ್ಲಿ, ಪು.೬೬

೭೫. ಅದೇ, ಪು.೮೭

೭೬. ಅದೇ, ಪು.೮೮

೭೭. ಸಾರಾ ಅಬೂಬಕ್ಕರ್, ೨೦೧೦, ಚಪ್ಪಲಿಗಳು, ಪು.೧೩೪

೭೮. ಸಾರಾ ಅಬೂಬಕ್ಕರ್, ೨೦೦೧, ಅನಾವರಣ, ಪು.೩೦

೭೯. ಅಮೂರ್ ಜಿ.ಎಸ್., ೨೦೧೨, ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ, ಪು.೫೦೧

೮೦. ಅಶೋಕ ಟಿ.ಪಿ., ೨೦೧೩, ವೈದೇಹಿ ಕಥನ, ಪು.೪೯

೮೧. ವೈದೇಹಿ, ೨೦೦೬, ಅಲೆಗಳಲ್ಲಿ ಅಂತರಂಗ, ಪು.೧೫೭

೮೨. ಗೀತಾ ನಾಗಭೂಷಣ, ೨೦೧೦, ಆಸರೆಗಳು, ಪು.೮೪

೮೩. ಗೀತಾ ನಾಗಭೂಷಣ, ೨೦೦೧, ಬದುಕು, ಪು.೩೫೪

# ಅಧ್ಯಾಯ: ಐದು

## ಸಮಾರೋಪ

ಸಾಮಾಜಿಕವಾಗಿ ಪುರುಷ ನಿಯಂತ್ರಿತ ಸಂಸ್ಕೃತಿಯು ರೂಪಿಸಿದ ಪರಂಪರಾಗತ ನಂಬಿಕೆ, ಮೌಲ್ಯ, ಆಚರಣೆಗಳು ಯಾವತ್ತಿಗೂ ಮಹಿಳೆಯರ ಬದುಕು, ವ್ಯಕ್ತಿತ್ವ ಹೀಗೆಯೇ ಇರಬೇಕೆಂದು ನಿರ್ದೇಶಿಸುತ್ತಿರುತ್ತವೆ. ಆದರೆ ಇವುಗಳ ಒಳಗಿನ ವಾಸ್ತವವನ್ನು ಪತ್ತೆಹಚ್ಚಿ, ತಪ್ಪಾದವುಗಳನ್ನು ಪ್ರಶ್ನಿಸುವ ಹಾಗೂ ಹೊಸ ಅರಿವನ್ನು ಮೂಡಿಸುವ ಸಾಮರ್ಥ್ಯ ಸಾಹಿತ್ಯಕ್ಕೆ ಇದೆ. ಈ ಹಿನ್ನೆಲೆಯಲ್ಲಿಯೇ 'ಮಹಿಳಾ ದಶಕದ ಲೇಖಕಿಯರ ಕಥನಗಳಲ್ಲಿ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣ'ದ ಅಧ್ಯಯನ ಕೈಗೊಳ್ಳಲಾಗಿದೆ. ಅದರಂತೆಯೇ ಸ್ತ್ರೀತ್ವದ ಪ್ರಮುಖ ವಾಗ್ವಾದಗಳನ್ನು ತಮ್ಮ ಕಥೆಗಳ ಮೂಲಕ ಸೃಜನಶೀಲ ನೆಲೆಯಲ್ಲಿ ಈ ದಶಕದ ಲೇಖಕಿಯರು ಪ್ರತಿಪಾದಿಸುವ ಪ್ರಯತ್ನ ಮಾಡಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ 'ಅಂತಾರಾಷ್ಟ್ರೀಯ ಮಹಿಳಾ ದಶಕ'ದಂತಹ ಚಾರಿತ್ರಿಕ ಘಟ್ಟ ಮತ್ತು ಮಹಿಳಾ ಚಳುವಳಿಗಳ ಚಿಂತನೆಗಳನ್ನು ತಳಹದಿಯಾಗಿಸಿ ಪ್ರಾತಿನಿಧಿಕ ಲೇಖಕಿಯರ ಕಥಸಾಹಿತ್ಯದ ಅಧ್ಯಯನಕ್ಕೆ ತೊಡಗಲಾಗಿದೆ. ಸಾಮಾನ್ಯವಾಗಿ ಕುಟುಂಬ, ಸಮಾಜ, ಧರ್ಮ ಇತ್ಯಾದಿಗಳು ಹೆಣ್ಣಿನ ಭಾಷೆ ಮತ್ತು ಆಲೋಚನಾ ಕ್ರಮಗಳನ್ನು ರೂಪಿಸುತ್ತವೆ. ಈ ಬಗೆಯ ಸಂಪ್ರದಾಯಿಕ ಆಲೋಚನಾ ಕ್ರಮಗಳನ್ನು ಮೀರಿ ಲೇಖಕಿಯರು ತಮ್ಮ ಕಥೆಗಳಲ್ಲಿ ಬಹುಸಂಸ್ಕೃತಿಯ ವಿವರಗಳನ್ನು ಕಟ್ಟಿಕೊಡುತ್ತಾರೆ. ತಮ್ಮದೇ ಸಮುದಾಯ ಮತ್ತು ತಮ್ಮ ಸುತ್ತಲಿನ ವ್ಯಾಪ್ತಿಯಲ್ಲಿನ ಮಹಿಳಾ ಸಮಸ್ಯೆಗಳನ್ನು, ಮಾನಸಿಕ ತುಮುಲಗಳನ್ನು ಸರಳ ನಿರೂಪಣೆಯೊಂದಿಗೆ ಹೇಳಿದ್ದಾರೆ.

ಲೇಖಕಿಯರ ವೈಯಕ್ತಿಕ ಬದುಕು, ಚಿಂತನೆ ಹಾಗೂ ಬರಹಗಳಿಗೂ ಪೂರಕ ಸಂಬಂಧವಿದೆ. ಬಹುತೇಕ ಸಂದರ್ಭಗಳಲ್ಲಿ ಅವರು ಸೃಷ್ಟಿಸಿದ ಪ್ರತಿಯೊಂದು ಪಾತ್ರಗಳು, ವ್ಯಕ್ತಿಗತ ಅನುಭವವೆಂಬಂತೆ ಕಾಣಿಸುತ್ತವೆ. ಇದರೊಟ್ಟಿಗೆ ಹೊಸ ಚಿಂತನೆಯಾಗಿ ಅಸ್ತಿತ್ವ ತಳೆದಿದ್ದ ಸ್ತ್ರೀವಾದದ ಸ್ಪಷ್ಟ ಪ್ರಭಾವವನ್ನು

ಗುರುತಿಸಲು ಸಾಧ್ಯವಾಗಿದೆ. ಮಹಿಳಾ ದಶಕಕ್ಕೂ ಹಿಂದಿನ ಪರಂಪರೆಯ ಲೇಖಕಿಯರಿಗಿಂತಲೂ ಸ್ತ್ರೀ ಮಾದರಿ ಪಾತ್ರಗಳ ಚಿತ್ರಣ ಬೇರೆಯದೇ ದೃಷ್ಟಿಕೋನ ಮತ್ತು ಪ್ರಗತಿಪರ ಅಶಯಗಳೊಂದಿಗೆ ಪ್ರಸ್ತುತ ಲೇಖಕಿಯರ ಕಥನಗಳಲ್ಲಿ ಮೂಡಿಬಂದಿವೆ. ಈ ಬಗ್ಗೆ ಲೇಖಕಿಯರ ಕಥನ ಪರಂಪರೆಯ ತೌಲನಿಕ ಅಧ್ಯಯನದ ಮೂಲಕ ತಿಳಿಯಲಾಗಿದೆ. ತಾಯ್ತನ, ಗೃಹಿಣಿ, ದೇವದಾಸಿ, ವೇಶ್ಯೆ, ವಿಧವೆ, ಅವಿವಾಹಿತೆ, ಪರಿತ್ಯಕ್ತೆ ಮುಂತಾದ ಮಾದರಿಗಳಲ್ಲಿ ಪುರುಷ ಕೇಂದ್ರಿತ ಚಿಂತನೆಗಳಿಗೆ ಹೊಂದಿಕೊಂಡೇ ಹೆಣ್ಣು ತನ್ನ ಪಾತ್ರವನ್ನು ನಿರ್ವಹಿಸುವ ಸಂಪ್ರದಾಯವನ್ನು ಕಾಣುತ್ತೇವೆ. ಆದರೆ ಮಹಿಳಾ ದಶಕದ ಲೇಖಕಿಯರು ಆಧುನಿಕ ಚಿಂತನೆ, ಅಭಿವ್ಯಕ್ತಿ ಸ್ವಾತಂತ್ರ್ಯದ ಫಲವಾಗಿ ಈ ಬಗೆಯ ಸಂಪ್ರದಾಯವನ್ನು ವೈಚಾರಿಕವಾಗಿ ಮೀರುವ ಪ್ರಯತ್ನ ಮಾಡಿದರು. ಇದರಿಂದಾಗಿ ಸಿದ್ಧ ಮಾದರಿಯ ಸ್ತ್ರೀಪಾತ್ರಗಳು ಪರಿವರ್ತಿತ ರೂಪದಲ್ಲಿ ಕಾಣಿಸಿಕೊಳ್ಳಲು ಸಾಧ್ಯವಾಯಿತು. ಲೇಖಕಿಯರು ಈ ಮೂಲಕ ಸ್ತ್ರೀವಾದಿ ಚಿಂತನೆಯ ಆಶಯ ಮತ್ತು ಮಹಿಳಾದಶಕದ ಉದ್ದೇಶಗಳನ್ನು ಎಷ್ಟರಮಟ್ಟಿಗೆ ತಲುಪಲು ಸಾಧ್ಯವಾದರು ಎನ್ನುವ ಪರಿಮಾಣಾತ್ಮಕತೆ ಇಲ್ಲಿ ಮುಖ್ಯವಾಗುವುದಿಲ್ಲ. ಬದಲಾಗಿ ಹೆಣ್ಣು ಮತ್ತು ಗಂಡಿನ ಅಧಿಕಾರ ಸಂಬಂಧ ರಾಜಕಾರಣಕ್ಕೆ ತಾತ್ವಿಕ ಮತ್ತು ಆಚರಣಾತ್ಮಕ ವಿರೋಧವನ್ನು ತಮ್ಮ ಪಾತ್ರಗಳಲ್ಲಿ ನಿರೂಪಿಸಿದ ಲೇಖಕಿಯರ ಪ್ರಯತ್ನ ಪ್ರಮುಖವೆನಿಸುತ್ತದೆ.

ಇಷ್ಟಾದರೂ ವಾಸ್ತವದಲ್ಲಿ ಮಹಿಳಾ ದಶಕದ ನಂತರದಲ್ಲಿಯೂ ಹೆಣ್ಣಿನ ವಿಷಯಗಳು ಮತ್ತಷ್ಟು ಬಿಕ್ಕಟ್ಟನ್ನು ಎದುರಿಸುತ್ತಿವೆ. ಲೇಖಕಿಯರು ತಮ್ಮ ಕಥಾಸಾಹಿತ್ಯದ ಸ್ತ್ರೀ ಪಾತ್ರಗಳಲ್ಲಿ ಅನಾವರಣಗೊಳಿಸಿದ ಅತ್ಯಂತ ಗಂಭೀರ ವಿಚಾರಗಳಾದ ವರದಕ್ಷಿಣೆ, ಭ್ರೂಣಹತ್ಯೆ, ಅತ್ಯಾಚಾರ, ಆಕ್ರಮ ಸಾಗಾಣಿಕೆ, ವೇಶ್ಯವಾಟಿಕೆ, ಅಪೌಷ್ಠಿಕತೆಗಳು ಇಂದಿಗೂ ಸಮಸ್ಯಾತ್ಮಕವಾಗಿ ಮುಂದುವರೆದಿವೆ. ಇವುಗಳ ನಿಯಂತ್ರಣಕ್ಕೆ ಎಷ್ಟೇ ಕಾನೂನುಗಳಿದ್ದರೂ ರಾಜಕೀಯ ಹಿತಾಸಕ್ತಿ, ಸ್ವಾರ್ಥಗಳ ಕಾರಣದಿಂದ ಪರಿಣಾಮಕಾರಿ ಅನುಷ್ಠಾನ ಸಾಧ್ಯವಾಗಿಲ್ಲ. ಆದರೂ ಸಹ ಇವುಗಳ ಕುರಿತಾದ ಅರಿವನ್ನು ಮೂಡಿಸುವ ಕೆಲಸ ವಿವಿಧ ಕ್ಷೇತ್ರಗಳ ಮೂಲಕ ನಡೆಯುತ್ತಲೇ ಇದೆ. ಪ್ರಭಾವಿ ಮಾಧ್ಯಮವಾದ ಸಾಹಿತ್ಯ ಕ್ಷೇತ್ರವೂ ಇದರಿಂದ ಹೊರತಾಗಿಲ್ಲ. ಹಾಗಾಗಿ 'ಮಹಿಳಾ ದಶಕ'ದ ಅವಧಿಯಲ್ಲಿ ಲೇಖಕಿಯರು ಮೂಡಿಸಿದ ಸ್ತ್ರೀವಾದಿ ಅರಿವು, ಪ್ರಸ್ತುತ ದಿನಮಾನಗಳಲ್ಲೂ ಹೊಸ ಮಾದರಿ ಸ್ವರೂಪದೊಂದಿಗೆ ಮುಂದುವರೆದಿದೆ. ಶಿಕ್ಷಣ, ಉದ್ಯೋಗ, ಕಾನೂನಾತ್ಮಕ ತಿಳುವಳಿಕೆ, ಸ್ವಾವಲಂಬನೆ, ಸ್ವಾತಂತ್ರ್ಯ ಸಾಧನೆಗಳಲ್ಲಿ ಆಧುನಿಕ ಹೆಣ್ಣಿನ ಬದುಕು ಮಹತ್ವದ ಪರಿವರ್ತನೆ ಕಂಡಿದೆ. ಇಷ್ಟಾದರೂ ಸಹ ಪಿತೃ ಸಂಸ್ಕೃತಿ ಹೆಣ್ಣಿನ ಈ ಬದಲಾವಣೆಯ ಆಶಯಗಳನ್ನು ಸಹ ತನ್ನ ಅಧಿಕಾರಶಾಹಿ ಹಿಡಿತಕ್ಕೆ ತಂದುಕೊಳ್ಳಲು ಪರ್ಯಾಯ ದಾರಿಗಳನ್ನು ಕಂಡುಕೊಂಡಿರುವ ಕಟುಸತ್ಯವನ್ನಂತೂ ನಿರಾಕರಿಸುವಂತಿಲ್ಲ.

## ೫.೧. ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನದಲ್ಲಿ 'ಮಹಿಳಾ ದಶಕ', 'ಲೇಖಕಿಯರ ಕಥನ ಪರಂಪರೆ' ಹಾಗೂ 'ಸ್ತ್ರೀ ಮಾದರಿ ಪಾತ್ರ ಪ್ರತಿನಿಧೀಕರಣ' ಪ್ರಮುಖ ಅಂಶಗಳಾಗಿವೆ. ಈ ಮೂರನ್ನು ಒಂದಕ್ಕೊಂದು ಪೂರಕವಾಗಿಸಿ ಸ್ತ್ರೀವಾದಿ ಹಿನ್ನೆಲೆಯಾಗಿ ಪ್ರಾತಿನಿಧಿಕ ಕಥಾಸಾಹಿತ್ಯದ ವಿಶ್ಲೇಷಣೆ ಕೈಗೊಳ್ಳಲಾಗಿದ್ದು ಅಧ್ಯಯನದ ಕೊನೆಗೆ ಕಂಡುಕೊಂಡ ಫಲಿತಗಳು ಹೀಗಿವೆ.

* ಮಹಿಳಾ ದಶಕಕ್ಕೂ ಹಿಂದಿನ ಆರಂಭಿಕ ಕಾಲಮಾನದ ಹಲವಾರು ಲೇಖಕಿಯರು ಸಾಹಿತ್ಯ ವಲಯ ಮಾತ್ರವಲ್ಲದೆ, ರಾಷ್ಟ್ರೀಯವಾದಿ ಹಾಗೂ ಇತರೆ ಮಹಿಳಾ ಚಳುವಳಿಗಳೊಂದಿಗೆ ಗುರುತಿಸಿಕೊಂಡಿದ್ದರು. ತಮ್ಮದೇ ವ್ಯಾಪ್ತಿಯಲ್ಲಿ ಮಹಿಳೆಯರ ಪರವಾದ ಬರಹ, ಚಿಂತನೆ, ಸಂಘಟನೆ, ಹೋರಾಟಗಳಲ್ಲಿ ಭಾಗವಹಿಸಿದ್ದರು. ಆದರೆ ಪ್ರೋತ್ಸಾಹದ ಕೊರತೆ, ರಾಷ್ಟ್ರೀಯ ಚಳುವಳಿಗೆ ದೊರೆತ ಹೆಚ್ಚಿನ ಆದ್ಯತೆಯ ಕಾರಣದಿಂದ ಹಿನ್ನಡೆಯನ್ನು ಕಂಡುಕೊಳ್ಳುವಂತಾಯಿತು. ಆದ್ದರಿಂದ ಮಹಿಳಾ ದಶಕದ ಸಾಹಿತ್ಯದಲ್ಲಿ ಪ್ರಚುರಗೊಂಡ ಮಹಿಳಾಪರ ಚಿಂತನೆ, ಅಭಿವೃದ್ಧಿಯ ಆಶಯಗಳ ಮೂಲ ಆರಂಭಿಕ ಹಂತದ ಲೇಖಕಿಯರೇ ಆಗಿದ್ದಾರೆ ಎಂಬುದನ್ನು ಲೇಖಕಿಯರ ಕಥನ ಪರಂಪರೆಯ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.
* ಮಹಿಳಾ ದಶಕದ ಸಂದರ್ಭದಲ್ಲಿನ ದಲಿತ-ಬಂಡಾಯ ಚಳುವಳಿ, ಸ್ತ್ರೀವಾದಿ ಚಿಂತನೆಗಳ ಪರಿಣಾಮದಿಂದ ಮಹಿಳಾ ಸಾಹಿತ್ಯ ಹೊಸ ಆಯಾಮ ಪಡೆಯಿತು. ಪರಿಣಾಮ ಹೊಸ ವೈಚಾರಿಕತೆ, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಲೇಖಕಿಯರ ಮನಸ್ಸು ತೆರೆದುಕೊಳ್ಳುವಂತಾಯಿತು. ಹೀಗಾಗಿ ಸಾಮಾಜಿಕ ನೆಲೆಯಲ್ಲಿ ಅತ್ಯಂತ ನಿರ್ಲಕ್ಷಿತವೆನಿಸಿದ್ದ ದಲಿತ, ಬುಡಕಟ್ಟು, ಮುಸ್ಲಿಂ ಮುಂತಾದ ಸಮುದಾಯದ ಮಹಿಳೆಯರ ವಾಸ್ತವ ಚಿತ್ರಣಗಳು ಪರಿಣಾಮಕಾರಿ ನಿಲುವುಗಳೊಂದಿಗೆ ಅನಾವರಣಗೊಂಡಿರುವುದನ್ನು ಅಧ್ಯಯನದಲ್ಲಿ ಗ್ರಹಿಸಲಾಗಿದೆ.
* ಎಪ್ಪತ್ತರ ದಶಕದಲ್ಲಿ ಮುಖಾಮುಖಿಯಾದ ಸ್ತ್ರೀವಾದಿ ಹೋರಾಟ ಪ್ರಜ್ಞೆಯು ಬಂಡಾಯದ ದನಿಯೊಂದಿಗೆ ಮಿಳಿತಗೊಂಡಿತು. ಇದರಿಂದಾಗಿ 'ಅಡುಗೆಮನೆ' ಸಾಹಿತ್ಯವೆಂದು ಗುರುತಿಸಿಕೊಂಡ ಮಹಿಳಾ ಸಾಹಿತ್ಯ ಪುರುಷ ಗ್ರಹಿಕೆಯ ಮಹಿಳೆಯ ಅನಾವರಣವನ್ನು ಪಕ್ಕಕ್ಕೆ ಸರಿಸಿ ತನ್ನದೇ ಸ್ತ್ರೀವಾದಿ ಚಿಂತನೆಯ ಹಾದಿಯನ್ನು ನಿರ್ಮಿಸಿಕೊಂಡಿರುವುದು ಈ ಅಧ್ಯಯನದಲ್ಲಿ ಗುರುತಿಸಲು ಸಾಧ್ಯವಾಗಿದೆ.
* ಮಹಿಳಾ ದಶಕಕ್ಕೂ ಹಿಂದಿನ ಲೇಖಕಿಯರ ಕಥಾಸಾಹಿತ್ಯದಲ್ಲಿನ ಬಹುತೇಕ ಪಾತ್ರಗಳು ಗೃಹಿಣಿ ಎಂಬ ಸಿದ್ಧಮಾದರಿಯ ಚಿಂತನೆಗಳಿಗೆ ಸೀಮಿತವಾಗಿದ್ದವು. ಆದರೆ ಮಹಿಳಾ

ದಶಕದ ಅವಧಿಯ ಕಥಾಸಾಹಿತ್ಯದಲ್ಲಿ ಮಹಿಳಾಪರ ಕಾನೂನು, ಉನ್ನತ ವಿದ್ಯಾಭ್ಯಾಸ, ಬಹುಪತ್ನಿತ್ವ, ಅತ್ಯಾಚಾರ, ಕೌಟುಂಬಿಕ ಹಿಂಸೆ, ವಿಚ್ಛೇದನ, ಮರುಮದುವೆಯ ವಿಚಾರಗಳನ್ನು ವಿಭಿನ್ನ ಹಾಗೂ ಪ್ರಗತಿಪರ ಮಾದರಿಯಲ್ಲಿ ಪ್ರಸ್ತಾಪಿಸಲು ಸಾಧ್ಯವಾಗಿರುವುದು ಲೇಖಕಿಯರ ತೌಲನಿಕ ಅಧ್ಯಯನದಿಂದ ತಿಳಿದುಬರುತ್ತದೆ.

* ಮಹಿಳಾ ದಶಕದಲ್ಲಿ ಸ್ತ್ರೀ ಸುಧಾರಣಾವಾದಿ ನಿಲುವುಗಳೊಂದಿಗೆ ಬಂದ ಮಹಿಳಾ ಪರ ಕಾನೂನುಗಳು, ಆರ್ಥಿಕ ಸ್ವಾವಲಂಬನೆ, ವಿಸ್ತರಣೆಗೊಂಡ ಶಿಕ್ಷಣ, ಔದ್ಯೋಗಿಕ ಸೌಲಭ್ಯಗಳು ಆಕೆಯ ವ್ಯಕ್ತಿತ್ವವನ್ನು ವಿಕಾಸಗೊಳಿಸಿ ಸಬಲಳನ್ನಾಗಿಸಿದ್ದು ಪರಿಮಾಣಾತ್ಮಕವಾಗಿ ಕಡಿಮೆಯೇ ಆಗಿದೆ. ಕಾರಣ ಈ ಎಲ್ಲವುಗಳನ್ನು ಸಹ ಪಿತೃಪ್ರಧಾನತೆ ತನ್ನ ಹಂತಕ್ಕೆ ಎಳೆದುಕೊಂಡು ಕೌಟುಂಬಿಕ ಒಳಿತಿಗಾಗಿ ಬಳಸಿಕೊಂಡಿತೇ ಹೊರತು ವ್ಯಕ್ತಿಗತವಾಗಿ ಆಕೆಯನ್ನು ಬೆಳೆಸಲಿಲ್ಲ ವೆಂಬುದನ್ನು ಅಧ್ಯಯನದಲ್ಲಿ ಗ್ರಹಿಸಲಾಗಿದೆ.

* ಮಹಿಳಾ ದಶಕದ ಚಿಂತನೆಗಳ ಕಾರಣವಾಗಿ ಬಂದ ಮಹಿಳಾ ಅಭಿವೃದ್ಧಿಯ ಆಶಯ ಗಳಿಂದಾಗಿ ಲೇಖಕಿಯರು ಬರವಣಿಗೆ ಮಾತ್ರವಲ್ಲದೆ ತಮ್ಮ ವೈಯಕ್ತಿಕ ಜೀವನದಲ್ಲಿಯೂ ನೊಂದ ಮಹಿಳೆಯರಿಗೆ ಬೆಂಬಲವಾಗಿ ನಿಂತ ಘಟನೆಗಳು ದಾಖಲಾಗಿವೆ. ಹೀಗೆ ಮಹಿಳೆಯರ ಶೋಷಣೆಗೆ ವಿರುದ್ಧವಾಗಿ ನಿಂತಾಗ ಕೌಟುಂಬಿಕ, ಸಮುದಾಯಿಕ, ಸಾಮಾಜಿಕ ವಲಯಗಳಿಂದ ಎದುರಿಸಿದ ಸವಾಲುಗಳು ಈ ಅಧ್ಯಯನದ ಮೂಲಕ ಪ್ರಚುರಗೊಂಡಿವೆ. ಇದರಿಂದಾಗಿ ಲೇಖಕಿಯರ ವಾಸ್ತವ ಚಿಂತನೆಗಳಿಗೂ ಮತ್ತು ಬರಹಕ್ಕೂ ಇದ್ದ ಪೂರಕ ಸಂಬಂಧವನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

* ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪುರುಷರ ಹಿತಾಸಕ್ತಿಗಳಿಗೆ ಅಪಾಯಕಾರಿಯಲ್ಲದ ವೃತ್ತಿ ಮತ್ತು ಪ್ರವೃತ್ತಿಗಳಲ್ಲಿ ಮುಂದುವರೆಯಲು ಮಾತ್ರ ಮಹಿಳೆಯರಿಗೆ ಅವಕಾಶವಿತ್ತು. ಆದರೆ ಈವರೆಗೆ ಇತಿಹಾಸದಲ್ಲಿ ತಮಗೆ ನಿರಾಕರಿಸಲಾದ ಸ್ಥಾನಮಾನಕ್ಕೆ ಹಕ್ಕೊತ್ತಾಯಿಸುವ ಬರವಣಿಗೆ, ಅಭಿವ್ಯಕ್ತಿಗಳಿಗೆ ವ್ಯವಸ್ಥೆಯಿಂದ ತಡೆ, ನಿಯಂತ್ರಣ ಇದ್ದೇ ಇದೆ ಎನ್ನುವುದು ಲೇಖಕಿಯರ ವೈಯಕ್ತಿಕ ಬದುಕು ಮತ್ತು ಅವರು ಸೃಷ್ಟಿಸಿದ ಪಾತ್ರಗಳ ಮೂಲಕ ಅಧ್ಯಯನದಲ್ಲಿ ಗಮನಿಸಲಾಗಿದೆ.

* ಪ್ರಸ್ತುತ ಅಧ್ಯಯನ ಒಳಗೊಳ್ಳುವ ಕಥಾಸಾಹಿತ್ಯ ಮಹಿಳಾ ದಶಕದ ವಿಚಾರಗಳಿಂದ ಪ್ರಭಾವಿತವಾಗಿವೆ. ಆದರೂ ಸಹ ಕೆಲವು ಕಡೆ ಪುರುಷ ಚಿಂತನೆಯ ಮಾದರಿಗಳನ್ನು ಅನುಸರಿಸಿ, ಪುರುಷವಾದದ ಮೌಲ್ಯಗಳನ್ನು ಅವಾಹಿಸಿಕೊಂಡು ಬದುಕುವ ಪಾತ್ರಗಳು ಬರುತ್ತವೆ. ಈ ಮೂಲಕ ಲೇಖಕಿಯರ ಬರವಣಿಗೆಯ ಅಭಿವ್ಯಕ್ತಿಗೆ ಇದ್ದ ಸಾಮಾಜಿಕ

ನಿಯಂತ್ರಣದ ಪ್ರಶ್ನೆ ಸರಳವಾಗಿರಲಿಲ್ಲ ಮತ್ತು ಈ ಸ್ಥಿತಿಯನ್ನು ಮೀರುವುದು ಸವಾಲಿನ ಕೆಲಸವಾಗಿತ್ತೆಂಬುದು ತಿಳಿಯುತ್ತದೆ.

* ಪ್ರತಿಯೊಬ್ಬ ಲೇಖಕಿಯ ಭಾವಜಗತ್ತು ತನ್ನ ಸುತ್ತಲಿನ ಕೌಟುಂಬಿಕ, ಸಾಮಾಜಿಕ ಸಂಬಂಧಗಳ ನಡುವೆಯೇ ವರ್ತಿಸುತ್ತಿರುತ್ತದೆ. ಹೀಗಾಗಿ ಮಹಿಳಾ ದಶಕಕ್ಕೂ ಹಿಂದಿನ ಲೇಖಕಿಯರು ತಮಗೆ ಲಭ್ಯವಿರುವ ಪರಿಮಿತ ವ್ಯಾಪ್ತಿಯಲ್ಲಿಯೇ ಕಥಾಸಾಹಿತ್ಯದ ಪಾತ್ರಗಳನ್ನು ರೂಪಿಸಲು ಸಾಧ್ಯವಾಯಿತು. ಆದರೆ ಈ ವ್ಯಾಪ್ತಿಯನ್ನು ಮೀರಿ ಸಾರ್ವತ್ರಿಕ ವಿಚಾರಗಳ ಜೊತೆಗೆ, ಖಾಸಗಿಯಾದ ಸೂಕ್ಷ್ಮ ಮಹಿಳಾ ಸಂವೇದನೆಗಳು, ಪ್ರಗತಿಪರ ನಿಲುವುಗಳು ಪ್ರಸ್ತುತ ಅಧ್ಯಯನ ಒಳಗೊಳ್ಳುವ ಲೇಖಕಿಯರ ಪಾತ್ರಗಳಲ್ಲಿ ಕಾಣಿಸಿಕೊಂಡಿವೆ.

* ಲೇಖಕಿಯರ ಕಥಾ ಸಾಹಿತ್ಯದಲ್ಲಿ ಪ್ರತಿನಿಧೀಕರಣಗೊಂಡ ಸ್ತ್ರೀ ಮಾದರಿ ಪಾತ್ರಗಳ ಶೋಷಣೆ–ದುರಂತದ ಮೂಲ ಗಂಡು ಮಾತ್ರವಲ್ಲದೆ ಹೆಣ್ಣು ಸಹ ಆಗಿದ್ದಾಳೆ. ಇದಕ್ಕೆ ಕಾರಣ ಪಿತೃಮೂಲ ಸಂಸ್ಕೃತಿ ತನ್ನ ಸಿದ್ದಾಂತ, ಹಿತಾಸಕ್ತಿಗಳ ಚಾಲಕಶಕ್ತಿಯಾಗಿ ಹೆಣ್ಣನ್ನೇ ಬಳಸಿಕೊಳ್ಳುವ ರಾಜಕಾರಣ ತಂತ್ರವನ್ನು ಹೆಣೆಯುತ್ತದೆ. ಕಥಾಸಾಹಿತ್ಯದಲ್ಲಿ ತಾಯಿ, ಅತ್ತೆ, ಹೆಂಡತಿಯಂತಹ ಸಿದ್ಧ ಮಾದರಿಗಳು ಇದನ್ನು ಪುಷ್ಠೀಕರಿಸುವ ಸಂದರ್ಭಗಳನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

* ಅಧ್ಯಯನ ಒಳಗೊಳ್ಳುವ ಪ್ರಾತಿನಿಧಿಕ ಕಥಾಸಾಹಿತ್ಯದ ಪಾತ್ರಗಳಲ್ಲಿ ಮಾತು, ಕ್ರಿಯೆ, ಪ್ರತಿಮೆ, ಭ್ರಮೆ, ಸಾವು, ದುರಂತ, ತಿರಸ್ಕಾರ ಇತ್ಯಾದಿಗಳ ಮೂಲಕ ವ್ಯವಸ್ಥೆಯ ವಿರುದ್ಧದ ಪ್ರತಿರೋಧಗಳು ಕಾಣಿಸಿಕೊಳ್ಳುತ್ತವೆ. ಕೆಲವು ಕಡೆ ವ್ಯವಸ್ಥೆಯೊಂದಿಗೆ ರಾಜಿಯೂ ಆಗಿವೆ. ಶತಮಾನಗಳಿಂದಲೂ ಬೇರು ಬಿಟ್ಟಿರುವ ವ್ಯವಸ್ಥೆ ಮತ್ತು ಮೌಲ್ಯಗಳ ವಿರುದ್ಧದ ಹೋರಾಟ ಒಮ್ಮಿಂದೊಮ್ಮೆಲೇ ಫಲಕೊಡುವುದು ಅನಪೇಕ್ಷಿತ. ಆದರೂ ಸಹ ಹೆಣ್ಣು ತನ್ನ ಮೇಲಿನ ಅನ್ಯಾಯ–ಶೋಷಣೆಗಳ ವಿರುದ್ಧ ನಿಲ್ಲುವ ಎಚ್ಚರ, ಸಾಮರ್ಥ್ಯಗಳನ್ನು ಬೆಳೆಸಿಕೊಂಡಿರುವುದು ಅಧ್ಯಯನದಲ್ಲಿ ಪ್ರಚುರಗೊಂಡಿದೆ.

* ಲೇಖಕಿಯರ ಕಥಾಸಾಹಿತ್ಯದಲ್ಲಿನ ಸ್ತ್ರೀಪಾತ್ರಗಳ ಪ್ರತಿನಿಧೀಕರಣವನ್ನು ಅಧ್ಯಯನ ಮಾಡುವ ಮೂಲಕ ಸಾಮಾಜಿಕ ನೆಲೆಯಲ್ಲಿ ಹೆಣ್ಣು ಮತ್ತು ಆಕೆಯ ಸ್ಥಿತಿಯ ಕುರಿತಾದ ಗ್ರಹಿಕೆಯನ್ನು ಅರಿಯಲಾಗಿದೆ. ಲೇಖಕಿಯರ ಕಥಾಸಾಹಿತ್ಯ ವ್ಯಕ್ತಿಗತವಾದರೂ ಅವುಗಳ ತಾತ್ವಿಕತೆ ಮತ್ತು ಓದುಗರ ಮನೋಭಾವ ಸಮಷ್ಠಿ ನೆಲೆಯಲ್ಲಿರುತ್ತವೆ ಎಂಬುದನ್ನು ಅಧ್ಯಯನದಿಂದ ತಿಳಿಯಲು ಸಾಧ್ಯವಾಗಿದೆ.

* ಮಹಿಳಾ ದಶಕದ ಅವಧಿಯಲ್ಲಿ ಜಾರಿಯಾದ ಸ್ತ್ರೀಪರ ಕಾನೂನುಗಳು ಹಾಗೂ ಸ್ತ್ರೀ ಮಾರಾಟ, ಲೈಂಗಿಕ ಪ್ರವಾಸೋದ್ಯಮ, ವೇಶ್ಯಾವೃತ್ತಿ, ಭ್ರೂಣಹತ್ಯೆ, ವರದಕ್ಷಿಣೆ ವಿರುದ್ಧವಾಗಿ ನಡೆದ ಹೋರಾಟಗಳು ಪ್ರಾಧಾನ್ಯತೆಯನ್ನು ಪಡೆದುಕೊಂಡವು. ಪರಿಣಾಮ ಇವೇ ವಸ್ತು ವಿಚಾರಗಳು ಈ ಕಾಲಮಾನದ ಲೇಖಕಿಯರ ಕಥಾಸಾಹಿತ್ಯದ ಪಾತ್ರಗಳಲ್ಲಿ ಸುಧಾರಣಾವಾದಿ ನಿಲುವುಗಳೊಂದಿಗೆ ಕಾಣಿಸಿಕೊಂಡದ್ದನ್ನು ಅಧ್ಯಯನದಲ್ಲಿ ಗ್ರಹಿಸಲಾಗಿದೆ.

* ಧಾರ್ಮಿಕತೆಯ ಹೆಸರಿನಲ್ಲಿ ರೂಪಿಸಿರುವ 'ಜೋಗತಿ', 'ದೇವದಾಸಿ' ಪದ್ಧತಿಗಳು, 'ತಲಾಖ್', 'ಬಹುಪತ್ನಿತ್ವ'ದ ನಿಲುವುಗಳು ಹೆಣ್ಣನ್ನು ಕೌಟುಂಬಿಕ, ಲೈಂಗಿಕ, ಸಾಮಾಜಿಕವಾಗಿ ಶೋಷಿಸುವ ಮಾಧ್ಯಮಗಳಾಗಿವೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಇದರೊಟ್ಟಿಗೆ ಮಹಿಳಾ ದಶಕದಲ್ಲಿ ಈ ಪದ್ಧತಿಗಳಿಗೆ ವಿರೋಧವಾಗಿ ಜಾರಿಗೆ ಬಂದ ಕಾನೂನುಗಳು ಮತ್ತು ಅವುಗಳ ಅರಿವನ್ನು ಕಥೆಗಳ ಪಾತ್ರಗಳಲ್ಲಿ ಗುರುತಿಸಲಾಗಿದೆ.

* ಪಾಶ್ಚಾತ್ಯ ಶಿಕ್ಷಣ, ಸಂಸ್ಕೃತಿಯ ಪ್ರಭಾವ, ಉದ್ಯೋಗ, ವಿಚಾರ ಸ್ವಾತಂತ್ರ್ಯ ಹೊಂದಿದ ಪಾತ್ರಗಳು ಕಥೆಗಳಲ್ಲಿ ಪ್ರತಿನಿಧೀಕರಣಗೊಂಡಿವೆ. ಆದರೆ ಹೆಣ್ಣು ಎಷ್ಟೇ ಆಧುನಿಕತೆಯ ಪ್ರಭಾವದಲ್ಲಿ ಬದುಕಿದರೂ ಪುರುಷ ಪ್ರಧಾನತೆಯ ಚೌಕಟ್ಟಿನಿಂದ ನಿರ್ಬಂಧ ಇದ್ದೇ ಇದೆ ಎಂಬುದನ್ನು ಗ್ರಹಿಸಬಹುದಾಗಿದೆ.

* ಪುರುಷರಿಂದ ಸಮರ್ಥಿತವಾದ ಮೌಲ್ಯ ಜಗತ್ತನ್ನು ಯಥಾವತ್ತಾಗಿ ಅನಾವರಣಗೊಳಿಸುತ್ತಲೇ, ಹೆಣ್ಣು ಈ ಮೌಲ್ಯಗಳಿಗೆ ವಿಧೇಯಳಾಗಿ ನಡೆಯುವ ಅನಿವಾರ್ಯತೆ ತಂದೊಡ್ಡುವ ಪುರುಷ ರಾಜಕಾರಣಗಳನ್ನು ಲೇಖಕಿಯರು ಚಿತ್ರಿಸಿದ್ದಾರೆ. ಅದೇ ರೀತಿ ಏಕಕಾಲಕ್ಕೆ ಪುರುಷ ನಿರ್ದೇಶಿತ ಸಿದ್ಧ ಮಾದರಿಗಳೊಂದಿಗೆ ಪಿತೃಪ್ರಧಾನ ಸಂಸ್ಕೃತಿಯ ಹಿತಾಸಕ್ತಿಯನ್ನು ನಿರಾಕರಿಸುವ, ಮೌಲ್ಯಗಳನ್ನು ಪ್ರಶ್ನಿಸುವ ಪರ್ಯಾಯ ಮಾದರಿಯ ಸ್ತ್ರೀ ಪಾತ್ರಗಳನ್ನು ತಮ್ಮ ಕಥಾಸಾಹಿತ್ಯದಲ್ಲಿ ಮುಖಾಮುಖಿಯಾಗಿಸಿರುವುದು ತಿಳಿಯುತ್ತದೆ.

* ಲೇಖಕಿಯರು ತಮ್ಮ ಕಥೆಗಳಲ್ಲಿ ಹೆಣ್ಣು ನಿರ್ವಹಿಸುವ ಪಾತ್ರಗಳು ಒಂದೇ ಆದರೂ, ಆಕೆ ಎದುರಿಸುವ ಸಮಸ್ಯೆಗಳ ವಿಭಿನ್ನ ಸ್ವರೂಪಗಳನ್ನು ದಾಖಲಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅಂದರೆ ಅಧ್ಯಯನ ಒಳಗೊಳ್ಳುವ ಪ್ರಾತಿನಿಧಿಕ ಲೇಖಕಿಯರು ದಲಿತ, ಬುಡಕಟ್ಟು, ಮುಸ್ಲಿಂ ಮುಂತಾದ ಸಮುದಾಯಗಳ ಹೆಣ್ಣಿನ ಬದುಕನ್ನು ವಿಶಿಷ್ಟವಾಗಿ ನಿರೂಪಿಸಿದ್ದಾರೆ.

## ೫.೨. ಮುಂದಿನ ಅಧ್ಯಯನದ ಸಾಧ್ಯತೆಗಳು

ಪ್ರಸ್ತುತ ಅಧ್ಯಯನವು ಒಂದು ನಿರ್ದಿಷ್ಟ ಕಾಲಮಾನದ ವ್ಯಾಪ್ತಿ ಹಾಗೂ ಲೇಖಕಿಯರ ಪ್ರಾತಿನಿಧಿಕ ಕಥಾಸಾಹಿತ್ಯವನ್ನು ಆಧರಿಸಿದ್ದಾಗಿದೆ. ಹಾಗಾಗಿ ಇಲ್ಲಿ ಪ್ರತಿಪಾದಿಸಿದ ನಿಲುವುಗಳನ್ನು

ಅನುಸರಿಸಿ ಹೆಚ್ಚಿನ ಅಧ್ಯಯನಕ್ಕೆ ಪೂಕರವಾಗುವ ಸನ್ನಿವೇಶಗಳು ಕಾಣಿಸಿಕೊಳ್ಳುತ್ತವೆ. ಹಾಗಾಗಿ ಪ್ರಸ್ತುತ ಮಹಾಪ್ರಬಂಧದ ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ದಾಖಲಿಸಲಾಗಿದೆ.

* ಮಹಿಳೆಯ ಹಿತಚಿಂತನೆಯ ದೃಷ್ಟಿಯಿಂದ ಮಹಿಳಾ ದಶಕದ ಯೋಜನೆಗಳು ಉತ್ತಮವಾಗಿದ್ದರೂ ಅವುಗಳ ಕಾರ್ಯದಕ್ಷತೆಯಲ್ಲಿ ಮತ್ತಷ್ಟು ವೇಗದ ಅಗತ್ಯವಿತ್ತು. ಹಾಗಾಗಿ ೧೯೮೬ ರಿಂದ ೨೦೦೦ದ ವರೆಗೆ ಮಹಿಳಾ ದಶಕದ ಕಾರ್ಯಸೂಚಿಯನ್ನು ವಿಸ್ತರಿಸಲಾಯಿತು. ಈ ವಿಸ್ತೃತ ಅವಧಿಯನ್ನು ವ್ಯಾಪ್ತಿಯಾಗಿಸಿ ಲೇಖಕಿಯರ ಕಥಾ ಸಾಹಿತ್ಯದ ಸ್ತ್ರೀ ಪಾತ್ರ ಪ್ರತಿನಿಧೀಕರಣದ ಅಧ್ಯಯನ ಮಾಡಬಹುದಾಗಿದೆ.

* ಮಹಿಳಾ ದಶಕದ ಲೇಖಕಿಯರ ಚಿಂತನೆಗಳು ನಂತರದ ದಶಕಗಳಲ್ಲಿ ಅವರದೇ ಕಥಾ ಸಾಹಿತ್ಯದಲ್ಲಿ ಮುಂದುವರೆದಿವೆಯೇ? ಇಲ್ಲವೇ? ಅವರ ಬರವಣಿಗೆಯ ವಸ್ತು, ವಿಚಾರ, ಸ್ವರೂಪಗಳಲ್ಲಾದ ಬದಲಾವಣೆಗಳು ಹಾಗೂ ಇತಿಮಿತಿಗಳ ಅಧ್ಯಯನ ಕೈಗೊಳ್ಳಬಹುದಾಗಿದೆ.

* ಮಹಿಳಾ ದಶಕದ ಲೇಖಕಿಯರು ಮತ್ತು ಲೇಖಕರ ಕಥಾಸಾಹಿತ್ಯದ ತೌಲನಿಕ ಅಧ್ಯಯನವನ್ನು ಅಥವಾ ವ್ಯಕ್ತಿಗತವಾಗಿ ಲೇಖಕಿಯರ ಸಮಗ್ರ ಕಥಾಸಾಹಿತ್ಯದ ಅಧ್ಯಯನವನ್ನು ಸಹ ಮಾಡಬಹುದಾಗಿದೆ.

* ಮಹಿಳಾ ದಶಕಕ್ಕೆ ಪ್ರೇರಣೆಯಾದ ಮಹಿಳಾಪರ ಹೋರಾಟ, ಒತ್ತಾಸೆ, ಬದಲಾದ ಚಳುವಳಿಗಳ ಆಶಯ ಸ್ವರೂಪಗಳು ಮುಂದುವರೆದ ಬಗೆಯನ್ನು ಪ್ರಸ್ತುತ ಕಾಲಮಾನದ ಲೇಖಕಿಯರ ಸಾಹಿತ್ಯವನ್ನು ಆಧರಿಸಿ ಸ್ತ್ರೀವಾದಿ ಅಧ್ಯಯನ ಕೈಗೊಳ್ಳುವ ಸಾಧ್ಯತೆಯಿದೆ.

ಒಟ್ಟಾರೆ 'ಸ್ತ್ರೀ ಪ್ರತಿನಿಧೀಕರಣ' ಎನ್ನುವ ವಿಚಾರವೇ ತುಂಬ ಮಹತ್ವದ್ದಾಗಿದೆ. ಕಾರಣ ಹೆಣ್ಣಿನ ಅಸ್ಮಿತೆಯನ್ನು ಹುಡುಕುವ, ಪ್ರಶ್ನಿಸುವ, ದಾಖಲಿಸುವ ಪ್ರಯತ್ನ ಎಲ್ಲಾ ಕಾಲಕ್ಕೂ ಇದೆ. ಆದ್ದರಿಂದ ಈ ಕುರಿತಾದ ಸಂಶೋಧನೆಯ ಅಗತ್ಯ ಎಂದಿಗೂ ಪ್ರಸ್ತುತವಾದುದಾಗಿದೆ.

# ಪರಾಮರ್ಶನ ಗ್ರಂಥಗಳು

## ೧. ಮೂಲ ಆಕರಗಳು


೧. ಗೀತಾ ನಾಗಭೂಷಣ, ಬದುಕು, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೧

೨. ಗೀತಾ ನಾಗಭೂಷಣ, ಕ್ಯಾದಿಗಿ ಬನದಾಗ ಕಥೆಯಾಗಿ ನಿಂತವರು, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೯

೩. ಗೀತಾ ನಾಗಭೂಷಣ, ಹಸಿ ಮಾಂಸ ಮತ್ತು ಹದ್ದುಗಳು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦

೪. ಗೀತಾ ನಾಗಭೂಷಣ, ನೀಲಗಂಗಾ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦

೫. ಗೀತಾ ನಾಗಭೂಷಣ, ಮಾಪುರ ತಾಯಿ ಮಕ್ಕಳು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦

೬. ಗೀತಾ ನಾಗಭೂಷಣ, ಚಿಕ್ಕಿಯ ಹರೆಯದ ದಿನಗಳು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦

೭. ಗೀತಾ ನಾಗಭೂಷಣ, ಅವ್ವ ಮತ್ತು ಇತರ ಕಥೆಗಳು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦

೮. ಗೀತಾ ನಾಗಭೂಷಣ, ಜ್ವಲಂತ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦

೯. ಗೀತಾ ನಾಗಭೂಷಣ, ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೧೨

೧೦. ಗೀತಾ ನಾಗಭೂಷಣ, ಧುಮ್ಮಸು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೧೪

೧೧. ಗೀತಾ ನಾಗಭೂಷಣ, ಕಾಗೆ ಮುಟ್ಟಿತು, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೨

೧೨. ಲಲಿತಾ ನಾಯಕ್ ಬಿ.ಟಿ., ಹಬ್ಬ ಮತ್ತು ಬಲಿ, ಅಂಕಿತ ಪ್ರಕಾಶನ, ಬೆಂಗಳೂರು, ೧೯೯೮

೧೩. ಲಲಿತಾ ನಾಯಕ್ ಬಿ.ಟಿ., ನೆಲೆ-ಬೆಲೆ, ಕಣ್ವ ಪ್ರಕಾಶನ, ಬೆಂಗಳೂರು, ೨೦೧೦

೧೪. ಲಲಿತಾ ನಾಯಕ್ ಬಿ.ಟಿ., ಗತಿ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೧೪

೧೫. ವೀಣಾ ಶಾಂತೇಶ್ವರ, ನಡೆದದ್ದೇ ದಾರಿ, ಸುಂದರ ಪ್ರಕಾಶನ, ಧಾರವಾಡ, ೨೦೦೬

೧೬. ವೈದೇಹಿ, ಅಲೆಗಳಲ್ಲಿ ಅಂತರಂಗ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬

೧೭. ಸಾರಾ ಅಬೂಬಕ್ಕರ್, ವಜ್ರಗಳು, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೦೯

೧೮. ಸಾರಾ ಅಬೂಬಕ್ಕರ್, ಚಂದ್ರಗಿರಿ ತೀರದಲ್ಲಿ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೧೧

೧೯. ಸಾರಾ ಅಬೂಬಕ್ಕರ್, ಡಾ. ಸಾರಾ ಅಬೂಬಕ್ಕರ್ ಅವರ ಸಮಗ್ರ ಕಥೆಗಳು, ಭಾಗ-೨, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ, ಗುಲ್ಬರ್ಗಾ, ೨೦೧೧

೨೦. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಸಮಗ್ರ ಕಥೆಗಳು ಭಾಗ-೧, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೧೦

೨೧. ಸಾರಾ ಅಬೂಬಕ್ಕರ್, ಸುಳಿಯಲ್ಲಿ ಸಿಕ್ಕವರು, ಚಂದ್ರಗಿರಿ ಪ್ರಕಾಶನ, ಮಂಗಳೂರು, ೧೯೯೪

೨೨. ಸಾರಾ ಅಬೂಬಕ್ಕರ್, ಸಹನಾ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೦೨

**೨. ಅನುಷಂಗಿಕ ಆಕರಗಳು**

೧. ಅನುಪಮಾ ಎಚ್. ಎಸ್., ಸಬಿತಾ ಬನ್ನಾಡಿ (ಸಂ) ಹೆಣ್ಣು ನೋಟ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೭

೨. ಅಮರೇಶ ನುಗಡೋಣಿ(ಸಂ), ಕನ್ನಡ ಸಂಶೋಧನೆಯ ವೈಧಾನಿಕತೆಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮

೩. ಅಮೂರ್ ಜಿ.ಎಸ್. ಕಥನ ಸಾಹಿತ್ಯ: ಕಾದಂಬರಿ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೧೯೯೪

೪. ಅಮೂರ್ ಜಿ.ಎಸ್., ಕಥನ ಸಾಹಿತ್ಯ: ಸಣ್ಣಕಥೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೨

೫. ಅಶೋಕ ಟಿ.ಪಿ., ವೈದೇಹಿ ವಾಚಿಕೆ, ನುಡಿ ಪುಸ್ತಕ, ಬೆಂಗಳೂರು, ೨೦೦೯

೬. ಅಶೋಕ ಟಿ.ಪಿ., ವೈದೇಹಿ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೧೩

೭. ಅಶೋಕ ಟಿ.ಪಿ., ಕಥನ ಪ್ರೀತಿ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೧೩

೮. ಅಶೋಕ ಟಿ.ಪಿ., ಕಥನ ಕಾರಣ, ಮನೋಹರ ಗ್ರಂಥಮಾಲೆ, ಧಾರವಾಡ, ೨೦೧೪

೯. ಆಶಾದೇವಿ ಎಂ.ಎಸ್., ಸ್ತ್ರೀಮತವನುತ್ತರಿಸಲಾಗದೇ?, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬

೧೦. ಆಶಾದೇವಿ ಎಂ.ಎಸ್., ನಡುವೆ ಸುಳಿವ ಆತ್ಮ, ಅಹರ್ನಿಶಿ ಪ್ರಕಾಶನ, ಶಿವಮೊಗ್ಗ, ೨೦೧೧

೧೧. ಆಶಾದೇವಿ ಎಂ. ಎಸ್., ನಾರೀಕೇಳಾ, ಪ್ರಜಾವಾಣಿ ಪ್ರಕಾಶನ, ಬೆಂಗಳೂರು, ೨೦೧೬

೧೨. ಉಷಾ ಎಂ., ಮಹಿಳಾ ಚಳುವಳಿಗಳು ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೩. ಉಷಾ ಎಂ., ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭

೧೪. ಉಷಾ ಸ., ವೈದೇಹಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨

೧೫. ಕಲಾವತಿ ಬಿ.ಜಿ., ಜಾಹೀರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೦

೧೬. ಇಂದಿರಾ ಆರ್., ಸ್ತ್ರೀವಾದಿ ದಿಕ್ಸೂಚಿ, ಸಮತಾ ಪ್ರಕಾಶನ, ಮೈಸೂರು, ೧೯೯೫

೧೭. ಇಂದಿರಾ ಆರ್., ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೮. ಇಂದಿರಾ ಜೈ ಪ್ರಕಾಶ್, ಸ್ತ್ರೀವಾದಿ ಮನೋವಿಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೯. ಕರೀಗೌಡ ಬೀಚನಹಳ್ಳಿ, ಶತಮಾನದ ಸಣ್ಣ ಕಥೆಗಳ ಸಮೀಕ್ಷೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೧

೨೦. ಕವಿತಾ ರೈ, ಮಹಿಳೆ: ಅಸ್ತಿತ್ವ ಸಂಕಥನ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯

೨೧. ಕೇಶವ ಶರ್ಮ ಕೆ., ಸ್ತ್ರೀವಾದಿ ವಿಮರ್ಶೆ, ಚಿಂತನಕೂಟ, ಬೆಂಗಳೂರು, ೧೯೯೮

೨೨. ಕೇಶವ ಶರ್ಮ ಕೆ., ಸ್ತ್ರೀವಾದಿ ಆಖ್ಯಾನ, ನಾಗಾರ್ಜುನ ಪ್ರಿಂಟರ್ಸ್, ತರೀಕೆರೆ, ೨೦೧೦

೨೩. ಕೇಶವ ಶರ್ಮ ಕೆ., ಸ್ತ್ರೀವಾದಿ ಪರಿಕಲ್ಪನೆಗಳು, ದೇಸಿ ಪುಸ್ತಕ, ಬೆಂಗಳೂರು ೨೦೧೩

೨೪. ಗಾಯತ್ರಿ ಎನ್., ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೧

೨೫. ಗಾಯತ್ರಿ ಎನ್., ಮಹಿಳಾ ಚಳುವಳಿಯ ಮಜಲುಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

೨೬. ಗಾಯತ್ರಿ ಎನ್., ಸಂಚಲ, ಮಾಲೆ ಪ್ರಕಾಶನ, ಬೆಂಗಳೂರು, ೨೦೧೦

೨೭. ಗಾಯತ್ರಿ ಎನ್., ಕ್ಲಾರಾ ಜೆಟ್ಕಿನ್, ಚಿಂತನ ಪುಸ್ತಕ, ಬೆಂಗಳೂರು, ೨೦೧೧

೨೮. ಗಾಯತ್ರಿ ನಾವಡ, ವಿರಚನೆ, ಎನ್.ಆರ್.ಎ.ಎಂ.ಪ್ರಕಾಶನ, ಕೋಟೇಶ್ವರ ದಕ್ಷಿಣ ಕನ್ನಡ, ೧೯೯೭

೨೯. ಗಾಯತ್ರಿ ನಾವಡ, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೩

೩೦. ಗಾಯತ್ರಿ ಸ. ನ., ಮತ್ತು ಶಶಿಕಲಾ ಡಿ.ಎಸ್.(ಸಂ), ಮಹಿಳಾ ಸಾಹಿತ್ಯ ಸಮೀಕ್ಷೆ, ಸಂವಹನ, ಮೈಸೂರು, ೨೦೦೪

೩೧. ಗಿರಿಜಾ ಶಾಸ್ತ್ರಿ, ಮಾನಸಿಯ ಲೋಕ, ಉಷಾ ಪ್ರಕಾಶನ, ಮೈಸೂರು, ೨೦೧೨

೩೨. ಗೀತಾ ಕೃಷ್ಣಮೂರ್ತಿ, ಮಹಿಳಾ ಹಕ್ಕುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೩೩. ಗೀತಾಬಾಲಿ ನಾಯಕ್, ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೧

೩೪. ಗೀತಾ ಎಸ್.ಕೆ., ಮಹಿಳಾ ವಿಮೋಚನೆಯ ಹೋರಾಟಗಳ ನೂರು ವರ್ಷಗಳು, ಚಿಂತನ ಪುಸ್ತಕ, ಬೆಂಗಳೂರು, ೨೦೧೧

೩೫. ಚಂದ್ರಮತಿ ಸೋಂದಾ, ಕರ್ನಾಟಕದಲ್ಲಿ ಮಹಿಳಾ ಚಳುವಳಿಗಳು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು, ೨೦೧೧

೩೬. ಚಂದ್ರಶೇಖರ್ ಟಿ.ಆರ್., ಮಹಿಳಾ ಅಧ್ಯಯನ ಪರಿಭಾಷೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೬

೩೭. ಚಿದಾನಂದ ಮೂರ್ತಿ, ಗ್ರಾಮೀಣ, ಬಾಪ್ಕೋ ಪ್ರಕಾಶನ, ಬೆಂಗಳೂರು, ೧೯೯೭

೩೮. ಜ್ಯೋತಿ ಶಶಿಕುಮಾರ್, ಮಹಿಳಾ ಸಾಮಾಜಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೩೯. ಡೊಮೆನಿಕ್ ಡಿ., ದಮನಿತ ದನಿಗಳ ಚಿಂತನ, ಸಖಿ ಪ್ರಕಾಶನ, ಹೊಸಪೇಟೆ, ೨೦೦೭

೪೦. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ(ಸಂ), ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೪

೪೧. ದು. ಸರಸ್ವತಿ, ನೀರದಾರಿ, ಕವಿ ಪ್ರಕಾಶನ, ಕವಲಕ್ಕಿ, ೨೦೧೪

೪೨. ನಾಗಮಣಿ ಎಸ್. ರಾವ್, ಸ್ತ್ರೀ ಪಥ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨

೪೩. ನಾಗರಾಜ ಎಂ.(ಸಂ), ಮಹಿಳಾ ವಿಮರ್ಶೆ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಾಪುರ, ೨೦೧೩

೪೪. ನಾಗರಾಜ ಎಂ. (ಸಂ), ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, (ಸಂಪುಟ–೩), ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಾಪುರ, ೨೦೧೩

೪೫. ಪ್ರಧಾನ ಗುರುದತ್ತ(ಸಂ), ಗಾಯತ್ರಿ ಎನ್., ಗೀತಾ ನಾಗಭೂಷಣ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೯

೪೬. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪೭ ಪುಷ್ಪ ಎಚ್.ಎಲ್., ಸ್ತ್ರೀ ಎಂದರೆ ಅಷ್ಟೇ ಸಾಕೆ, ಯಾಜಿ ಪ್ರಕಾಶನ, ಹೊಸಪೇಟೆ, ೨೦೧೫

೪೮. ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೯

೪೯. ಮನು ಚಕ್ರವರ್ತಿ, ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೩

೫೦. ಮೀರಾ ಎಲ್. ಜಿ., ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ, ಶಕ್ತಿ ಪ್ರಿಂಟರ್ಸ್, ಬೆಂಗಳೂರು, ೨೦೦೪

೫೧. ಮೊಗಳ್ಳಿ ಗಣೇಶ್, ನಡುಗಾಲದ ಕನ್ನಡ ನಾಡು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೫೨. ಮಂಗಳ ಪ್ರಿಯದರ್ಶಿನಿ, ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೫೩. ಮಂಗಳಾ ಚಿ.ನ., ಎಚ್ಚೆತ್ತ ಹಾದಿಯಲ್ಲಿ ಮಹಿಳೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೧೧

೫೪. ಯರ್ರಿಸ್ವಾಮಿ ಈ.(ಸಂ), ಅಚಲ, ಮಹಿಳಾ ಅಧ್ಯಯನ ಮಂಡಲ, ಮೈಸೂರು, ಏಪ್ರಿಲ್–ಜೂನ್ ೨೦೧೪

೫೫. ಯರ್ರಿಸ್ವಾಮಿ ಈ., ಗ್ರಹಿಕೆ–ಮಹಿಳಾ ದೃಷ್ಟಿಕೋನದ ನೆಲೆಗಳು, ಗೀತಾಂಜಲಿ ಪ್ರಕಾಶನ, ಶಿವಮೊಗ್ಗ, ೨೦೧೦

೫೬. ಯರ್ರಿಸ್ವಾಮಿ ಈ.(ಸಂ), ಅಚಲ, ಮಹಿಳಾ ಅಧ್ಯಯನ ಮಂಡಲ, ಮೈಸೂರು, ಏಪ್ರಿಲ್–ಜೂನ್ ೨೦೧೬

೫೭. ರತ್ನಮ್ಮ ಕೆ.ಎಸ್., ಸ್ತ್ರೀಲೇಖ, ಶ್ರೀ ಕ್ಷೇತ್ರ ಪ್ರಕಾಶನ, ಮೈಸೂರು, ೨೦೦೫

೫೮. ರತ್ನಶೀಲಾ ಎಸ್. ಗುರಡ್ಡಿ, ಕನ್ನಡ ಮಹಿಳೆಯರ ಆತ್ಮಕಥೆಗಳು, ಚಿಕ್ಕಮ್ಮ ದೊಡ್ಡಮ್ಮ ಪ್ರಕಾಶನ, ಬ್ಯಾಲದಕೆರೆ, ೨೦೦೮

೫೯. ರವಿನಾಯ್ಕ ಎಂ., ಬಿ.ಟಿ.ಲಲಿತಾ ನಾಯಕ್, ಉದಯ ಭಾನು, ಉನ್ನತ ಅಧ್ಯಯನ ಕೇಂದ್ರ, ಬೆಂಗಳೂರು, ೨೦೧೩

೬೦. ರಹಮತ್ ತರೀಕೆರೆ(ಸಂ), ಸಾಹಿತ್ಯ ವಿಮರ್ಶೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨

೬೧. ರಾ.ಗೌ(ಸಂ), ಮಹಿಳಾ ಅಧ್ಯಯನದ ಆಯಾಮಗಳು, ಯಶೋಧಾ ರಾ.ಗೌ ಟ್ರಸ್ಟ್, ಮೈಸೂರು, ೨೦೦೮

೬೨. ರಾಘವೇಂದ್ರ ರಾವ್ ಎಚ್.ಎಸ್., ಕಣ್ಣ ಹನಿಗಳೆ ಕಾಣಿಕೆ, ಇಳಾ ಪ್ರಕಾಶನ, ಬೆಂಗಳೂರು, ೨೦೧೨

೬೩. ರಾಮಲಿಂಗಪ್ಪ ಬೇಗೂರು, ಮಹಿಳೆ–ಚರಿತ್ರೆ–ಪುರಾಣ, ಅಂಕಿತ ಪುಸ್ತಕ, ಬೆಂಗಳೂರು, ೨೦೧೪

೬೪. ರಾಹು(ಅನು), ಭಾರತೀಯ ಮಹಿಳಾ ವಿಮೋಚನೆಯ ಆಂದೋಲನ, ಲಡಾಯಿ ಪ್ರಕಾಶನ, ಗದಗ, ೨೦೧೩

೬೫. ವಡ್ಡೆ ಹೇಮಲತಾ(ಸಂ), ಆಧುನಿಕ ಕನ್ನಡ ಮಹಿಳಾ ಸಣ್ಣ ಕಥೆಗಳ ಅವಲೋಕನ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು, ೨೦೧೪

೬೬. ವಿಜಯಶ್ರೀ ಸಬರದ(ಸಂ), ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ(ಸಂಪುಟ–೨), ಪ್ರಸಾರಾಂಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ, ೨೦೧೩

೬೭. ವಿಜಯಾ ದಬ್ಬೆ, ನಾರಿ: ದಾರಿ–ದಿಗಂತ, ರಚನಾ ಪ್ರಕಾಶನ, ಮೈಸೂರು, ೧೯೯೨

೬೮. ವಿಠಲ ರಾವ್ ವಿ., ಗಾಯಕ್ವಾಡ್(ಅನು), ಭಾರತೀಯ ಸ್ತ್ರೀ ಜೀವನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೬೯. ವಿವೇಕ್ ರೈ ಬಿ.ಎ., ಸ್ತ್ರೀವಾದಿ ಅಧ್ಯಯನ : ವಿಧಾನವೇ? ತಿಳುವಳಿಕೆಯೇ, ಅಕ್ಕೆ ಸಿರಿ ಸಾಂಸ್ಕೃತಿಕ ಕೇಂದ್ರ, ಮಂಗಳೂರು, ೧೯೯೫

೭೦. ವೀಣಾ ಶಾಂತೇಶ್ವರ, ಇಲ್ಲಿಂದ ಮುಂದೆಲ್ಲಿಗೆ?, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೭೧. ವೀಣಾ ಶಾಂತೇಶ್ವರ, ನಡೆದದ್ದೇ ದಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧

೭೨. ವೈದೇಹಿ, ಅಲೆಗಳಲ್ಲಿ ಅಂತರಂಗ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬

೭೩. ವೈದೇಹಿ, ಮೇಜು ಮತ್ತು ಬಡಗಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೭೪. ಶಾರದ ಬಿ.ಎನ್., ಕನ್ನಡ ಪ್ರಾತಿನಿಧಿಕ ಕಾದಂಬರಿಗಳಲ್ಲಿ ವಿಧವೆ, ಸಿ.ವಿ.ಜಿ ಇಂಡಿಯಾ, ಬೆಂಗಳೂರು, ೨೦೧೧

೭೫. ಶಾಂತ ಕುಮಾರಿ ಎಲ್.ವಿ., ಗೀತಾ ನಾಗಭೂಷಣ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೧

೭೬. ಶಾಂತಾ ಇಮ್ರಾಪುರ, ನಿರ್ದಿಗಂತ, ಸಂಪುಟ–೧,೨, ಸುಂದರ ಪ್ರಕಾಶನ, ಧಾರವಾಡ, ೨೦೦೯

೭೭. ಶಿವರುದ್ರಪ್ಪ ಜಿ.ಎಸ್., ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯

೭೮. ಶಿವಾನಂದ ಎಸ್. ವಿರಕ್ತಮಠ(ಸಂ), ಹೆಣ್ಣು ಮತ್ತು ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೭೯. ಶಿವಾನಂದ ಎಸ್. ವಿರಕ್ತಮಠ, ಮಹಿಳೆ ಮತ್ತು ಧರ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೮೦. ಶ್ರೀಮತಿ ಎಚ್.ಎಸ್., ಸೇರಿಕೊಂಡ ಎಳೆಗಳು, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

೮೧. ಶ್ರೀಮತಿ ಎಚ್.ಎಸ್., ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೮೨. ಶ್ರೀಮತಿ ಎಚ್.ಎಸ್., ಹೆಣ್ಣು ಹೆಂಗಸು, ಬ್ಯಾಲದಕೆರೆ ಪ್ರಕಾಶನ, ಬ್ಯಾಲದಕೆರೆ, ಮಂಡ್ಯ ೨೦೦೪

೮೩. ಶ್ರೀಮತಿ ಎಚ್.ಎಸ್.(ಸಂ), ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೮೪. ಶ್ರೀಮತಿ ಎಚ್.ಎಸ್.(ಅನು), ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೮೫. ಶ್ರೀಮತಿ ಎಚ್.ಎಸ್., ಹೆಣ್ತನ ಎಂಬ ಕಣ್ಕಟ್ಟು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೦

೮೬. ಶ್ರೀಮತಿ ಎಚ್.ಎಸ್., ಹೆಣ್ಣು ಬರಹದ ಒಳ ಬಂಡಾಯ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೦

೮೭. ಶ್ರೀಮತಿ ಎಚ್.ಎಸ್.(ಅನು), ದಿ ಸೆಕೆಂಡ್ ಸೆಕ್ಸ್-ಕನ್ನಡ ಓದು, ಬರಹ ಪಬ್ಲಿಷಿಂಗ್ ಹೌಸ್, ೨೦೧೧

೮೮. ಶ್ರೀಮತಿ ಎಚ್.ಎಸ್., ಸ್ತ್ರೀವಾದಿ ಸಂಶೋಧನೆ ವಿಧಿ ವಿಧಾನಗಳು, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು ೨೦೧೨

೮೯. ಶ್ರೀಮತಿ ಎಚ್.ಎಸ್., ಸ್ತ್ರೀವಾದ; ತಾತ್ವಿಕತೆ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨

೯೦. ಶೈಲಜಾ ಹಿರೇಮಠ, ಪಾತರದವರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೯೧. ಶೈಲಜಾ ಹಿರೇಮಠ, ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ, ೨೦೦೩

೯೨. ಶೈಲಜಾ ಹಿರೇಮಠ(ಸಂ), ಮಹಿಳಾ ಅಧ್ಯಯನ, ಸಂಪುಟ-೮, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಜನವರಿ-ಜೂನ್,೨೦೦೯

೯೩. ಶೈಲಜಾ ಹಿರೇಮಠ(ಸಂ), ಮಹಿಳಾ ಅಧ್ಯಯನ, ಸಂಪುಟ-೧೨, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಜನವರಿ-ಜೂನ್,೨೦೧೦

೯೪. ಶೈಲಾ ಯು., ಮಹಿಳೆ ನೆಲೆ-ಬೆಲೆ, ಬೆನಕ ಪ್ರಕಾಶನ, ಫಜೀರು, ೨೦೧೦

೯೫. ಷರೀಫಾ ಕೆ., ಬಂಡಾಯ: ಮುಸ್ಲಿಂ ಸಂವೇದನೆ, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೯೬. ಷರೀಫಾ ಕೆ.(ಸಂ), ಮಹಿಳಾ ಮಾರ್ಗ- ಗೀತಾ ನಾಗಭೂಷಣ, ಲಡಾಯಿ ಪ್ರಕಾಶನ, ಗದಗ, ೨೦೧೦

೯೭. ಷರೀಫಾ ಕೆ., ಮುಸ್ಲಿಂ ಲೋಕದ ತಲ್ಲಣಗಳು, ಬಸವ ಪ್ರಕಾಶನ, ಗುಲ್ಬರ್ಗಾ, ೨೦೧೧

೯೮. ಷರೀಫಾ ಕೆ, ಮಹಿಳೆ, ಚಳುವಳಿಗಳು ಮತ್ತು ರಾಜಕಾರಣ, ಸಿರಿವರ ಪ್ರಕಾಶನ ಬೆಂಗಳೂರು, ೨೦೧೫

೯೯. ಸಬಿಹಾ(ಸಂ), ಚಂದ್ರಗಿರಿ, ಸಿರಿವರ ಪ್ರಕಾಶನ, ಬೆಂಗಳೂರು, ೨೦೦೯

೧೦೦.ಸಬಿಹಾ ಭೂಮಿಗೌಡ ಮತ್ತು ಮಲ್ಲಿಕಾ ಘಂಟಿ(ಸಂ), ಕನ್ನಡ ಸಾಹಿತ್ಯ ಮತ್ತು ಮಹಿಳೆ, ೨೦೦೬

೧೦೧.ಸಬಿಹಾ ಭೂಮಿಗೌಡ(ಸಂ), ಕನ್ನಡ ಸಾಹಿತ್ಯ ಮೀಮಾಂಸೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭

೧೦೨.ಸಬಿಹಾ, ರೋಹಿಣಿ ಬಿ.ಎಂ., ಅವಿವಾಹಿತ ಮಹಿಳೆಯರು, ಗಿರೀಶ್ ಎಂಟರ್ ಪ್ರೈಸಸ್, ಬೆಂಗಳೂರು, ೨೦೦೮

೧೦೩.ಸರಸ್ವತಿ ಚಿಮ್ಮಲಗಿ(ಸಂ), ಕಲ್ಬುರ್ಗಿಯ ಸ್ಪಂದನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೧೦೪.ಸರಸ್ವತಿ ದೇವಿ ಗೌಡರ, ಮಹಿಳಾ ಜೀವನದ ಸಮಸ್ಯೆಗಳು ಮತ್ತು ಪರಿಹಾರ, ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಧಾರವಾಡ, ೧೯೯೦

೧೦೫.ಸಾರಾ ಅಬೂಬಕ್ಕರ್, ಅನಾವರಣ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೦೧

೧೦೬.ಸಾರಾ ಅಬೂಬಕ್ಕರ್, ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭

೧೦೭.ಸಾರಾ ಅಬೂಬಕ್ಕರ್, ಚಿಂತೆ-ಚಿಂತನೆ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೧೨

೧೦೮.ಸಿದ್ಧಲಿಂಗಯ್ಯ ಜಿ.ಎಸ್.(ಸಂ), ಸಾಲುದೀಪಗಳು, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೬

೧೦೯. ಸುಜ್ಞಾನಮೂರ್ತಿ ಬಿ.(ಅನು), ನಮಗೆ ಗೋಡೆಗಳಿಲ್ಲ, ಲಡಾಯಿ ಪ್ರಕಾಶನ, ಗದಗ, ೨೦೦೯

೧೧೦. ಸುಜ್ಞಾನಮೂರ್ತಿ ಬಿ.(ಅನು), ಕುಟುಂಬ ವ್ಯವಸ್ಥೆ–ಮಾರ್ಕ್ಸ್‌ವಾದ–ಸ್ತ್ರೀವಾದ, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೧೦

೧೧೧. ಸುಮಿತ್ರಾ ಬಾಯಿ ಬಿ.ಎನ್., ವಿಚಯ, ಇಳಾ ಪ್ರಕಾಶನ, ಬೆಂಗಳೂರು, ೧೯೯೫

೧೧೨. ಸುಮಿತ್ರಾ ಬಾಯಿ ಬಿ.ಎನ್., ಬೊಗಸೆಯಲ್ಲಿ ಹೊಳೆನೀರು, ವಿಕಾಸ ಪ್ರಕಾಶನ, ಬೆಂಗಳೂರು, ೨೦೦೪

೧೧೩. ಸುಮಿತ್ರಾ ಬಾಯಿ ಬಿ.ಎನ್., ಸರಹದ್ದುಗಳ ಆಚೆ–ಈಚೆ, ಇಳಾ ಪ್ರಕಾಶನ, ಬೆಂಗಳೂರು, ೨೦೦೯

೧೧೪. ಹೇಮಲತಾ ಎಚ್ ಎಂ., ಮಹಿಳಾ ಅಧ್ಯಯನ ೨, ಡಿ.ವಿ.ಕೆ ಮೂರ್ತಿ ಪ್ರಕಾಶನ, ಬೆಂಗಳೂರು, ೨೦೧೦

೧೧೫. ಹೇಮಲತಾ ಎಚ್ ಎಂ., ಮಹಿಳಾ ಅಧ್ಯಯನ ೪, ಡಿ.ವಿ.ಕೆ ಮೂರ್ತಿ ಪ್ರಕಾಶನ, ಬೆಂಗಳೂರು, ೨೦೧೦

೧೧೬. ಹೇಮಲತಾ ಎಚ್ ಎಂ., ಮಹಿಳಾ ಅಧ್ಯಯನ ೫, ಡಿ.ವಿ.ಕೆ ಮೂರ್ತಿ ಪ್ರಕಾಶನ, ಬೆಂಗಳೂರು, ೨೦೧೦

